ಶ್ರೀರಸ್ತು.

ಶ್ರೀ ಚಾಮರಾಜೋಕ್ತಿ ವಿಲಾಸ

ಎಂಬ

# ಕನ್ನಡ ರಾಮಾಯಣ

## ಸುಂದರ ಕಾಂಡ.

ಶ್ರೀಮನ್ಮಹಾರಾಜಾಧಿರಾಜ ಚಾಮರಾಜೇಂದ್ರ ಒಡೆಯರವರ ಅಪ್ಪಣೆಯಂ ಪಡೆದು.



ಎಂ. ರುದ್ರಪ್ಪ ಆಂಡ್ ಸನ್ ಅವರುಗಳಿಂದ

ಸ್ವಕೀಯ "ಶ್ರೀಚಾಮುಂಡೇಶ್ವರಿ" ಮುದ್ರಾಕ್ಷರಶಾಲೆಯಲ್ಲಿ ಮುದ್ರಾಪಿಸಿ ಪ್ರಕಟಿಸಲ್ಪಟ್ಟಿತು

ಬೆಂಗಳೂರು:

೧೮೯೪.

ಮೊದಲನೇ ಛಾಪೆ—೧೦೦೦ ಪ್ರತಿಗಳು.



# ಪೀಠಿಕೆ.

ಈ ಭರತಖಂಡವೆಂಬ ಇಂಡ್ಯದೇಶದ ಮಧ್ಯಭಾಗದಲ್ಲೊಪ್ಪುತ್ತಿರುವ ಮಹಿಷಾಪುರವೆಂಬ ಈ ಮಹೀಸೂರು ರಾಜ್ಯದ ಪೂರ್ವದ ಅರಸರಾದ ಶ್ರೀಚಾಮರಾಜೇಂದ್ರ ಒಡೆಯರವರಿಂದ ರಚಿಸಲ್ಪಟ್ಟ "ಶ್ರೀಚಾಮರಾಜೋಕ್ತಿ ವಿಲಾಸ" ಎಂಬ ವಾಲ್ಮೀಕಿ ರಾಮಾಯಣದ ಕನ್ನಡ ಟೀಕಿನಲ್ಲಿ ಸುಂದರಕಾಂಡವನ್ನು, ಆಳುವ ಮಹಾಸ್ವಾಮಿಗಳಾದ ಶ್ರೀಚಾಮರಾಜ ಒಡೆಯರ್ ಬಹದೂರ್, ಜಿ ಸಿ ಎಸ್ ಐ, ಯವರ ಅನುಜ್ಞೆಯಿಂದ ಮುದ್ರಿಸಿ ನಮ್ಮ ಮಹಾರಾಜರವರ ಈ ವರುಷದ ಪಟ್ಟಾಭಿಷೇಕದ ವರ್ಧಂತಿಯ ಕಾಲದೊಳು ಪ್ರಕಟಿಸಲು ಕೈಗೊಡಿದ್ದಕ್ಕಾಗಿ ಮಹದಾನಂದ ಉಂಟಾಗಿ ಇಧೆ

ಕೆಲವು ವರುಷಗಳ ಕೆಳಗೆ ನಾವು "ಶ್ರೀಕೃಷ್ಣರಾಜ ವಾಣೀವಿಲಾಸ" ಎಂಬ ವ್ಯಾಸಭಾರತದ ಕನ್ನಡ ಟೀಕಿನ ಆದಿಪರ್ವವನ್ನಾರಂಭಿಸಿ, ಈಗ ಹದಿನೆಂಟು ಪರ್ವಗಳನ್ನೂ ಪ್ರಕಟಿಸಿರುತ್ತೇವೆ. ಈ ಮಹಾಪ್ರಯತ್ನ ದಲ್ಲಿ ನಮ್ಮ ಮಹಾರಾಜರವರೂ, ದಿವಾನ್ ಬಹದೂರ್ ಸರ್ ಕುಮಾರಪುರಂ ಶೇಷಾದ್ರಿ ಅಯ್ಯರ್, ಕೆ. ಸಿ ಎಸ್ ಐ, ಯವರೂ ನಮಿಗೆ ಅತ್ಯಂತ ಪ್ರೋತ್ಸಾಹನಿಧಿಗಳಾಗಿದ್ದರು, ಮತ್ತು ದರಬಾರ್ ಬಕ್ಷಿಯವರಾದ ರಾಯಬಹದೂರ್ ಅಂಬಿಲ್ ನರಸಿಂಹ ಅಯ್ಯಂಗಾರ್ಯರು, ಮುಜರಾಯಿ ಸೂಪ್ರಿಂಟೆಂಡೆಂಟರಾದ ರಾಯಬಹದೂರ್ ಆರ್ಕಾಟ ಶ್ರೀನಿವಾಸಾಚಾರ್ಯರವರು, ಇವರುಗಳು ಬಹಳ ಸಹಾಯವನ್ನು ಮಾಡಿದರು, ಈ ದೊಡ್ಡಮನುಷ್ಯರುಗಳ ಸಹಾಯವಿಲ್ಲದೆ ನಾವು ಮಹಾಭಾರತವನ್ನು ಪೂರೈಸಲು ಅಸಮರ್ಥರಾಗಿರುವೆವು! ಯಜ್ಯುಕೇಷ್ಷ ಸೆಕ್ರಿಟೇರೀಯವರಾದ ಮೆ|| ಭಾಭಾಸಾಹೇಬರವರಿಗೂ, ಅಂಡರ್ ಸೆಕ್ರಿಟೇರಿಗಳಾದ ಮೆ|| ಅನಂತಸ್ವಾಮಿರಾಯರವರಿಗೂ, ಮೆ|| ಮೈಸೂರು ನಾರಾಯಣರಾಯರವರಿಗೂ ನಾವು ಕೃತಜ್ಞರಾಗಿದ್ದೇವೆ, ಇವರುಗಳ ಪೋಷಣೆಯಿಂದಲೇ ನಾವು ಈ ಕನ್ನಡ ರಾಮಾಯಣವನ್ನು ಮುದ್ರಿಸಲು ಪ್ರಯತ್ನಿಸಿದ್ದೇವೆ.

ಕೂಜಂತಂರಾಮರಾಮೇತಿ ಮಧುರಂಮಧುರಾಕ್ಷರಂ।
ಆರುಹ್ಯಕವಿತಾಶಾಖಾಂ ವಂದೇವಾಲ್ಮೀಕಿಕೋಕಿಲಂ ||
ವಾಲ್ಮೀಕೇರ್ಮುನಿಸಿಂಹಸ್ಯ ಕವಿತಾವನಚಾರಿಣಃ।
ಶೃಣ್ವನ್ರಾಮಕಥಾನಾದಂ ಕೋನಯಾತಿಪರಾಂಗತಿಂ ||
ಯಃಪಿಬನ್ಸತತಂರಾಮ ಚರಿತಾಮೃತಸಾಗರಂ।
ಅತೃಪ್ತಸ್ತಂಮುನಿಂವಂದೆ ಪ್ರಾಚೇತಸಮಕಲ್ಮಷಂ ||

ಶ್ರೀರಾಮಾಯಣವು ಎಷ್ಟುಸಾರಿ ಪಠಿಸಿದಾಗ್ಯೂ ತೃಪ್ತಿಯುಂಟಾಗದೆ ಅಧಿಕಧಿಕ ಮನೋಲ್ಲಾಸವುಂಟುಮಾಡುವಂಥಾದ್ದಾಗಿಯೂ, ಅತಿ ಪುಣ್ಯಪ್ರದವಾದ್ದಾಗಿಯೂ ಇರುವದರಿಂದ ಇದರ ಪ್ರಚುರದಲ್ಲಿ ದೊಡ್ಡಮನುಷ್ಯರೆಲ್ಲರೂ ನಮಿಗೆ ಸಹಾಯಮಾಡುವರೆಂದು ನಂಬುತ್ತೇವೆ, ಕನ್ನಡ ರಾಮಾಯಣವು—ಬಾಲಕಾಂಡ, ಅಯೋಧ್ಯಾಕಾಂಡ, ಅರಣ್ಯಕಾಂಡ, ಕಿಷ್ಕಿಂಧಾಕಾಂಡ, ಸುಂದರಕಾಂಡ, ಯುದ್ಧಕಾಂಡ, ಎಂಬ ಆರು ಕಾಂಡಗಳುಳ್ಳದ್ದಾಗಿಧೆ, ಪ್ರತಿ ಕಾಂಡವನ್ನೂ ಪ್ರಥಮ ಛಾಪೆಯಲ್ಲಿ ಪ್ರತ್ಯೇಕವಾಗಿ ಮುದ್ರಿಸಿ ಪ್ರಕಟಿಸುವೆವು. ಮತ್ತೂ ಉತ್ತರರಾಮಾಯಣವನ್ನೂ ಪ್ರಕಟಿಸುವೆವು; ಶ್ರೀಮನ್ಮಹಾರಾಜರವರ ಅರಮನೆಯ ಸರಸ್ವತೀ ಭಂಡಾರದಲ್ಲಿರುವ ಚಿರಕಾಲದ ತಾಳೇ ಓಲೇ ಪುಸ್ತಕದಿಂದ ಪ್ರತಿ ಬರಿಸಿ ವಿದ್ವಾಂಸರುಗಳಿಂದ ತಿದ್ದಿಸಿ ಮುದ್ರಿಸುವಣವು ಬಹಳ ಶ್ರಮ ಮತ್ತು ಅರ್ಥವ್ಯ ಯಿಂದಲೇ ಸಾಧ್ಯವಾದುದರಿಂದ ಈ ಮೊದಲನೇ ಛಾಪೆಯಲ್ಲಿ ತಪ್ಪುಗಳಿಲ್ಲದಿರದು, ವಿದ್ವಾಂಸರು ಅವನ್ನು ಕ್ಷಮಿಸಿ ಸೂಚಿಸಿದಲ್ಲಿ ಅತ್ಯಂತ ಕೃತಜ್ಞತೆಯೊಡನೆ ಅಂಗೀಕರಿಸುವೆವು!

ಮೇಲೆ ಹೇಳಿರುವ ದೊಡ್ಡಮನುಷ್ಯರುಗಳಲ್ಲದೆ, ಮಹಾತ್ಮರೂ ಮತ್ತು ಜ್ಞಾನಿಗಳೂ ಆಗಿರುವಂಥಾವರೂ ನಮಿಗೆ ಇಂಥಾ ಪ್ರಯತ್ನಗಳಲ್ಲಿ ಉತ್ಸಾಹವುಂಟುಮಾಡುತಿರುವರು , ಶ್ರೀಮಚ್ಛೃಂಗೇರಿ ಜಗದ್ಗುರುಸ್ವಾಮಿಗಳು ನಮ್ಮನ್ನು ಆಶೀರ್ವಾದಪೂರ್ವಕವಾಗಿ ಸನ್ಮಾನಿಸಿರುವರು , ಮತ್ತು ಜಗತ್ಪ್ರಖ್ಯಾತರಾದ ಮೆ॥ ಅನ್ನೀ ಬೆಸ್ಸಾಂಟ್ ಎಂಬ ಆಂಗ್ಲೇಯ ಧೊರೆಸಾನಿಗಳೂ ನಮ್ಮ ಉದ್ಯೋಗವನ್ನು ಕೊಂಡಾಡಿರುವರು , ಇವರುಗಳು ನಮಿಗೆ ದಯ ಪಾಲಿಸಿದ ಲೇಖನಪತ್ರಗಳನ್ನು ಇಲ್ಲಿ ಪ್ರಕಟಿಸುತ್ತೇವೆ .

ಶ್ರೀ ಜಗದ್ಗುರು ಸಂಸ್ಥಾನ ಶೃಂಗೇರಿ ಶ್ರೀಮಠದ ಅಧಿಕಾರಸ್ಥಾನದಿಂದಾ—ಬೆಂಗಳೂರಲ್ಲಿರುವ ಎಂ ರುದ್ರಪ್ಪನವರಿಗೆ

ಶ್ರೀ ಜಗದ್ಗುರು ಮಹಾಸ್ವಾಮಿಯವರ ಸನ್ನಿಧಿಗೆ ನೀವು ಒಪ್ಪಿಸಿದ ಕನ್ನಡದಿಂದ ಟೀಕಿಸಿ ಇರುವ ಮಹಾಭಾರತದ ಪುಸ್ತಕಗಳನ್ನು ಶ್ರೀಮಹಾಸ್ವಾಮಿಗಳವರು ಪರಾಂಬರಿಸಿ ತುಂಬಾ ಆನಂದಿಸಿ ಇರುವದಲ್ಲದೆ, ಈ ಕಾಲದಲ್ಲಿ ಸಕಲ ಜನರಿಗೂ ಅನುಕೂಲವಾಗಿಯೂ ನಿರಾಯಾಸವಾಗಿ ತಿಳಕೊಳ್ಳುವದಕ್ಕೆ ಉಪಯೋಗವಾಗಿಯೂ ಮಾಡಿರತಕ್ಕ ಈ ಕಾರ್ಯವು ತುಂಬಾ ಶ್ಲಾಘನೀಯ ಮತ್ತು ಅತ್ಯಂತ ಶ್ರೇಯಸ್ಕರವಾಗಿರುತ್ತೆಂದು ಅಪ್ಪಣೆ ಕೊಡಿಸಿ ಇರುತ್ತಾರೆ

ಶ್ರೀಕಂಠೇಶ್ವರ.

---

ಮಹಾರಾಜರವರಿಗೆ ಫಲಪುಷ್ಪ ಸರಬರಾಯಕರಾದ ಮೆ॥ ಎಂ ರುದ್ರಪ್ಪನವರಿಗೆ,

ಪ್ರಿಯರಾದ ಅಯ್ಯಾ,

ನೀವು ನನಿಗೆ ಬಹುಮಾನಮಾಡಿದ ಕನ್ನಡ ಮಹಾಭಾರತಕ್ಕಾಗಿ ನನ್ನ ಹೃದಯಪೂರ್ವಕವಾದ ವಂದನೆಗಳನ್ನೂ ಬೆಲೆಹೇಳಕೂಡದಂಥಾ ಆರ್ಯಜ್ಞಾನಿಗಳ ಗ್ರಂಥಗಳನ್ನು ಅನೇಕರ ಸುಲಭಸಾಧ್ಯಕ್ಕೆ ಬರುವಹಾಗೆ ಮಾಡುವ ನಿಮ್ಮ ಕೆಲಸದಲ್ಲಿರುವ ನನ್ನ ಅಭಿಮಾನವನ್ನೂ ನಾನು ನಿಮಗೆ ತಿಳಿಯಪಡಿಸಲು ಅಪೇಕ್ಷಿಸುತ್ತೇನೆ ಇದು ಅತ್ಯಂತ ಪುಣ್ಯಪ್ರದವಾದ ಕೆಲಸವು—ಇದು ನಿಮಗೆ ಆಶೀರ್ವಾದವನ್ನು ತರುವದು,

ರಾಮಾಯಣವನ್ನು ಪ್ರಚುರಪಡಿಸುವದರಲ್ಲಿ ನಿಮಗೆ ಸಹಾಯವನ್ನು ಮಾಡುವಹಾಗೆ ಮಹಾರಾಜರವರು ಪ್ರಾರ್ಥಿಸಲ್ಪಡಬಹುದೆಂದು ನಂಬುತ್ತೇನೆ, ಯಾಕಂದರೆ ತಮ್ಮ ಪ್ರಜೆಗಳ ಆತ್ಮಾರ್ಥ ಮತ್ತು ವಿವೇಕಾರ್ಥವಾದ ಅಭಿವೃದ್ಧಿಯಲ್ಲ ವಿಚಾರಣೆಯುಂಟಾಗಿರುವದಕ್ಕಿಂತಲು ಮತ್ಯಾವದೂ ಅರಸರಿಗೆ ಅಧಿಕವಾದ ಪ್ರಕಾಶವನ್ನುಂಟುಮಾಡಲಾರದು.

ಇದರಲ್ಲಿಯೂ ಮತ್ತು ಇಂಥಾ ಭೂಷಣಪಾತ್ರವಾದ ಉದ್ಯೋಗಗಳಲ್ಲಿಯೂ ನಿಮಗೆ ಜಯವುಂಟಾಗುವದಾಗೆ ಅಪೇಕ್ಷಿಸುತ—ನಿಮಗೆ ಸದ್ಭಾವವುಳ್ಳ,

ಅನ್ನೀ ಬೆಸ್ಸಾಂಟ್.

---

ಈ ಸುಂದರಕಾಂಡವನ್ನು ಪರಿಶೋಧಿಸುವುದರಲ್ಲಿಯೂ ಪ್ರೂಫ್‌ನಲ್ಲಿ ತಪ್ಪುತಿದ್ದುವದರಲ್ಲಿಯೂ ನಮಿಗೆ ಮ॥ ಕೋಲಾರದ ರಾಮಾಶಾಸ್ತ್ರಿಗಳೂ ಚಿಕ್ಕಮಗಳೂರ್ ಗವರ್ನಮೆಂಟ್ ಪಾಠಶಾಲೆಯ ಪಂಡಿತರಾದ ಮ॥ ರಾಘವೇಂದ್ರಾಚಾರ್ಯರೂ ಬಹಳವಾಗಿ ಸಹಾಯಮಾಡಿರುತ್ತಾರೆ

ಶ್ರೀಚಾಮರಾಜ ಪಟ್ಟಾಭಿಷೇಕ<br>ವರ್ಧಂತಿ, ೧೯೧೪, ಬೆಂಗಳೂರು

ಎಂ ರುದ್ರಪ್ಪ ಅಂಡ್ ಸನ್,<br>ಪ್ರೊಪ್ರೈಟರ್ಸ, ಶ್ರೀಚಾಮುಂಡೇಶ್ವರೀ ಪ್ರೆಸ,<br>ಲಾಲ್‌ಬಾಗ್ ರೋಡ್, ಬೆಂಗಳೂರು.

# ವಿಷಯ ಸೂಚಿಕೆ.



ಶ್ರೀ ಪರಬ್ರಹ್ಮಣಾಂಗೀಕೃತಃ । ನಾರದಮುನಿಪ್ರೇರಿತ ವಾಲ್ಮೀಕಿನಾಕೃತಃ । ಮಧುರಪದಸಂದರ್ಭಗರ್ಭಿತ ಭಾರತೀಭರಿತ ಶ್ರೀರಘುವೀರ ಕಥಾನಿಬಂಧನೋಯಂಗ್ರಂಥಃ । ವಿಜಯತೇತರಾಂ ॥

ಶ್ರೀ ಚಾಮರಾಜೋಕ್ತಿವಿಲಾಸ ಎಂಬ

# ಕನ್ನಡ ರಾಮಾಯಣ.

## ಸುಂದರ ಕಾಂಡ.

### ೧ನೇ ಅಧ್ಯಾಯ.

### ಹನುಮಂತನು ಸಮುದ್ರವನ್ನು ದಾಟಿದ್ದು.

ಅನಂತರದಲ್ಲಿ ವಾಲ್ಮೀಕಿ ಮಹಾಮುನಿಯು ಸೀತಾಪುತ್ರರನ್ನು ಕುರಿತು—ಎಲೈ ಕುಶಲವರೇ ಕೇಳೀ: ಆ ಬಳಿಕ ಹನುಮಂತನು ಅಂತರಿಕ್ಷಮಾರ್ಗದಲ್ಲಿ ರಾವಣಾಸುರನು ಕೊಂಡುಹೋದಂಥಾ ಸೀತಾದೇವಿಯಿರುವ ಸ್ಥಳವನ್ನು ಕಂಡು ಬರಬೇಕೆಂಬ ಬುದ್ಧಿಯಿಂದ ಮಹೇಂದ್ರಪರ್ವತವನ್ನೇರಿ ಸಮುದ್ರವನ್ನು ದಾಟಲು ಯತ್ನವನ್ನು ಮಾಡಿ ಹೆಗ್ಗತ್ತನ್ನೂ ಶಿರಸ್ಸನ್ನೂ ಮೇಲಕ್ಕೆ ನೆಗಹಿಕೊಂಡು "ಕಟಕಟಾ! ಲೋಕದಲ್ಲಿ ಈ ಸಮುದ್ರವನ್ನು ದಾಟುವವರುಂಟೇ! ಆದರೂ ಅಸಾಧ್ಯವಾದ ಈ ಕಾರ್ಯವನ್ನು ಸಾಧ್ಯವಾಗಿ ಮಾಡುತ್ತೇನೆ!" ಎಂದು ಅತಿಹರ್ಷದಿಂದ ಎಳಗರಿಕೆಗಳುಳ್ಳ ಭೂಮಿಯಲ್ಲಿ ತನ್ನ ಇಚ್ಛೆಯಿಂದ ಸಂಚರಿಸುವ ವೃಷಭರಾಜನಂತೆ ಬಪ್ಪುತ ವೈಡೂರ್ಯ ರತ್ನಕಾಂತಿಯುಳ್ಳ ಆ ಮಹೇಂದ್ರಪರ್ವತದ ಕೋಡುಗಲ್ಲುಗಳಲ್ಲಿ ಸಂಚರಿಸುತ ಪಾದಗತಿಯಿಂದ ಸಮಸ್ತ ವೃಕ್ಷಗಳನ್ನೂ ಮುರಿದುಹಾಕುತ ಬಿಳಿದು ಕರಿದು ಕೆಂಪು ಪಚ್ಚೆ ಪಳದಿ ಮೊದಲಾದ ನಾನಾವರ್ಣಗಳಾದ ಧಾತುಗಳಿಂದ ಅಲಂಕರಿಸಲ್ಪಟ್ಟು ಕಾಮರೂಪಿಗಳಾದ ದೇವತಾವಿಶೇಷಗಳಿಂದಲೂ ಯಕ್ಷಕಿನ್ನರ ಗಂಧರ್ವಾದಿಗಳಿಂದಲೂ ಸೇವಿ

ಸಲ್ಪಟ್ಟ ಆ ಪರ್ವತಪ್ರದೇಶದಲ್ಲಿ ಪುಷ್ಪಿತವಾದ ತಾವರೆಯ ಕೊಳದ ಮಧ್ಯಗಲ್ಲಿರುವ ಮದ್ದಾನೆಯಂತೆ ಒಪ್ಪುತ್ತಿದ್ದನು ! ಆಮೇಲೆ ಗಂಭೀರಚೇಷ್ಟೆಯಿಂದ ನಾನಾದಿಕ್ಕುಗಳನ್ನೂ ನೋಡಿ ಸಮುದ್ರರಾಜನಿಗೂ ಬ್ರಹ್ಮದೇವನಿಗೂ ಸೂರ್ಯನಿಗೂ ದೇವೇಂದ್ರನಿಗೂ ಪೃಥಿವ್ಯಾದಿ ಪಂಚಮಹಾಭೂತಗಳಿಗೂ ತನ್ನ ತಂದೆಯಾದ ವಾಯುದೇವನಿಗೂ ಕೈಮುಗಿದು ನಮಸ್ಕರಿಸಿ ಮೂಡಲುಮುಖವಾಗಿ ನಿಂತು ಸಮುದ್ರವನ್ನು ದಾಟುವದಕ್ಕೆ ನಿಶ್ಚಯಿಸಿ ಶ್ರೀರಾಮನ ಕಾರ್ಯಸಿದ್ಧಿಗೋಸ್ಕರ ಹುಣ್ಣಿಮೆಯಲ್ಲಿ ಸಮುದ್ರವು ಉಬ್ಬುವಂತೆ ಉಬ್ಬಿ ಶರೀರವನ್ನು ಬೆಳೆಸಿ ಅಪರಿಮಿತವಾದ ಶರೀರಪ್ರಮಾಣವುಳ್ಳವನಾಗಿ ತನ್ನ ಹಸ್ತಪಾದಗಳಿಂದ ಮಹೇಂದ್ರಪರ್ವತವನ್ನೂರಿ ನಿಂತನು ಆಗ ಆತನ ಭಾರವನ್ನು ತಾಳಲಾರದೆ ಆ ಪರ್ವತವು ಚಲಿಸುತ ಮರಗಳಿಂದ ಉದುರುವ ಪುಷ್ಪಗಳಿಂದ ಪುಷ್ಪಮಯವಾಗಿ ಒಪ್ಪುತಿತ್ತು ! ಮತ್ತು ಹನುಮಂತನ ಹಸ್ತಪಾದಗಳ ಬಲುಮೆಯನ್ನು ತಾಳಲಾರದೆ ಮಧ್ಯಪ್ರದೇಶದಲ್ಲಿ ಅಲ್ಲಲ್ಲಿ ಒಡೆಯುವದರಿಂದ ಕೆಂಪಾದ ಗೈರಿಕಾದಿ ಧಾತುಗಳ ರೇಖೆಗಳೂ ಅದರ ಸುತ್ತಲು ಅಲ್ಲಲ್ಲಿ ಒಡೆಯುವದರಿಂದ ಕರಿಧಾತುಗಳ ರೇಖೆಗಳೂ ಪ್ರಕಟವಾಗಲು ಹೊಗೆಯಿಂದ ಬಳಸಲ್ಪಟ್ಟ ಯಜ್ಞಪುರುಷನಂತೆ ಒಪ್ಪುತಿತ್ತು ! ಈ ಮರ್ಯಾದೆಯಲ್ಲಿ ಆ ಪರ್ವತವು ಒಡೆಯುವದರಿಂದ ಅದರ ತಪ್ಪಲುಗಳಲ್ಲಿಯೂ ಗುಹೆಗಳಲ್ಲಿಯೂ ಸುಖಿಸಿಕೊಂಡಿದ್ದ ಸಿಂಹಶಾರ್ದೂಲಾದಿ ಮೃಗಗಳೂ ಉತ್ತಮವಾದ ಪಕ್ಷಿಜಾತಿಗಳು ಮೊದಲಾದ ಸಕಲ ಪ್ರಾಣಿಜಾಲಗಳೂ ಭಯಪಟ್ಟು ಕಂಗೆಟ್ಟು ಹೀನಸ್ವರದಿಂದ ಕೂಗುತಿದ್ದವು ! ಆ ಪರ್ವತವು ಒಡೆದು ಬಿರಿಯುವ ಛಟಛಟತ್ಕಾರವೂ ಸಿಂಹಗಳ ಗರ್ಜನೆಯ ಧ್ವನಿಯೂ ನವಿಲು ಮೊದಲಾದ ಪಕ್ಷಿಗಳ ಕೇಂಕಾರಧ್ವನಿಗಳೂ ಸಮಸ್ತ ಭೂಮಂಡಲವನ್ನೂ ನಾನಾದಿಕ್ಕುಗಳನ್ನೂ ವ್ಯಾಪಿಸಿದವು ! ಅಲ್ಲಿದ್ದ ಮಹತ್ತಾದ ಗುಹೆಗಳನ್ನು ಸೇರಿದ್ದ ಸರ್ಪಗಳು ಹೆಡೆಗಳನ್ನೆತ್ತಿಕೊಂಡು ನಿಲ್ಲಲಾರದೆ ಭೂಮಿಯನ್ನಪ್ಪಳಿಸಿ ಕೋಪಾತಿಶಯದಿಂದ ಅಲ್ಲಿದ್ದ ಶಿಲೆಗಳನ್ನು ಕಚ್ಚಿ ವಿಷಜ್ವಾಲೆಗಳನ್ನುಗುಳುತಿದ್ದವು ! ಹಾಗೆ ಕೋಪಯುಕ್ತಗಳಾದ ಆ ಸರ್ಪಗಳ ವಿಷಜ್ವಾಲೆಯಿಂದ ದಹಿಸಲ್ಪಟ್ಟ ಶಿಲೆಗಳು ಉರಿದು ಅನೇಕ ದಾರಿಗಳಾಗಿ ಒಡೆಯುತ್ತಿರಲು ಆ ಪರ್ವತದಲ್ಲಿದ್ದ ವಿಷಹರವಾದ ದಿವ್ಯೌಷಧಿಗಳು ಆ ವಿಷವನ್ನು ತಪ್ಪಿಸುವದಕ್ಕೆ ಸಮರ್ಥಗಳಲ್ಲದೇ ಹೋದವು ! ಕೆಲವು ಸರ್ಪಗಳು ಚೇತರಿಸಿಕೊಂಡು ನಿಲ್ಲಲಾರದೆ ಆ ಪರ್ವತದ ಕೋಡುಗಲ್ಲುಗಳಿಂದ ಕೆಳಕ್ಕೆ ಬಿದ್ದವು ! ಪಲ್ಲವಿತವಾಗಿ ಕೋರಕಿತವಾಗಿ ಪುಷ್ಪಿತವಾಗಿ ಫಲಿತವಾದ ಮರಗಳು ಕೆಡಹಿಹಾಕಲ್ಪಟ್ಟಂತೆ ತಮ್ಮ ತಮ್ಮ ಚಿಗುರು ಮೊಗರು ಮೊಗ್ಗು ಪುಷ್ಪ ಫಲಗಳೊಡನೆ ಮುರಿದು ದಿಕ್ಕುದಿಕ್ಕುಗಳಲ್ಲಿ ಬಿದ್ದವು ! ಅದರಿಂದ ಆ ಪರ್ವತವು ಪುಷ್ಪಿತವಾಗಿ ಪುಷ್ಪಮಯವಾಗಿ ಅನೇಕ ಪರಿಮಳಯುಕ್ತವಾಗಿತ್ತು ! ಆ ಪರ್ವತದಲ್ಲಿದ್ದ ತಾಳವೃಕ್ಷಗಳಿಂದ ಇಟ್ಟಣಿಸಿದ್ದ ಮನೋಹರವಾದ ಕಲ್ಲರೆಗಳು ಪ್ರಕಾಶಮಾನವಾಗಿ ಕಾಣಿಸುತ್ತಿದ್ದವು ! ಮತ್ತು ಅಲ್ಲಲ್ಲಿದ್ದ ಶ್ರೀಗಂಧದ ವೃಕ್ಷಗಳು ನಾನಾವರ್ಣಗಳಾದ ಧಾತುಗಳೊಡನೆ ಅಗ್ನಿಜ್ವಾಲೆಯಂತೆ ಪ್ರಕಾಶಿಸುತ್ತಿರಲಾಗಿ ಆ ಪರ್ವತದಲ್ಲಿದ್ದ ತಪಸ್ವಿಗಳು ಪರ್ವತವು ಒಡೆಯುತ್ತಿದೆಯೆಂದು ಬೆದರಿ ಓಡುತಿದ್ದರು ! ವಿದ್ಯಾಧರರು ತಮ್ಮ ಸ್ತ್ರೀಯರೊಡನೆ ಅಂತರಿಕ್ಷಮಾರ್ಗವಿಡಿದು ಹೋಗುತಿದ್ದರು ! ಅಪ್ಸರಸ್ತ್ರೀಯರು ತಮ್ಮ ತಮ್ಮ ಸುವರ್ಣದ ಬಟ್ಟಲುಗಳನ್ನೂ ಸುವರ್ಣಮಯವಾದ ಭೋಜನಪಾತ್ರೆಗಳನ್ನೂ ಅನರ್ಘ್ಯವಾದ ಚಿನ್ನದ ಗುಂಡುಗಳನ್ನೂ ಭಕ್ಷ್ಯ ಭೋಜ್ಯ ಲೇಹ್ಯಾದಿ ವಸ್ತುಗಳನ್ನೂ ಬಿಟ್ಟು ಸ್ವರ್ಗಲೋಕಕ್ಕೆ ತೊಲಗುತಿದ್ದರು ! ರತ್ನಕಾಂತಿಯಂತ ಕುಂಡಲಗಳುಳ್ಳ ತಾವರೆಪುಷ್ಪಗಳಂತೆ ಕಣ್ಣುಗಳುಳ್ಳ ಗಂಧರ್ವರು ತಮ್ಮ ಹರಿಗೆ ಕತ್ತಿಗಳನ್ನು ಬಿಟ್ಟು ಮದಿಸಿದ ಸ್ತ್ರೀಯರು ತಮ್ಮ ಕಂಠಾಭರಣಗಳು ಬಾಹುಪುರಿ ತೋಳಬಳೆ ಕಾಲಂದುಗೆ ಕಡಗ ಮೊದಲಾದ ದಿವ್ಯಾಭರಣಗಳನ್ನೂ ದಿವ್ಯವಾದ ಅನುಲೇಪನಗಳನ್ನೂ ಬಿಟ್ಟು ಸಂಗಡ ಬರಲು ತಮ್ಮ ಲೋಕಗಳಿಗೆ ಹೋಗುತಿದ್ದರು !

ಈ ಮರ್ಯಾದೆಯಲ್ಲಿ ಮಹೇಂದ್ರ ಪರ್ವತದಿಂದ ಹೋದಂಥಾ ದೇವತೆಗಳೂ ಋಷಿಗಳೂ ತಮ್ಮ ಸ್ತ್ರೀಯರಸಮೇತರಾಗಿ ಅಂತರಿಕ್ಷಮಾರ್ಗದಲ್ಲಿ ನಿಂತುಕೊಂಡು ಆ ಪರ್ವತವನ್ನು ನೋಡಿ “ ಕಟಕಟಾ ! ಈ ಪರ್ವತಕ್ಕೂ ವಿಂಧ್ಯಪರ್ವತಕ್ಕೆ ಬಂದ ಅವಸ್ಥೆ ಬಂತಲ್ಲಾ ! ” ಎಂದು ಆಶ್ಚರ್ಯಪಡುತ ಅಲ್ಲಲ್ಲಿ ಒಟ್ಟುಗೂಡಿಕೊಂಡು ನೋಡುತಿದ್ದರು , ಋಷಿಗಳು ಸಿದ್ಧರು ಚಾರಣರು ಮೊದಲಾದ ದೇವತೆಗಳು ಅಂತರಿಕ್ಷಮಾರ್ಗದಲ್ಲಿ ಆ ಸಮುದ್ರವನ್ನು ದಾಟಿ

ಹೋಗುವುದಾಗಿ ಯಾರಿಗೂ ಸಾಧ್ಯವಲ್ಲದ ಕಾರ್ಯವನ್ನು ಕೈಕೊಂಡ ಹನುಮಂತನ ವೃತ್ತಾಂತವೇನೆಂದು ನುಡಿಯುತ್ತಿರಲು ಅವರ ಸ್ತ್ರೀಯರು ಆ ಮಾತುಗಳನ್ನು ಕೇಳಿ ಆ ಪರ್ವತಾಗ್ರದಲ್ಲಿದ್ದ ಅಪರಿಮಿತವಾದ ಪರಾಕ್ರಮವುಳ್ಳ ಹನುಮಂತನನ್ನು ನೋಡುತಿದ್ದರು; ಆ ಸಮಯದಲ್ಲಿ ಮಹಾಮೇರುಪರ್ವತಕ್ಕೆ ಸಮಾನವಾದ ಶರೀರವುಳ್ಳ ಹನುಮಂತನು ಆ ಪರ್ವತಾಗ್ರದಲ್ಲಿ ನಿಂತುಕೊಂಡು ಮೈಗೊಡಹಿ ಪರ್ವತಾಗ್ರದಲ್ಲಿ ಪ್ರಳಯಕಾಲದ ಭೈರವನಂತೆ ತಾಳಿಂದ ತುದಿಯಪರ್ಯಂತ ರೋಮಗಳಿಂದ ಪರಿಪೂರ್ಣವಾದ ತನ್ನ ಬಾಲವನ್ನು ಕುಂಡಲಾಕಾರವಾಗಿ ಸೆಳೆಯಲು ಅದು ಗರುಡನಿಂದ ಸೆಡೆಯಲ್ಪಟ್ಟ ಸರ್ಪನಂತೆ ಒಪ್ಪುತಿತ್ತು! ಆಮೇಲೆ ದೊಡ್ಡ ಲಾಳವಿಂಡಿಗೆಯ ಮರ್ಯಾದೆಯಲ್ಲಿದ್ದ ಭುಜಗಳಿಂದ ಬೆಟ್ಟಗಳನ್ನು ಘಟ್ಟಿಯಾಗಿ ಊರಿ ಮೊಳಕಾಲುಗಳ ಮುಡಿಗೆ ಆನಿಸಿಕೊಂಡು ಮೊಳಕೈಯ ಸಂದುಗಳನ್ನು ಸಡಿಲವ ಮಾಡಿಕೊಂಡು ಹೆಗ್ಗತ್ತನ್ನು ಮೇಲಕ್ಕೆ ನೆಗಹಿಕೊಂಡು ತನ್ನ ಸಮಸ್ತವಾದ ಶರೀರ ಬಲವನ್ನೂ ಘಟ್ಟಿಯಾಗಿ ನಿಲ್ಲಿಸಿಕೊಂಡು ಪ್ರಾಣಗಳನ್ನು ಎದೆಯಲ್ಲಿ ತಡಮುಕೊಂಡು ತನ್ನನ್ನು ದೂರದಲ್ಲಿ ನೋಡುತ್ತಿರುವದಲ್ಲದೆ ಸಮೀಪದಲ್ಲಿ ಬರಬಾರದೆಂದು ಮಿಕ್ಕ ಕಪಿನಾಯಕರಿಗೆ ಹೇಳಿ ಅಂತರಿಕ್ಷಮಾರ್ಗವನ್ನು ನೋಡುತ ತನ್ನ ಪಾದಾಗ್ರಗಳಿಂದ ದೃಢವಾಗಿ ಭೂಮಿಯನ್ನು ಒತ್ತರಿಸಿಕೊಂಡು ಅಂತರಿಕ್ಷಮಾರ್ಗವ ನೆಗೆದು ಹೋಗುವಾಗ ಆ ಕಪಿನಾಯಕರನ್ನು ನೋಡಿ “ ಎಲೈ ಕಪಿನಾಯಕರಿರಾ ಕೇಳೀ: ಶ್ರೀರಾಮನಿಂದ ಪ್ರಯೋಗಿಸಲ್ಪಟ್ಟ ಬಾಣವು ಯಾವಮರ್ಯಾದೆಯಲ್ಲಿ ವಾಯುವೇಗದಿಂದ ಹೋಗುವದೋ ಆ ಮರ್ಯಾದೆಯಲ್ಲಿಯೇ ನಾನು ಸಮುದ್ರವನ್ನು ದಾಟಿ ರಾವಣಾಸುರನಿರುವ ಲಂಕಾಪಟ್ಟಣಕ್ಕೆ ಹೋಗುತ್ತೇನೆ, ಅಲ್ಲಿ ಸೀತಾದೇವಿಯನ್ನು ಕಾಣದಿದ್ದರೆ ಇಂಥಾ ವೇಗದಿಂದಲೇ ಸ್ವರ್ಗಲೋಕಕ್ಕೆ ಹೋಗುತ್ತೇನೆ, ಅಲ್ಲಿಯೂ ಆ ದೇವಿಯನ್ನು ಕಾಣದಿದ್ದರೆ ಆ ರಾವಣನನ್ನು ಹೆಡಕಟ್ಟುಕಟ್ಟಿ ಹಿಡಿತರುತ್ತೇನೆ; ಯಾವಪ್ರಕಾರದಲ್ಲಿಯಾದರೂ ಸೀತಾದೇವಿಯನ್ನು ಹುಡುಕಿ ಕಂಡು ಕಾರ್ಯಸಾಧನಮಾಡಿಕೊಂಡು ಬರುತ್ತೇನೆ; ಇಲ್ಲವೇ ರಾವಣನಸಹಿತವಾಗಿ ಆ ಲಂಕಾಪುರಿಯನ್ನೇ ಕಿತ್ತುಕೊಂಡು ಬರುತ್ತೇನೆ ” ಅಂದನು.

ಈ ಪ್ರಕಾರವಾಗಿ ಹನುಮಂತನು ಅಂಗದನು ಮೊದಲಾದ ಕಪಿನಾಯಕರಕೂಡೆ ಹೇಳಿ ಮನಸ್ಸಿನಲ್ಲಿ ಶಂಕೆಯಿಲ್ಲದೆ ತಾನೇ ಗರುತ್ಮಂತನೆಂದು ಭಾವಿಸಿಕೊಂಡು ಅಂತರಿಕ್ಷಮಾರ್ಗಕ್ಕೆ ನೆಗೆಯುತಿದ್ದನು! ಆ ಸಮಯದಲ್ಲಿ ಆತನ ಜಂಘೆಗಳಿಂದ ಅಲ್ಲಿದ್ದ ಮರಗಳು ಬೇರುಸಹಿತವಾಗಿ ಕೀಳಲ್ಪಟ್ಟು ಪುಷ್ಪಫಲಸಹಿತವಾಗಿ ಆತನ ಜಂಘೆಗಳಗೂಡಿ ಅಂತರಿಕ್ಷಮಾರ್ಗದಲ್ಲಿ ಕೆಲವುದೂರ ಹೋಗಿ ಇಷ್ಟಬಂಧುಗಳಬಳಿಗಳುಹಿದ ಬಂಧುಗಳು ತಿರುಗುವಂತೆ ಅಲ್ಲಲ್ಲಿ ಬೀಳುತಿದ್ದವು! ಕೆಲವು ಪುಷ್ಪಫಲಸಹಿತವಾದ ದೊಡ್ಡ ಮರಗಳು ಅರಸಿನಕೂಡೆ ಸೇನೆ ನಡೆಯುವಂತೆ ಆತನ ಜಂಘೆಗಳ ಗಾಳಿಗಳಿಂದ ಆತನಕೂಡೆ ಹೋಗಲಾಗಿ ಹನುಮಂತನು ಅನೇಕ ವೃಕ್ಷಗಳುಳ್ಳ ಪರ್ವತವೋ ಎಂಬಂತೆ ಅತ್ಯದ್ಭುತವಾಗಿ ತೋರುತಿದ್ದನು! ಅತಿ ತೂಕವಾದ ಮರಗಳು ಮಹೇಂದ್ರಪರ್ವತದಿಂದ ಕಂಗೆಟ್ಟು ಓಡಿಬಂದು ಸಮುದ್ರದಲ್ಲಿದ್ದ ಪರ್ವತಗಳೋಪಾದಿಯಲ್ಲಿ ಮುಳುಗುತಿದ್ದವು! ಹೀಗೆ ವಾಯುವೇಗದಿಂದ ಹೋಗುತ ವೃಕ್ಷಗಳಿಂದ ಉದುರಿದ ಪುಷ್ಪಗಳಿಂದ ಕವಿಚಲ್ಪಟ್ಟಂಥಾ ಹನುಮಂತನು ಮಿಂಚುಬುಳುಗಳಿಂದ ಇಟ್ಟಣಿಸಿರುವ ಪರ್ವತದಂತೆ ಒಪ್ಪುತಿದ್ದನು! ಆ ಮಾರ್ಗದಲ್ಲಿ ಬಿದ್ದಂಥಾ ವೃಕ್ಷಗಳ ಪುಷ್ಪಗಳು ಬಂಧುಗಳಬಳಿಗಳುಹಿ ಬಂದು ರೋದನವಮಾಡುತಿದ್ದ ಪ್ರಿಯಬಂಧುಗಳಂತೆ ಒಪ್ಪುತಿದ್ದವು! ಹನುಮಂತನ ಮೊಣಕಾಲುಗಳ ವೇಗದಿಂದುಂಟಾದ ಘಾಳಿಗೊಂಡು ಹೋಗುತಿದ್ದ ವೃಕ್ಷಗಳದೆಸೆಯಿಂದ ಬಿದ್ದ ಪುಷ್ಪಗಳಿಂದ ಪರಿಪೂರ್ಣವಾದ ಆ ಸಮುದ್ರವು ನಕ್ಷತ್ರದಿಂದ ಪರಿಪೂರ್ಣವಾದ ಆಕಾಶದಂತೆ ಒಪ್ಪುತಿತ್ತು! ಆತನ ಹಿಂದುಗೊಂಡು ಹೋಗುತಿದ್ದ ವೃಕ್ಷಗಳಿಂದ ಉದುರಿದ ನಾನಾವರ್ಣವಾದ ಪುಷ್ಪಗಳಿಂದ ಪರಿಪೂರ್ಣವಾದ ಹನುಮಂತನ ಶರೀರವು ಮಿಂಚಿನೊಡನೆ ಕೂಡಿದ ಮೇಘಸಮೂಹದಂತೆ ಒಪ್ಪುತಿತ್ತು! ಅಂತರಿಕ್ಷಮಾರ್ಗದಲ್ಲಿ ನೀಡಿದ ಹನುಮಂತನ ಭುಜಗಳು ಪರ್ವತಾಗ್ರಗಳಿಂದ ಹೊರಟು ಐದು ಹೆಡೆಗಳುಳ್ಳ ಸರ್ಪಗಳೋ ಎಂಬಂತೆ ಒಪ್ಪುತಿದ್ದವು! ಈ ಮರ್ಯಾದೆಯಲ್ಲಿ ಮಹೇಂದ್ರಪರ್ವತದಿಂದ ಲಂಘಿಸಿ ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟಿ ಹೋಗುತಿದ್ದ ಹನುಮಂತನು ಸಮುದ್ರವನ್ನು ಮುಂದೆ ನುಂಗಿ ಆಮೇಲೆ

ಆಕಾಶವನ್ನು ನುಂಗಲಿಚ್ಛೆಯುಳ್ಳವನಾಗಿ ಹೋಗುತಿದ್ದಾನೋ ಎಂಬಂತೆ ಕಾಣಿಸುತಿದ್ದನು ! ಮಿಂಚಿನ ಕಾಂತಿಯಂತೆ ಹೊಳೆಯುತಿದ್ದ ಆತನ ಕಣ್ಣುಗಳು ಪರ್ವತಾಗ್ರದಲ್ಲಿರುವ ಯಜ್ಞಪುರುಷನ ಜ್ವಾಲೆಯಂತೆ ಒಪ್ಪುತಿದ್ದವು ! ಅನೇಕ ಕಾಂತಿಯುಳ್ಳ ಆ ಕಣ್ಣುಗಳು ಒಂದೇ ವೇಳೆಯಲ್ಲಿ ಉದಯವಾದ ಚಂದ್ರಸೂರ್ಯರಂತೆ ಹೊಳೆಯುತಿದ್ದವು ! ಆತನ ಕೆಂಪಾದ ಮುಖವು ಕೆಂಪಾದ ಮುಗಿಲಿನಿಂದ ಸಂಧ್ಯಾಕಾಲದಲ್ಲಿ ಒಪ್ಪುವ ಸೂರ್ಯಮಂಡಲದಂತೆ ಒಪ್ಪುತಿತ್ತು ! ಅಂತರಿಕ್ಷಮಾರ್ಗದಲ್ಲಿ ನೆಗೆದು ಹೋಗುತಿದ್ದ ಆತನ ಬಾಲವು ಅಂತರಿಕ್ಷಮಾರ್ಗದಲ್ಲಿ ನೆಗಹಿದ ಇಂದ್ರಧ್ವಜದಂತೆ ಒಪ್ಪುತಿತ್ತು ! ಬಿಳುಪಾದ ಕೋರೆದಾಡೆಗಳುಳ್ಳ ಹನುಮಂತನು ಸುತ್ತಿಕೊಂಡಿದ್ದ ಬಾಲದಿಂದ ಪರಿವೇಷಕಟ್ಟಿದ ಸೂರ್ಯನಂತೆ ಒಪ್ಪುತಿದ್ದನು ! ಬಾಲದಡಿಯ ಕಂಪಾದ ಹಿಂಭಾಗವು ಒಡೆದು ಕೆಂಪಾದ ಗೈರಿಕಾದಿಧಾತುಗಳುಳ್ಳ ಪರ್ವತದಂತೆ ಒಪ್ಪುತಿತ್ತು ! ಆತನು ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿರಲು ಆತನ ವಾಯುವೇಗದಿಂದ ಸೆಡೆಯಲ್ಪಟ್ಟ ಸಮುದ್ರವು ಕಿರುಗಿಡುವಿನಲ್ಲಿ ಅಗ್ನಿಯೊಡನೆ ಕೂಡಿದ ವಾಯುವಂತೆಯೂ ಮೇಘದಂತೆಯೂ ಗರ್ಜಿಸುತಿತ್ತು ! ಆತನು ತೆಂಕಣಮುಖವಾಗಿ ಅಂತರಿಕ್ಷಮಾರ್ಗದಲ್ಲಿ ಹೋಗುತ್ತಿರಲು ಬಡಗಣದಿಕ್ಕಿನಿಂದ ಬೀಳುತಿದ್ದ ಎಡೆಬಿಡೆಯಿಲ್ಲದೆ ಕಿಡಿಗಳ ಸಮೂಹವೋ ಎಂಬಂತೆ ಒಪ್ಪುತಿದ್ದನು , ಅಂತರಿಕ್ಷಮಾರ್ಗದಲ್ಲಿ ಹೋಗುತಿದ್ದ ಗರುಡನಮರ್ಯಾದೆಯಲ್ಲಿದ್ದ ಹನುಮಂತನು ಮುಂಗಾಲಸರಪಣಿಯಹಾಕಿ ಹಿಂಗಾಲಸರಪಣಿಯ ಹಾಕುವ ಸಮಯದಲ್ಲಿ ನಿಗುರಿ ನಿಡಿದಾದ ಮದ್ದಾನೆಯಂತೆ ಒಪ್ಪುತಿದ್ದನು ! ಉಪರಿಭಾಗದಲ್ಲಿದ್ದ ಶರೀರದಿಂದಲೂ ಶರೀರದ ನೆಳಲು ಕೆಳಗೆ ಬೆಂಬಿಡಿಯಲು ವಾಯುವೇಗದಿಂದ ನೀರಿನಮೇಲೆ ನಡೆಯುವ ಓಡೆಯಮರ್ಯಾದೆಯಲ್ಲಿ ಒಪ್ಪುತಿದ್ದನು ! ಆ ಸಮಯದಲ್ಲಿ ಸಮುದ್ರೋದಕವು ಆ ಹನುಮಂತನ ಶರೀರವೇಗದಿಂದ ಹುಟ್ಟಿದ ಗಾಳಿಯಿಂದ ಸೆಡೆಯಲ್ಪಟ್ಟು ನೊರೆಗಟ್ಟಿ ಉನ್ಮಾದವ್ಯಾಧಿಯುಳ್ಳಂಥಾ ನೊರೆ ಎಂಬಂತೆ ಒಪ್ಪುತಿತ್ತು ! ಪರ್ವತಾಕಾರವಾದ ಸಮುದ್ರದ ಪ್ರದೇಶಗಳನ್ನು ತನ್ನ ಶರೀರವೇಗದಿಂದ ಇಬ್ಭಾಗೆವಾಗಿ ಮಾಡಿಕೊಂಡು ಅತಿವೇಗದಿಂದ ಹೋಗುತ್ತಿರಲು ಆತನ ವೇಗಾತಿಶಯದಿಂದ ಓಡುವ ಮೇಘಗಳ ಗಾಳಿಗಳಿಂದ ಗಂಭೀರವಾದ ಸಮುದ್ರವು ಕಂಪಿಸಿ ಘೋರಿಡುತಿತ್ತು ! ತನ್ನ ಶರೀರವೇಗದಿಂದ ಮಹತ್ತಾದ ತೆರೆಗಳನ್ನು ಸೆಡಿಸಿಕೊಂಡು ಹೋಗುತ ಆ ಸಮುದ್ರದ ತೆರೆಗಳು ಅತ್ಯುತ್ಕಟವಾಗಿ ಕಾಣಿಸುತಿರಲು ಅತ್ಯುನ್ನತವಾದ ಆ ತೆರೆಗಳನ್ನು ದಾಟಿಕೊಂಡು ಹೋಗುತ ಅವುಗಳನ್ನು ಎಣಿಸಿ ಲೆಖ್ಖವಕಾಣಬೇಕೆಂಬ ಬುದ್ಧಿಯಿಂದ ಹೋಗುತಿದ್ದಾನೋ ಎಂಬಂತೆ ಹೋಗುತಿದ್ದನು ! ಹನುಮಂತನಿಂದ ಉಲ್ಲೋಲಕಲ್ಲೋಲವಾದ ಸಮುದ್ರವು ಶರತ್ಕಾಲದಲ್ಲಿ ಒಡೆದು ಓಡುವ ಮೇಘಮಂಡಲದಂತೆ ಒಪ್ಪುತಿತ್ತು ! ಆತನ ವೇಗದಿಂದ ಸಮುದ್ರಜಲವು ದಾರಿಗೊಂಡು ತಿರುಗಲಾಗಿ ಆ ಸಮುದ್ರದಲ್ಲಿದ್ದ ಮೀನು ಮೊಸಳೆ ಆಮೆ ಮೊದಲಾದ ಜಲಜಂತುಗಳು ವಸ್ತ್ರಗಳನ್ನು ತೆಗೆಸೆಳೆದರೆ ಪ್ರಾಣಿಗಳ ಶರೀರವು ಪ್ರಕಟವಾಗಿ ಕಾಣಿಸುವಂತೆ ಕಾಣಿಸುತಿದ್ದವು ! ಆ ಸಮುದ್ರದಲ್ಲಿದ್ದ ಸರ್ಪಗಳು ತಮ್ಮನ್ನು ಸೆಳೆಯುವುದಕ್ಕೆ ಉಪರಿಭಾಗದಲ್ಲಿ ಬಂದ ಗರುಡನೋ ಎಂದು ನೋಡುತಿದ್ದವು ! ಆ ಸಮುದ್ರದ ಮೇಲುಭಾಗದಲ್ಲಿ ಹನುಮಂತನು ಹೋಗುತ್ತಿರಲಾಗಿ ಆ ಸಮುದ್ರೋದಕದಲ್ಲಿ ಪ್ರತಿಬಿಂಬಿಸಿದ ಆತನ ಶರೀರದ ನೆಳಲು ಹತ್ತುಗಾವುದದಾರಿಯಗಲವಾಗಿ ಮೂವತ್ತೆರಡುಗಾವುದದಾರಿ ನೀಟವಾಗಿ ಮನೋಹರವಾಗಿ ತೋರುತಿತ್ತು ! ಆ ಸಮಯದಲ್ಲಿ ಗಂಧರ್ವರು ಮೊದಲಾದ ದೇವತೆಗಳು ಪುಷ್ಪವರ್ಷವನ್ನು ಕರೆಯುತಿದ್ದರು ! ಸೂರ್ಯಮಂಡಲದ ಸಮೀಪದಲ್ಲಿ ಹೋಗುತಿದ್ದರೂ ಸೂರ್ಯನು ಆತನನ್ನು ದಹಿಸಲಿಲ್ಲ , ಖೇಚರಮಾರ್ಗದಲ್ಲಿ ಬೆಂಬಿಡಿದು ಹೋಗುತಿದ್ದ ಆತನ ಶರೀರದ ನೆಳಲು ಬೆಳ್ಪಾದ ಮೇಘಮಂಡಲವೆಂಬ ಕೊಳದಲ್ಲಿದ್ದ ಕನ್ನೈದಿಲು ಪುಷ್ಪವೋ ಎಂಬಂತೆ ಒಪ್ಪುತಿರಲು ಅತ್ಯಂತ ಘನಗಾತ್ರವಾದ ಶರೀರವುಳ್ಳ ಹನುಮಂತನು ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ಗರಿಯುಳ್ಳ ಪರ್ವತರಾಜನೋ ಎಂಬಂತೆ ಒಪ್ಪುತಿದ್ದನು ! ಸಮುದ್ರೋದಕವು ಆತನ ವೇಗದಿಂದ ಇಬ್ಭಾಗವಾಗಲು ಆ ಸಮುದ್ರವು ದೊಡ್ಡ ದೋಣಿಯಂತೆ ಒಪ್ಪುತಿರಲು ವಾಯುವಿನಂತೆ ಮೇಘಮಂಡಲವನ್ನು ತನ್ನ ಶರೀರವೇಗದಿಂದ ಇಬ್ಭಾಗ ಮಾಡುತಿದ್ದ ಹನುಮಂತನು ಖೇಚರಮಾರ್ಗದಲ್ಲಿ ಸಂಚರಿಸುತಿದ್ದ ಗರುಡನಂತೆ ಒಪ್ಪುತಿದ್ದನು ! ಮತ್ತು ಅಂತರಿಕ್ಷಮಾರ್ಗದಲ್ಲಿ ಹೋಗುತ ಅಡ್ಡಲಾಗಿ ಬಂದ ಮೇಘಗಳನ್ನು ಹೊಕ್ಕು ಹೊರಡುತ ಮೇಘಮಂಡಲದಲ್ಲಿ ಮರೆಯಾಗಿ ಕಾಣಿಸುವ ಚಂದ್ರನಂತೆ ಒಪ್ಪುತಿದ್ದನು !

ಹೀಗೆ ಹನುಮಂತನು ಸಮುದ್ರವನ್ನು ದಾಟಿಹೋಗುವ ಸಮಯದಲ್ಲಿ ಗಂಧರ್ವರು ಮೊದಲಾದ ದೇವತೆಗಳು ಪುಷ್ಪವರ್ಷಗಳನ್ನು ಕರೆಯುತಿದ್ದರು! ಸೂರ್ಯಮಂಡಲದ ಸಮೀಪದಲ್ಲಿ ಹೋಗುತಿದ್ದರೂ ಸೂರ್ಯನು ಆತನಮೇಲೆ ತನ್ನ ಕಿರಣಜ್ವಾಲೆಗಳನ್ನು ಬಿಡಲಿಲ್ಲ! ಆ ಸಮುದ್ರಮಧ್ಯದಲ್ಲಿ ವಾಯುದೇವನು ರಾಮನ ಕಾರ್ಯಸಿದ್ಧಿಯಾಗಬೇಕೆಂಬ ಬುದ್ಧಿಯಿಂದ ಹನುಮಂತನಿಗೆ ಸಹಾಯವಾಗಿ ಆತನಿಗೆ ಹಿತವಾಗಿಯೇ ಬೀಸಿದನಲ್ಲದೆ ಸುಳಿಗಾಳಿ ಬಿರುಗಾಳಿಗಳಾಗಿ ಬೀಸಲಿಲ್ಲ! ಋಷಿಗಳು ಆತನನ್ನು ಅನೇಕಪ್ರಕಾರವಾಗಿ ಸ್ತೋತ್ರಮಾಡಿ ಕೊಂಡಾಡುತಿದ್ದರು! ದೇವಗಂಧರ್ವರು ಗಾನಮಾಡುತ—ಜಯಜಯ—ಎಂದು ಉಗ್ಘಡಿಸುತಿದ್ದರು! ಆ ಸಮಯದಲ್ಲಿ ಸಮುದ್ರರಾಜನು "ರಾಮಕಾರ್ಯನಿಮಿತ್ತವಾಗಿ ಯತ್ನವನ್ನು ಮಾಡುವ ಹನುಮಂತನಿಗೆ ನಾನೇನಾದರೊಂದು ಸಹಾಯಮಾಡಬೇಕು, ಈತನಿಗೆ ಸಹಾಯಮಾಡದಿದ್ದಪಕ್ಷದಲ್ಲಿ ಲೋಕದಲ್ಲಿ ಅಪರಾಧನುಡಿಗೆ ಈಡಾಗುವೆನು, ಅದು ಏನುಕಾರಣವೆಂದರೆ. ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಸಗರಚಕ್ರವರ್ತಿಯಿಂದ ನಾನು ಉಂಟಾದೆನು, ಹನುಮಂತನು ಇಕ್ಷ್ವಾಕುಕುಲಸಂಪನ್ನನಾದ ರಾಮಸ್ವಾಮಿಯ ಪ್ರಧಾನನು, ಆದ್ದರಿಂದ ಈತನು ಯಾವಪ್ರಕಾರದಲ್ಲಿಯಾದರೂ ಬಳಲದಂತೆ ಸ್ವಲ್ಪ ಹೊತ್ತು ವಿಶ್ರಮಿಸಿಕೊಂಡು ಮುಂದೆ ದಾಟುವಹಾಗೆ ಯತ್ನಮಾಡಬೇಕು" ಎಂದು ಆಲೋಚನೆಮಾಡಿ ತನ್ನ ಮುಳುಗಿ ಸುವರ್ಣಮಯವಾದ ಗರಿಗಳುಳ್ಳ ಮೈನಾಕಪರ್ವತವನ್ನು ಕರೆದು "ಎಲೈ ಮೈನಾಕಪರ್ವತವೇ, ನಿನ್ನನ್ನು ಪೂರ್ವದಲ್ಲಿ ದೇವೇಂದ್ರನು ಪಾತಾಳವಾಸಿಗಳಾದ ಅಸುರರಕ್ಷಣಾರ್ಥವಾಗಿ ಇರಿಸಿದನು, ನೀನು ಪಾತಾಳಲೋಕದ ಬಾಗಿಲನ್ನು ಕಾದುಕೊಂಡಿದ್ದೆ; ನೀನು ಎಲ್ಲರ ಸಾಮರ್ಥ್ಯವನ್ನೂ ಬಲ್ಲೆ, ನಿನಗೆ ಮೇಲೆಯೂ ಕೆಳಗೆಯೂ ಪಾರ್ಶ್ವಗಳಲ್ಲಿಯೂ ಹೆಚ್ಚಿ ಬೆಳೆಯುವ ಸಾಮರ್ಥ್ಯವುಂಟು, ಆದಕಾರಣ ನಿನ್ನಕೂಡೆ ಹೇಳುತ್ತೇನೆಯಲ್ಲದೆ ಮತ್ತೊಂದಲ್ಲ; ನೀನು ಮೇಲಕ್ಕೆ ಎದ್ದೆಯಾದರೆ ರಾಮಕಾರ್ಯನಿಮಿತ್ತವಾಗಿ ಸಮುದ್ರವನ್ನು ದಾಟುವ ಹನುಮಂತನು ನಿನ್ನಲ್ಲಿ ಒಂದು ಕ್ಷಣಮಾತ್ರವು ನಿಂತು ಬಳಲಿಕೆಯನ್ನು ಪರಿಹರಿಸಿಕೊಂಡು ಮುಂದಕ್ಕೆ ಹೋದಾನು, ರಾಮನಿಗೆ ನಾವು ಇಷ್ಟಾದರೂ ಸಹಾಯವನ್ನು ಮಾಡಬೇಕು; ಈ ಕಪಿರಾಜನು ಪೂಜ್ಯನಲ್ಲದೆ ಮತ್ತೊಬ್ಬನಲ್ಲ, ನೀನು ನನಗಾಗಿ ಈ ಕಾರ್ಯಕ್ಕೆ ಸಹಾಯವಾಗು, ಮಹಾತ್ಮರಾದವರಿಗೆ ಉಪದ್ರವಂದಲ್ಲಿ ಉಳಿದವರು ತಮ್ಮ ಕೈಲಾಗುವಷ್ಟು ಸಹಾಯಮಾಡದಿದ್ದರೆ ಮಹಾತ್ಮರ ಚಿತ್ತಕ್ಕೆ ಕೋಪಹುಟ್ಟುವದು, ನೀನು ಉದಕದಿಂದ ಮೇಲಕ್ಕೆ ಏಳು, ಹನುಮಂತನು ಬಂದು ನಿನ್ನಲ್ಲಿ ಒಂದು ಕ್ಷಣಮಾತ್ರವು ನಿಲ್ಲಲಿ, ನಮ್ಮಿಬ್ಬರಿಗೂ ಆತನು ಪೂಜ್ಯನು. ನಾವು ಆತನಿಗೆ ಅತಿಥಿಸತ್ಕಾರ ಮಾಡಬೇಕು ಎಲೈ ಸುವರ್ಣಮಯವಾದ ಮೈನಾಕನೇ, ನೀನು ಸಮಸ್ತ ದೇವಗಂಧರ್ವರಿಗೂ ಪೂಜ್ಯನಾದವನು; ರಾಮಕಾರ್ಯಾರ್ಥವಾಗಿ ಸೀತಾದೇವಿಯನ್ನು ರಕ್ಷಿಸುವದಕ್ಕೆ ಹೋಗುವ ಹನುಮಂತನ ಪ್ರಯಾಸವನ್ನು ನೋಡಿ ನೀನು ಏಳು" ಎಂದು ಅತ್ಯಂತ ವಿನಯೋಕ್ತಿಯಿಂದ ನುಡಿದನು.

ಆ ಮಾತನ್ನು ಕೇಳಿ ಮೈನಾಕಪರ್ವತರಾಜನು ತನ್ನಲ್ಲಿದ್ದ ಪುಣ್ಯವೃಕ್ಷ ಫಲವೃಕ್ಷ ಪುಷ್ಪಲತೆಗಳ ಸಹಿತವಾಗಿ ಸೂರ್ಯನು ಜಲಂಧರನೆಂಬ ರಾಕ್ಷಸನ ಹೊಟ್ಟೆಯನ್ನು ಬಗಿದುಕೊಂಡು ಉದಯಿಸಿಬಂದಂತೆ ಸಮುದ್ರೋದಕವನ್ನು ಇಬ್ಭಾಗವಾಗಿ ಮಾಡಿಕೊಂಡು ಕ್ಷಣಮಾತ್ರದಲ್ಲಿ ಮೇಲಕ್ಕೆ ಬಂದು ತನ್ನ ಕೋಡುಗಲ್ಲುಗಳನ್ನು ವಿಸ್ತರಿಸಿಕೊಂಡು ಹನುಮಂತನು ಬರುವ ದಾರಿಯಲ್ಲಿ ಕಾಣಿಸಿಕೊಂಡನು ಆ ಸಮಯದಲ್ಲಿ ಸೂರ್ಯಕಾಂತಿಯಂತೆ ಹೊಳೆಯುತ ಸುವರ್ಣಮಯವಾದ ಕೋಡುಗಲ್ಲುಗಳಿಂದ ಅಲಂಕರಿಸಲ್ಪಟ್ಟು ಆಯೋಘನಲಗಿನಂತೆ ಶ್ಯಾಮಲವರ್ಣವಾದ ಆಕಾಶವು ಸುವರ್ಣಮಯವಾದಂತೆ ಒಪ್ಪುತಿತ್ತು! ಅಂತರಿಕ್ಷಮಾರ್ಗದಲ್ಲಿ ಹೋಗುತಿದ್ದ ಹನುಮಂತನು ಆಕಸ್ಮಿಕವಾಗಿ ಇದಿರಾಗಿಬಂದು ನಿಂತ ಆ ಪರ್ವತವನ್ನು ಕಂಡು "ಕಟಕಟಾ! ಈ ಅಂತರಿಕ್ಷಮಾರ್ಗದಲ್ಲಿ ಈ ಸಮುದ್ರಮಧ್ಯದಲ್ಲಿ ಇದೊಂದು ವಿಘ್ನಬಂತಲ್ಲ!" ಎಂದು ಚಿಂತಿಸಿ ಅತಿವೇಗವನ್ನುತಾಳಿದ ವಾಯುವು ಮೇಘವನ್ನು ಒಡೆದು ಕೆಡಹುವಂತೆ ತನ್ನ ಎದೆಯಿಂದ ತಾಕಿಸಿ ಆ ಪರ್ವತವನ್ನು ಕೆಡಹಿದನು.

ಮೈನಾಕಪರ್ವತವು ಆತನ ವೇಗವನ್ನು ಕಂಡು ಅತಿ ಸಂತೋಷಪಟ್ಟು ಕೆಳಗೆ ನಿಂತು ಆತನನ್ನು ಕುರಿತು "ಎಲೈ ಕಪಿಶ್ರೇಷ್ಠನಾದ ಹನುಮಂತನೇ, ನೀನು ಅಸಾಧ್ಯವಾದ ಕಾರ್ಯವನ್ನು ಮಾಡಿದೆ, ಅದಕ್ಕೇನಾಯಿತು! ನನ್ನಲ್ಲಿ ಒಂದು ಕ್ಷಣಮಾತ್ರ ನಿಂತು ನಿನ್ನ ಬಳಲಿಕೆಯನ್ನು ಪರಿಹರಿಸಿಕೊಂಡು ಮುಂದಕ್ಕೆ ತೆರಳಹೋಗು, ಪೂರ್ವದಲ್ಲಿ ಈ ಸಮುದ್ರರಾಜನು ಇಕ್ಷ್ವಾಕುವಂಶದ ರಾಯರಿಂದ ಹುಟ್ಟಿದನು, ನೀನು ಆ ಇಕ್ಷ್ವಾಕುವಂಶದಲ್ಲಿ ಅವತರಿಸಿದ ರಾಮನ ಕಾರ್ಯವಾಗಿ ಬಂದಿದ್ದೀ; ಆದಕಾರಣ ಈ ಸಮುದ್ರರಾಜನು ನಿನಗೆ ಪ್ರತ್ಯುಪಕಾರವನ್ನು ಮಾಡಬೇಕೆಂದು ನನಗೆ ಬಹು ಸನ್ಮಾನವಾಗಿ ಹೇಳಕಳುಹಿಸಿದನು, ಲೋಕದಲ್ಲಿ ಮಹಾತ್ಮರಾದವರಿಗೆ ಉಪಕಾರ ಮಾಡಿದವರಿಗೆ ಪ್ರತ್ಯುಪಕಾರಮಾಡುವದೇ ಧರ್ಮಮಾರ್ಗವು, ಆದಕಾರಣ ನಾನು ಸಮುದ್ರರಾಜನ ಮಾತಿನಿಂದ ನಿನಗೆ ಉಪಕಾರ ಮಾಡಲು ಸಮುದ್ರಮಧ್ಯದಿಂದ ಎದ್ದುಬಂದೆನು, ನೀನು ನನ್ನಲ್ಲಿ ಒಂದು ಕ್ಷಣಮಾತ್ರವು ವಿಶ್ರಮಿಸಿಕೊಂಡು ನನ್ನಲ್ಲಿರುವ ಸ್ವಾದುವಾದ ಕಂದಮೂಲ ಫಲಾದಿಗಳನ್ನು ಆಹಾರವಾಗಿ ತೆಗೆದುಕೊಂಡು ಮುಂದಕ್ಕೆ ತೆರಳಹೋದರೆ ಚನ್ನಾಗಿರುವದು; ನೀನು ಕಪಿರಾಜನು, ನಾನು ಪರ್ವತರಾಜನು; ನಮಗೆ ಯಾವಾಗಲೂ ಎಡೆಬಿಡದ ಸಮ್ಮಂಧವುಂಟೆಂಬುವದನ್ನು ನೀನೇ ಬಲ್ಲೆಯಲ್ಲಾ! ನೀನು ಮೂರುಲೋಕಗಳಲ್ಲಿಯೂ ಮಹಾ ಪ್ರಸಿದ್ಧನಾದವನು, ಲೋಕದಲ್ಲಿ ವಾಯುವೇಗ ಮನೋವೇಗವುಳ್ಳವರೊಳಗೆ ನೀನೇ ಬಲವಂತನು; ಲೋಕದಲ್ಲಿ ಸಾಧಾರಣಪ್ರಾಣಿಯಾದರೂ ಅತಿಥಿಯಾಗಿ ಬಂದಲ್ಲಿ ಪೂಜಾಯೋಗ್ಯರೆಂಬಲ್ಲಿ ನಿನ್ನಂಥಾ ಮಹಾತ್ಮರು ಪೂಜಾರ್ಹರೆಂದು ಹೇಳುವದೇನು! ನೀನು ದೇವತೆಗಳಲ್ಲಿ ಪ್ರಧಾನನಾದ ವಾಯುವಿನ ಕುಮಾರನು, ವೇಗದಲ್ಲಿ ವಾಯುವಿಗೆ ಸಮಾನನಾದವನು; ನಿನಗೆ ಸತ್ಕಾರವನ್ನು ಮಾಡಿದಾಗಲೇ ವಾಯುದೇವನಿಗೆ ಸತ್ಕಾರಮಾಡಿದಂತಾಗುವದು; ಆದಕಾರಣ ನನ್ನ ಸತ್ಕಾರವನ್ನು ಕೈಕೊಳ್ಳು. ಒಂದು ಪೂರ್ವವೃತ್ತಾಂತವನ್ನು ಕೇಳು: ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವು, ಅವು ಗರುಡನಂತೆಯೂ ವಾಯುವಿನಂತೆಯೂ ವೇಗವುಳ್ಳವುಗಳಾಗಿ ಹಾರಿಹೋಗುತಿದ್ದವು, ದೇವತೆಗಳು ಮೊದಲಾದ ಸಮಸ್ತ ಪ್ರಾಣಿಗಳೂ ತಮ್ಮಮೇಲೆ ಎಲ್ಲಿ ಬೀಳುವವೋ ಎಂಬ ಶಂಕೆಯಿಂದ ಭಯಪಟ್ಟು ಕಂಗೆಟ್ಟಿದ್ದರು. ಆಗ ದೇವೇಂದ್ರನು ಅತ್ಯಂತ ಕೋಪದಿಂದ ವಜ್ರಾಯುಧವನ್ನು ತೆಗೆದುಕೊಂಡು ಬೆನ್ನಟ್ಟಿ ಹೋಗಿ ಆ ಪರ್ವತಗಳ ಗರಿಗಳನ್ನು ಕತ್ತರಿಸಿ ಹಾಕಿದನು. ಆಗ ನಾನು ಅಂಜಿಕೊಂಡು ನಿನ್ನ ತಂದೆಯಾದ ವಾಯುವಿಗೆ ಮರೆಯಾದೆನು, ಆತನು ನನ್ನನ್ನು ವಹಿಸಿಕೊಂಡು ಅತಿವೇಗದಿಂದ ತಂದು ಈ ಸಮುದ್ರದಲ್ಲಿರಿಸಿದನು, ಸಮುದ್ರರಾಜನು ನನ್ನನ್ನು ಮರಿಸಿಕೊಂಡು ರಕ್ಷಿಸಿದನು. ಈ ಮರ್ಯಾದೆಯಲ್ಲಿ ನಿನ್ನ ತಂದೆಯಾದ ವಾಯುದೇವನೂ ಸಮುದ್ರರಾಜನೂ ಇಬ್ಬರೂ ನನಗೆ ಉಪಕಾರಿಗಳು; ಆದಕಾರಣ ನಾನು ನಿನಗೆ ಸನ್ಮಾನವನ್ನು ಮಾಡಲು ಯತ್ನ ಮಾಡಿಕೊಂಡಿದ್ದೇನೆ; ನೀನು ಪೂರ್ವದಲ್ಲಿ ನನ್ನನ್ನು ರಕ್ಷಿಸಿದ ವಾಯುದೇವನಿಗೆ ಸಮಾನನು; ಇದೇ ನಮಗೆ ಉತ್ತಮವಾದ ಸಮ್ಮಂಧವು; ಆದಕಾರಣ ಸಮುದ್ರರಾಜನೂ ನಾನೂ ನಿನಗೆ ಉಪಕಾರಮಾಡಬೇಕೆಂದು ಬಯಸಿದ್ದೇವೆ; ನೀನು ನಮ್ಮಮೇಲಣ ಪ್ರೀತಿಯಿಂದ ನಾವು ಮಾಡುವ ಸತ್ಕಾರಗಳನ್ನು ಕೈಕೊಂಡು ನಮ್ಮಲ್ಲಿ ಪ್ರೀತಿಯನ್ನು ನಿಲ್ಲಿಸು; ನಿನ್ನ ದರ್ಶನದಿಂದ ನಾನು ಸುಪ್ರೀತನಾದೆನು" ಎಂದು ನುಡಿದನು.

ಆ ಮಾತನ್ನು ಕೇಳಿ ಹನುಮಂತನು "ಎಲೈ ಮೈನಾಕಪರ್ವತನೇ ಕೇಳು: ನಿನಗೆ ನಾನು ಸುಪ್ರೀತನಾದೆನು; ನೀನು ಮಾಡುವ ಅತಿಥಿಸತ್ಕಾರವು ನನಗೆ ಸಂತು, ನಿನ್ನಕೂಡೆ ಬಹಳವಾಗಿ ಉಪಚಾರಗಳನ್ನು ನುಡಿಯಬೇಕಾದರೆ ನನಗೆ ಕಾಲವಿಳಂಬವಾಗಿ ಸಾಯಂಕಾಲವಾಗುವದು, ನಾನು ಶೀಘ್ರವಾಗಿ ತಿರುಗಿ ಬರುವದಾಗಿ ಅಂಗದನು ಮೊದಲಾದ ಕಪಿನಾಯಕರಕೂಡೆ ಪ್ರತಿಜ್ಞೆಯನ್ನು ಮಾಡಿಬಂದೆನು" ಅಂದನು

ಈ ಪ್ರಕಾರದಿಂದ ಮೈನಾಕಪರ್ವತದಕೂಡೆ ಅನೇಕ ವಿನಯೋಕ್ತಿಗಳಿಂದ ನುಡಿದು ತನ್ನ ಕೈಯಿಂದ ಆ ಪರ್ವತವನ್ನು ಮೈದಡಹಿ ನಗುತ ಮೈನಾಕ ಪರ್ವತ ಸಮುದ್ರಗಳಿಂದ ಬಹುಮಾನ ಪೂರ್ವಕವಾಗಿ ಸನ್ಮಾನಿಸಲ್ಪಟ್ಟವನಾಗಿ ಅವರ ಆಶೀರ್ವಾದವನ್ನು ಕೈಕೊಂಡು ಅತಿ ವೇಗದಿಂದ ಆ ಪರ್ವತವನ್ನು ದಾಟಿ ಲೀಲಾಮಾತ್ರದಿಂದ

ಆಕಾಶ ಮಾರ್ಗದಲ್ಲಿ ಹೋಗುತ್ತಿರುವ ಸಮಯದಲ್ಲಿ ಸಮಸ್ತವಾದ ದೇವತೆಗಳೂ ಸಿದ್ಧರೂ ಋಷಿಗಳೂ ಜಯ ಜಯಾ—ಎಂದು ಕೊಂಡಾಡಿ "ಕಟಕಟಾ! ಹನುಮಂತನು ಸಮುದ್ರವನ್ನು ದಾಟಿದನೆಂಬುವದು ಮೊದಲನೇ ಸಾಹಸವು, ದಾಟಿಬರುವಾಗ ಅಂತರಿಕ್ಷ ಮಾರ್ಗದಲ್ಲಿ ಆ ಪರ್ವತವು ಅಡ್ಡಗಟ್ಟಿದರೂ ಅದಕ್ಕೆ ತಕ್ಕ ಬಡಂಬಡಿಕೆಯನ್ನು ಕೊಟ್ಟುಬಂದದ್ದು ಎರಡನೇ ಸಾಹಸ" ಎಂದು ಅತ್ಯಾಶ್ಚರ್ಯ ಪಡುತಿದ್ದರು.

ಆಗ ದೇವೇಂದ್ರನು ಸುವರ್ಣಮಯವಾದ ಮೈನಾಕ ಪರ್ವತವು ಹನುಮಂತನಿಗೆ ಸತ್ಕಾರ ಮಾಡಿದ್ದನ್ನು ಕಂಡು ಅತ್ಯಂತ ಸಂತೋಷಪಟ್ಟು ಆ ಪರ್ವತವನ್ನು ನೋಡಿ "ಎಲೈ ಪರ್ವತನೇ, ದೇವಸಹಾಯಾರ್ಥವಾಗಿ ಹೋಗುತಿದ್ದ ಹನುಮಂತನಿಗೆ ನೀನು ಸಹಾಯಮಾಡಿದ್ದನ್ನು ಕಂಡು ನಾನು ಮಹಾ ಸಂತುಷ್ಟನಾದೆನು, ಇಂದು ಮೊದಲಾಗಿ ನನ್ನಿಂದ ಭಯವೆಂಬುವದು ನಿನಗೆ ಬೇಡ, ನಿನ್ನ ಮನಸ್ಸು ಬಂದಂತೆ ಸಂಚರಿಸಿಕೊಂಡಿರು; ರಾಮನಿಗೆ ಸಹಾಯವಾಗಿ ಹೋಗುತಿದ್ದ ಹನುಮಂತನಿಗೆ ಕಂಗೆಡಿಕೆ ಹುಟ್ಟಬಾರದೆಂಬ ಬುದ್ಧಿಯಿಂದ ನಿನ್ನ ಶಕ್ತಿಗೆ ತಕ್ಕ ಹಾಗೆ ಸತ್ಕಾರಮಾಡಿದೆ, ಆ ಸತ್ಕಾರವು ನಮಗೆಲ್ಲರಿಗೂ ಮಾಡಿದಹಾಗಾಯಿತು; ಈ ಅರ್ಥದಲ್ಲಿ ಸಂಶಯವಿಲ್ಲ" ಎಂದು ನುಡಿದನು ಆ ಮಾತನ್ನು ಕೇಳಿ ಮೈನಾಕಪರ್ವತನು ದೇವೇಂದ್ರನನ್ನು ನೋಡಿ ಅಭಿವಂದಿಸಿ ಅತ್ಯಂತ ಸಂತುಷ್ಟಚಿತ್ತನಾದನು!

ಇತ್ತಲಾ ಹನುಮಂತನು ಅತಿ ವೇಗದಿಂದ ಹೋಗುತ್ತಿರಲಾಗಿ ಸಮಸ್ತ ದೇವತೆಗಳೂ ಸಿದ್ಧ ಗಂಧರ್ವರೂ ಯಕ್ಷರೂ ಅಂತರಿಕ್ಷ ಮಾರ್ಗದಲ್ಲಿ ವಾಯುವೇಗದಿಂದ ಹೋಗುವ ಆತನನ್ನು ಕಂಡು ನಾಗಗಳಿಗೆ ತಾಯಾಗಿ ಸೂರ್ಯಪ್ರಭೆಯಹಾಗೆ ಹೊಳೆಯುತಿದ್ದ ಸುರಸೆ ಎಂಬ ಸ್ತ್ರೀಯನ್ನು ಕರೆದು "ಎಲೌ ಸುರಸಾದೇವಿಯೆ, ವಾಯುಪುತ್ರನಾದ ಹನುಮಂತನು ಅಂತರಿಕ್ಷ ಮಾರ್ಗದಲ್ಲಿ ಸಮುದ್ರವನ್ನು ದಾಟ ಹೋಗುತಲಿಧಾನೆ; ನೀನು ರಾಕ್ಷಸಿರೂಪಿಯಾಗಿ ಕೆಂಗಣ್ಣುಗಳಿಂದಲೂ ಕೋರೆದಾಡೆಗಳಿಂದಲೂ ಭಯಂಕರವಾದ ಮುಖವನ್ನು ಮಾಡಿಕೊಂಡು ಆ ಮುಖವನ್ನು ಮೇಲಕ್ಕೆ ನೆಗಹಿಕೊಂಡು ಹನುಮಂತನ ಮಾರ್ಗವನ್ನು ಕ್ಷಣಮಾತ್ರ ವಿಘ್ನಮಾಡು, ಆತನು ನಿನ್ನನ್ನು ಅತಿಕ್ರಮಿಸಿ ದಾಟಿಹೋಗುವನೋ ಅಲ್ಲದೆ ನಿಂತಾನೋ—ನಿನ್ನ ಸಾಮರ್ಥ್ಯವನ್ನೂ ಆತನ ಸಾಮರ್ಥ್ಯವನ್ನೂ ಪರೀಕ್ಷಿಸಿ ನೋಡಬೇಕು" ಎಂದು ನುಡಿದರು.

ಆ ಮಾತನ್ನು ಕೇಳಿ ಸುರಸಾದೇವಿಯು ಸಮುದ್ರ ಮಧ್ಯದಲ್ಲಿ ಅತ್ಯದ್ಭುತವಾಗಿ ಅತಿ ಭಯಂಕರವಾದ ರಾಕ್ಷಸಿರೂಪವನ್ನು ಧರಿಸಿಕೊಂಡು ಹನುಮಂತನ ದಾರಿಯನ್ನು ಅಡ್ಡಗಟ್ಟಿಕೊಂಡು "ಎಲೈ ಹನುಮಂತನೆ, ದೇವತೆಗಳೆಲ್ಲರೂ ಕೂಡಿ ನಿನ್ನನ್ನು ನನಗೆ ಆಹಾರವಾಗಿ ಕೊರಿವರು; ನಾನು ನಿನ್ನನ್ನು ಭಕ್ಷಣಮಾಡುತ್ತೇನೆ; ಪೂರ್ವದಲ್ಲಿ ಅಂತರಿಕ್ಷ ಮಾರ್ಗದಲ್ಲಿ ಬರುತಿದ್ದ ಪ್ರಾಣಿಗಳನ್ನು ಅಡ್ಡಗಟ್ಟಿ ನುಂಗಿದರೆ ಅವೇ ನನಗೆ ಆಹಾರವಾಗುವವೆಂಬ ವರವುಂಟು; ಆದಕಾರಣ ಬಂದು ನಿನ್ನನ್ನಡ್ಡಗಟ್ಟಿದೆನು" ಎಂದು ತನ್ನ ಬಾಯನ್ನು ತೆರೆದುಕೊಂಡು ಆತನ ಮುಂದೆ ನಿಂತಳು.

ಸುರಸಾದೇವಿಯ ಮಾತನ್ನು ಕೇಳಿ ಹನುಮಂತನು ಕೈಮುಗಿದುಕೊಂಡು ಅತಿ ಹರುಷದಿಂದ "ಎಲೌ ಸ್ತ್ರೀಯೇ ಕೇಳು: ದಶರಥರಾಯನ ಮಗನಾದ ರಾಮನು ಸೀತಾ ಲಕ್ಷ್ಮಣ ಸಮೇತನಾಗಿ ದಂಡಕಾರಣ್ಯಕ್ಕೆ ಬಂದನು, ಒಂದು ಕಾರಣಾಂತರದಿಂದ ರಾಮನಿಗೆ ರಾಕ್ಷಸರಕೂಡೆ ವೈರ ಹುಟ್ಟಲಾಗಿ ರಾವಣನೆಂಬ ದುರಾತ್ಮನು ರಾಮನ ಪಟ್ಟದ ರಾಣಿಯಾದ ಸೀತಾದೇವಿಯನ್ನು ಅಪಹರಿಸಿಕೊಂಡು ಹೋದನು; ರಾಮನು ಸೀತಾದೇವಿಯ ಸಮೀಪಕ್ಕೆ ಕಳುಹಿಸಲಾಗಿ ನಾನು ಆತನ ಸೇವಕನಾಗಿ ಸೀತಾದೇವಿಯ ಸಮೀಪಕ್ಕೆ ಹೋಗುತಿದ್ದೇನೆ. ಎಲೌ ಸುರಸಾದೇವೀ, ನೀನು ಆ ರಾಮಕಾರ್ಯಕ್ಕೆ ಸಹಾಯವ ಮಾಡಬೇಕಲ್ಲದೆ ಮತ್ತೊಂದಲ್ಲ; ನೀನು ಸರ್ವಥಾ ನನ್ನನ್ನು ಭಕ್ಷಣವ ಮಾಡಬೇಕೆಂದು ನಿಶ್ಚಯಿಸಿದ ಪಕ್ಷದಲ್ಲಿ ನಾನು ಸೀತಾದೇವಿಯನ್ನು ಕಂಡುಬಂದು ಆ ದೇವಿಯ ವೃತ್ತಾಂತವನ್ನು ರಾಮನಿಗೆ ಅರಿಕೆ ಮಾಡಿ ತಿರುಗಿ ಬರುತ್ತೇನೆ; ಆಗ ನೀನು ನನ್ನನ್ನು ನುಂಗಿ ಆಹಾರಮಾಡಿಕೊ, ಈ ಅರ್ಥದಲ್ಲಿ ನೀನು ಭಾಷೆಯನ್ನು ಮಾಡಿ ಕೊಡಹೇಳದರೂ ಮಾಡಿ ಕೊಡುತ್ತೇನೆ" ಎಂದು ನುಡಿದನು.

ಆ ಮಾತನ್ನು ಕೇಳಿ ಸುರಸಾದೇವಿಯು ಹನುಮಂತನ ಕೂಡೆ “ ಎಲೈ ಹನುಮಂತನೆ, ಪೂರ್ವದಲ್ಲಿ ಬ್ರಹ್ಮದೇವನು ನನಗೆ ವರವನ್ನು ಕೊಡುವಾಗ ‘ ನಿನ್ನ ಬಾಯ ಸಮೀಪಕ್ಕೆ ಬಂದವರನ್ನು ಬಿಡಬೇಡ ’ ಎಂದು ಹೇಳಿದನು , ನನಿಗೆ ಬ್ರಹ್ಮದೇವರು ಕೊಟ್ಟ ವರಕ್ಕೆ ಹಾನಿಬಾರದಹಾಗೆ ನೀನು ನನ್ನ ಬಾಯನ್ನು ಹೊಕ್ಕು ಹೊರಟು ಹೋಗು ” ಅಂದಳು.

ಈಪ್ರಕಾರವಾಗಿ ನುಡಿದು ಸುರಸಾದೇವಿಯು ತನ್ನ ಬಾಯನ್ನು ಬಿಟ್ಟುಕೊಂಡು ಹನುಮಂತನ ಇದಿರಾಗಿ ನಿಲ್ಲಲು ಹನುಮಂತನು ಕೋಪಯುಕ್ತನಾಗಿ “ ಎಲೌ ಸುರಸಾದೇವಿ, ನನ್ನ ಶರೀರವು ಹಿಡಿಯುವ ಮರ್ಯಾದೆಯುಳ್ಳ ನಿನ್ನ ಶರೀರವನ್ನು ಬೆಳೆಸಿಕೊಂಡು ನಿನ್ನ ಬಾಯನ್ನು ವಿಶಾಲವಾಗಿ ಮಾಡಿಕೊ ” ಎಂದು ನುಡಿದು ತನ್ನ ಶರೀರವನ್ನು ಹತ್ತುಗಾವುದ ದಾರಿಯಗಲವೂ ಹತ್ತುಗಾವುದ ದಾರಿಯುದ್ದವೂ ಆಗಿ ಮಾಡಿಕೊಂಡನು , ಸುರಸಾದೇವಿಯು ಮೇಘಾಕಾರವಾದ ಹನುಮಂತನ ಘನಗಾತ್ರ ಶರೀರವನ್ನು ನೋಡಿ ತನ್ನ ಬಾಯನ್ನು ಇಪ್ಪತ್ತುಗಾವುದದಾರಿ ಯಗಲವಾಗಿ ಮಾಡಿಕೊಂಡಳು , ಇಪ್ಪತ್ತುಗಾವುದದಗಲದ ಸುರಸಾದೇವಿಯ ಬಾಯನ್ನು ಕಂಡು ಹನುಮಂತನು ತನ್ನ ಶರೀರವನ್ನು ಮುವ್ವತ್ತುಗಾವುದದಗಲ ಗಾತ್ರವಾಗಿ ಮಾಡಿಕೊಂಡನು , ಅಂಥಾ ಘನಗಾತ್ರನನ್ನು ಕಂಡು ಸುರಸಾದೇವಿಯು ತನ್ನ ಬಾಯನ್ನು ನಲವತ್ತುಗಾವುದದಗಲ ಮಾಡಿಕೊಂಡಳು , ಅಂಥಾ ಬಾಯಗಲವನ್ನು ಕಂಡು ಹನುಮಂತನು ತನ್ನ ಶರೀರವನ್ನು ಐವತ್ತುಗಾವುದದಾರಿ ಉದ್ದಗಾತ್ರ ಮಾಡಿಕೊಂಡನು, ಅಂಥಾ ಉನ್ನತವನ್ನು ಕಂಡು ಸುರಸಾದೇವಿಯು ತನ್ನ ಬಾಯನ್ನು ಅರವತ್ತುಗಾವುದದಾರಿ ಪ್ರಮಾಣವ ಮಾಡಿಕೊಂಡಳು , ಅಂಥಾ ಬಾಯಗಲವನ್ನು ಕಂಡು ಹನುಮಂತನು ತನ್ನ ಶರೀರವನ್ನು ಎಪ್ಪತ್ತುಗಾವುದ ಪ್ರಮಾಣ ಮಾಡಿಕೊಂಡನು ; ಅಂಥಾ ಶರೀರವನ್ನು ಕಂಡು ಸುರಸಾದೇವಿಯು ತನ್ನ ಬಾಯನ್ನು ಎಂಭತ್ತುಗಾವುದದಾರಿ ಪ್ರಮಾಣ ಮಾಡಿಕೊಂಡಳು ; ಅಂಥಾ ಬಾಯನ್ನು ಕಂಡು ಹನುಮಂತನು ತನ್ನ ಶರೀರವನ್ನು ತೊಂಭತ್ತುಗಾವುದದಾರಿ ಪ್ರಮಾಣ ಮಾಡಿಕೊಂಡನು ; ಅಂಥಾ ಉನ್ನತವಾದ ಶರೀರವನ್ನು ಕಂಡು ಸುರಸಾದೇವಿಯು ತನ್ನ ಬಾಯನ್ನು ನೂರುಗಾವುದದಗಲವಾಗಿ ಮಾಡಿಕೊಂಡಳು. ಆಗ ಬುದ್ಧಿವಂತನಾದ ಹನುಮಂತನು ತನ್ನ ಶರೀರವನ್ನು ಕೊಂಕಿಸಿ ಒಂದಂಗುಷ್ಠ ಮಾತ್ರವಾಗಿ ಮಾಡಿಕೊಂಡು ಅತಿವೇಗದಿಂದ ಆ ಸುರಸಾದೇವಿಯ ಬಾಯನ್ನು ಹೊಕ್ಕು ಹೊರಟುಹೋಗಿ ಅಂತರಿಕ್ಷಮಾರ್ಗದಲ್ಲಿ ನಿಂತು “ ಎಲೈ ಸುರಸಾದೇವಿಯೆ, ನೀನು ದಾಕ್ಷಾಯಣಿ ಎನಿಸಿಕೊಂಬುವಳು , ಆದ್ದರಿಂದ ನಿನ್ನ ಶರೀರವನ್ನು ಹೊಕ್ಕು ಹೊರಟೆನು , ನಿನಗೆ ನಮಸ್ಕಾರ , ನಾನು ಸೀತಾದೇವಿಯ ದರ್ಶನಕ್ಕೆ ಹೋಗುತ್ತೇನೆ, ಬ್ರಹ್ಮದೇವನು ನಿನಗೆ ಕೊಟ್ಟಂಥಾ ವರವು ಸತ್ಯವಾಯಿತು ! ” ಎಂದು ನುಡಿದನು

ಆ ಮಾತನ್ನು ಕೇಳಿ ಸುರಸಾದೇವಿಯು ರಾಹುತುಡುಕಿ ಬಿಡಲ್ಪಟ್ಟ ಚಂದ್ರನ ಮರ್ಯಾದೆಯುಳ್ಳಿದ್ದ ಹನುಮಂತನನ್ನು ನೋಡಿ ತನ್ನ ಪೂರ್ವರೂಪವನ್ನು ಧರಿಸಿಕೊಂಡು “ ಎಲೈ ಹನುಮಂತನೆ, ನೀನು ನಿನ್ನ ಕಾರ್ಯಕ್ಕೆ ಹೋಗು , ನೀನು ಹೋಗುವ ಕಾರ್ಯವು ಸಾಧ್ಯವಾದೀತು ! ಮಹಾತ್ಮನಾದ ರಾಮನ ಕೃಪೆಯಿಂದ ಸೀತಾದೇವಿಯನ್ನು ಕಂಡು ಬರುತಿದ್ದಿ , ನೀನು ಸುಖಿಯಾಗು ” ಎಂದು ಕಳುಹಿಸಿದಳು

ಆಗ ಸಮಸ್ತ ದೇವತೆಗಳೂ ಸುರಸಾದೇವಿಯ ಶರೀರವನ್ನು ಹೊಕ್ಕು ಹೊರಟಂಥಾ ಅದ್ಭುತವನ್ನು ಕಂಡು ‘ ಇದು ಈತನ ಮೂರನೇ ಸಾಹಸ ” ಎಂದು ಕೊಂಡಾಡುತಿದ್ದರು !

ಆಮೇಲೆ ಹನುಮಂತನು ಎಲ್ಲಿನೋಡಿದರೂ ಮೇಘಮಂಡಲದಿಂದಲೂ ಪಕ್ಷಿಗಳಿಂದಲೂ ಬೃಹಸ್ಪತಿ ಶುಕ್ರರಿಂದಲೂ ಐರಾವತದಿಂದಲೂ ಸೇವಿಸಲ್ಪಟ್ಟಂಥಾದ್ದಾಗಿ ಅನೇಕ ದಿವ್ಯಾಲಂಕಾರಯುಕ್ತವಾದ ವಿಮಾನಗಳನ್ನು ಹತ್ತಿಕೊಂಡು ಸಂಚರಿಸುವ ದೇವತೆಗಳಿಂದ ಅಲಂಕರಿಸಲ್ಪಟ್ಟಂಥಾದ್ದಾಗಿ ವಜ್ರಾಯುಧಕ್ಕೂ ಸಿಡಿಲಿಗೂ ಸಮಾನವಾದ ಅಗ್ನಿಮೂರ್ತಿಗಳಿಂದಲೂ ಅನೇಕ ಪುಣ್ಯಾತಿಶಯದಿಂದ ಸ್ವರ್ಗಲೋಕವನ್ನೈದಿ ದಿವ್ಯಭೋಗವನ್ನನುಭವಿಸುತಿದ್ದ ಪುಣ್ಯಶರೀರಿಗಳಿಂದಲೂ ಅಲಂಕರಿಸಲ್ಪಟ್ಟಂಥಾದ್ದಾಗಿ ಯಾಗಾದಿ ಸತ್ಕರ್ಮಗಳಲ್ಲಿ ಹವಿರ್ಭಾಗವನ್ನು ತೆಗೆದುಕೊಳ್ಳುವ ಯಜ್ಞಪುರುಷನಿಂದಲೂ ಸೂರ್ಯನು ಮೊದಲಾದ ನವಗ್ರಹಗಳಿಂದಲೂ ನಕ್ಷತ್ರಸಮೂಹಗಳಿಂದಲೂ ನಾರದಾದಿ

ಅನೇಕ ಋಷಿಗಳಿಂದಲೂ ನಾಗ ಗಂಧರ್ವ ಯಕ್ಷರು ಮೊದಲಾದ ದೇವರ್ಷಿಗಳಿಂದಲೂ ಸೇವಿಸಲ್ಪಟ್ಟಂಥಾದ್ದಾಗಿ ದೇವೇಂದ್ರನಿಂದಲೂ ಚಂದ್ರಸೂರ್ಯರಿಂದಲೂ ಅಲಂಕರಿಸಲ್ಪಟ್ಟಂಥಾದ್ದಾಗಿ ಮನುಷ್ಯಲೋಕಕ್ಕೆ ಮೇಲುಕಟ್ಟಿನ ಮರ್ಯಾದೆಯಲ್ಲಿರುವಂಥಾದ್ದಾಗಿ ಸಾಕ್ಷಾತ್ ಬ್ರಹ್ಮದೇವನಿಂದ ನಿರ್ಮಿತವಾದಂಥಾ ಅಂತರಿಕ್ಷಮಾರ್ಗದಲ್ಲಿ ಅತಿವೇಗವುಳ್ಳ ಗರುಡನಂತೆಯೂ ಗರಿಗಳುಳ್ಳ ಪರ್ವತದಂತೆಯೂ ನಾನಾವರ್ಣವಾದ ಮೇಘಗಳನ್ನು ತನ್ನ ವೇಗದಿಂದ ಚದರಿಸುತ ಮೇಘಮಂಡಲದ ಮಧ್ಯದಲ್ಲಿ ಹೋಗುತ ವರ್ಷಾಕಾಲದಲ್ಲಿ ಮೇಘಮಧ್ಯದಲ್ಲಿ ಸಂಚರಿಸುವ ಚಂದ್ರನಂತೆ ಪ್ರಕಾಶಿಸುತ ನಿರಾಲಂಬವಾದ ಅಂತರಿಕ್ಷ ಮಾರ್ಗದಲ್ಲಿ ಹೋಗುತ ಗರಿಗಳುಳ್ಳ ಪರ್ವತದಂತೆ ಒಪ್ಪುತಿದ್ದನು! ಆ ಸಮಯದಲ್ಲಿ ಕಾಮರೂಪಿಯಾದ ಸಿಂಹಿಕೆ ಎಂಬ ರಾಕ್ಷಸಿಯು ಹನುಮಂತನನ್ನು ಕಂಡು "ನಾನು ಆಹಾರವನ್ನು ತೆಗೆದುಕೊಂಡು ಬಹುದಿನವಾಯಿತು, ಈಗ ಇದೊಂದು ದೊಡ್ಡ ಪ್ರಾಣಿಯು ನನ್ನ ಆಹಾರಕ್ಕೆ ದೊರಕಿತು" ಎಂದು ಮನಸ್ಸಿನಲ್ಲಿ ಸಂತೋಷಪಟ್ಟು ಉಬ್ಬಿ ಬೆಳೆದು ಅಂತರಿಕ್ಷಮಾರ್ಗದಲ್ಲಿ ಹೋಗುವ ಹನುಮಂತನ ಶರೀರದ ನೆಳಲನ್ನು ಆಕ್ರಮಿಸಿದಳು. ಆಗ ಹನುಮಂತನು "ಇದೇನು ನನ್ನ ಗಮನವೇಗವು ನಿಂತು ನನ್ನ ಪರಾಕ್ರಮವು ಕುಂದಿ ಸಮುದ್ರ ಮಧ್ಯದಲ್ಲಿ ಸುಳಿಘಾಳಿಗೆ ಸಿಕ್ಕಿದ ಓಡೆಯಂತೆ ಆದೆನು" ಎಂದು ಚಿಂತಿಸಿ ಮೇಲೆ ಕೆಳಗೆ ಇತ್ತಲ ಅತ್ತಲ ನೋಡಿ ಸಮುದ್ರಮಧ್ಯದಿಂದ ಎದ್ದುಬಂದ ಆ ಪ್ರಾಣಿಯನ್ನು ಕಂಡು ಮುಖಕಾಂತಿ ಗುಂದಿ "ಕಟಕಟಾ! ಜಾಂಬವಂತನು ಹೇಳಿದಹಾಗೇ ಅತ್ಯದ್ಭುತವಾದ ಶರೀರವುಳ್ಳ ಈ ಪ್ರಾಣಿಯು ಕಾಣಿಸಿಕೊಂಡಿತು; ಇದು ತಾನೇ ಛಾಯಾಗ್ರಾಹಿ ಎಂಬ ರಾಕ್ಷಸಿಯಸ್ವರೂಪವಾಗಿರಬೇಕು; ಈ ಅರ್ಥದಲ್ಲಿ ಸಂಶಯವಿಲ್ಲ" ಎಂದು ತನ್ನ ಬುದ್ಧಿ ಚಾತುರ್ಯದಿಂದ ಆ ರಾಕ್ಷಸಿಯ ಸ್ವರೂಪವನ್ನು ತಿಳಿದು ವರ್ಷಾಕಾಲದ ಮೇಘದಂತೆ ಅತ್ಯಂತ ಘನಗಾತ್ರನಾಗಿ ಬೆಳೆದನು, ಆತನ ಶರೀರವನ್ನು ನೋಡಿ ಸಿಂಹಿಕೆಯು ತನ್ನ ಬಾಯನ್ನು ಆಕಾಶದಂತೆಯೂ ಪಾತಾಳದಂತೆಯೂ ಅತ್ಯಂತ ವಿಶಾಲವಾಗಿ ಮಾಡಿಕೊಂಡು ಮೇಘಮಂಡಲದಂತೆ ಗರ್ಜಿಸುತ ಹನುಮಂತನನ್ನು ಅಟ್ಟಿಕೊಂಡುಹೋದಳು, ಹನುಮಂತನು ಆ ರಾಕ್ಷಸಿಯ ಅತಿ ವಿಶಾಲವಾದ ಬಾಯನ್ನು ನೋಡಿ ತನ್ನ ವಜ್ರ ದೇಹವನ್ನು ಮೊದಲಂತೆ ಸಂಕೋಚವಾಗಿ ಮಾಡಿಕೊಂಡು ಆಕೆಯ ಬಾಯಲ್ಲಿ ಪ್ರವೇಶಿಸಿ ಮರ್ಮಸ್ಥಾನವನ್ನು ಸೀಳಿಕೊಂಡು ಹೊರಟನು ಹಾಗೆ ರಾಹುತುಡುಕಿದ ಚಂದ್ರನಂತೆ ಆ ರಾಕ್ಷಸಿಯ ಶರೀರವನ್ನು ಹೊಕ್ಕು ಹೊರಟು ಅವಳಿಂದ ಬಿಡುಗಡೆಯನ್ನೈದಿ ಪೂರ್ಣಚಂದ್ರನಂತೆ ಪ್ರಕಾಶಿಸುತಿದ್ದ ಹನುಮಂತನನ್ನು ಕಂಡು ಸಿದ್ಧ ಚಾರಣರು ಅತ್ಯಾಶ್ಚರ್ಯಪಟ್ಟು ನೋಡುತಿದ್ದರು, ತನ್ನ ಚಾತುರ್ಯದಿಂದ ಛಾಯಾಗ್ರಾಹಿಯಾದ ಸಿಂಹಿಕೆಯನ್ನು ಕೊಂದು ತನ್ನ ಶರೀರವನ್ನು ಮೊದಲಿನ ಹಾಗೇ ಮಾಡಿಕೊಂಡು ತನ್ನಿಂದ ಪ್ರಾಣಾಪಹಾರ ಮಾಡಲ್ಪಟ್ಟ ಆ ರಾಕ್ಷಸಿಯು ಸಮುದ್ರೋದಕದಲ್ಲಿ ಬೀಳಲು ಹನುಮಂತನು ತಾನೇ ಪ್ರಾಣಿಗಳನ್ನು ಸೃಷ್ಟಿಸಿ ತಾನೇ ಸಂಹಾರವ ಮಾಡುವಂಥಾ ಬ್ರಹ್ಮದೇವನಂತೆ ಒಪ್ಪುತ್ತಿದ್ದನು! ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿದ್ದು ನೋಡುತಿದ್ದ ದೇವತೆಗಳು ಆತನನ್ನು ಕಂಡು ಅತಿಹರ್ಷದಿಂದ ಪುಷ್ಪವರ್ಷಗಳನ್ನು ಕರೆದು "ಎಲೈ ಹನುಮಂತನೇ, ಇದೊಂದತಿಸಾಹಸವಾದ ನಿನ್ನ ಕೃತ್ಯವನ್ನು ಕಂಡೆವು, ಮುಂದೆ ನಿನ್ನ ಮನಸ್ಸಿನಲ್ಲಿರುವ ಕಾರ್ಯವು ಸಾಧ್ಯವಾದೀತು! ನಿನ್ನಲ್ಲಿ ಧೈರ್ಯವೂ ವಿವೇಕವೂ ಬುದ್ಧಿಯೂ ದಕ್ಷತ್ವವೂ ಇರುವುದರಿಂದ ನಿನಗೆ ಎಂದಿಗಾದರೂ ಕೇಡುಂಟೆ! ನೀನೇ ಸಮಸ್ತ ಪ್ರಾಣಿಗಳಿಗೂ ಪೂಜ್ಯನು, ನೀನು ನಿನ್ನ ಕಾರ್ಯವನ್ನು ಸಾಧ್ಯಮಾಡಲುಳ್ಳವನು!" ಅಂದರು

ಈಪ್ರಕಾರದಿಂದ ಇಂದ್ರಾದಿ ದೇವತೆಗಳು ಕೊಂಡಾಡುತಿರಲು ಹನುಮಂತನು ಅಂತರಿಕ್ಷ ಮಾರ್ಗದಲ್ಲಿ ಸಂಚರಿಸುತ ಅಲ್ಲಿಂದ ನೂರುಗಾವುದ ದೂರದಲ್ಲಿ ಒಂದು ಮಹತ್ತಾದ ವನವನ್ನು ಕಂಡು ಮತ್ತು ಅಂತರಿಕ್ಷ ಮಾರ್ಗದಲ್ಲಿ ಮುಂದೆ ಹೋಗುತ ನಾನಾಪ್ರಕಾರವಾದ ವೃಕ್ಷಗಳಿಂದ ರಮಣೀಯವಾದ ಒಂದು ದ್ವೀಪವನ್ನೂ ಆ ದ್ವೀಪವನ್ನು ಬಳಸಿದ್ದ ಸಮುದ್ರವನ್ನೂ ಆ ಸಮುದ್ರತೀರದಲ್ಲಿದ್ದ ಪಟ್ಟಣದ ಸುತ್ತುವಳಯದ ಭೂಪ್ರದೇಶದಲ್ಲಿ ಸಮುದ್ರತೀರದಲ್ಲಿದ್ದ ವೃಕ್ಷಗಳನ್ನೂ ನಾನಾದಿಕ್ಕುಗಳಿಂದ ಬಂದು ಕೂಡುವ ಸಮುದ್ರರಾಜನ ಸ್ತ್ರೀಯರಾದ ನದಿಗಳನ್ನೂ ನೋಡಿದನು. ಆ ಬಳಿಕ ಮಹತ್ತಾದ ಮೇಘಮಂಡಲದ ಮರ್ಯಾದೆಯಲ್ಲಿ ಆಕಾಶವನ್ನು ಮುಟ್ಟುವಹಾಗಿದ್ದ ತನ್ನ ಶರೀ

ರವನ್ನು ನೋಡಿ ತನ್ನ ಹೆಚ್ಚಿದ ಶರೀರವನ್ನು ಕಂಡು ರಾಕ್ಷಸರು ಕೌತೂಹಲವನ್ನು ಮಾಡುವರೆಂದು ಚಿಂತಿಸಿ ಪರ್ವತಾಕಾರವಾದ ತನ್ನ ಶರೀರವನ್ನು ಸಂಕೋಚಮಾಡಿಕೊಂಡು ತನ್ನ ಎಂದಿನ ಸ್ವರೂಪವನ್ನು ತಾಳಿ ನಾರಾಯಣನು ತ್ರಿವಿಕ್ರಮಾವತಾರದಲ್ಲಿ ಭೂಮಿಯನ್ನಳೆಯುವದಕ್ಕೆ ವಿರಾಟರೂಪಿಯಾಗಿ ತಿರುಗೂ ವಾಮನಸ್ವರೂಪನಾದಂತೆ ಮೆರೆಯುತ್ತಿದ್ದನು! ಆ ಬಳಿಕ ಕಾಮರೂಪಿಯಾದ ಹನುಮಂತನು ಸಮುದ್ರವನ್ನು ದಾಟಿ ಸಮುದ್ರತೀರಕ್ಕೆ ಹೋಗಿ ಯಾರಿಗೂ ಸಾಧ್ಯವಲ್ಲದ ಕಾರ್ಯವು ತನಗೆ ಸಾಧ್ಯವಾಯಿತೆಂದು ಮನಸ್ಸಿನಲ್ಲಿ ಸಂತೋಷಪಟ್ಟು ತೆಂಗಿನತೋಪು ತಾಳೇತೋಪು ಮೊದಲಾದ ಅನೇಕ ತೋಪುಗಳಿಂದ ರಮಣೀಯವಾದ ತ್ರಿಕೂಟ ಪರ್ವತದಲ್ಲಿ ನಿಂತು ಅಲ್ಲಿದ್ದ ಮೃಗ ಪಕ್ಷಿಗಳನ್ನು ಬೆದರಿಸಿ ಆ ಪರ್ವತಾಗ್ರದಲ್ಲಿ ದೇವೇಂದ್ರನ ಅಮರಾವತೀ ಪಟ್ಟಣದ ಮರ್ಯಾದೆಯಲ್ಲಿದ್ದ ರಾವಣೇಶ್ವರನ ಲಂಕಾಪಟ್ಟಣವನ್ನು ಕಂಡನು!

---

## ೨ ನೇ ಅಧ್ಯಾಯ.

### ಹನುಮಂತನು ಲಂಕೆಯನ್ನು ಪ್ರವೇಶಿಸಿದ್ದು.

ಈಪ್ರಕಾರದಲ್ಲಿ ಹನುಮಂತನು ಸಮುದ್ರವನ್ನು ದಾಟಿ ತ್ರಿಕೂಟಪರ್ವತದಲ್ಲಿಳಿದು ಸ್ವಸ್ಥಚಿತ್ತನಾಗಿ ಅಲ್ಲಿದ್ದ ಮರಗಳಿಂದ ಪುಷ್ಪಗಳು ತನ್ನ ಶರೀರದಮೇಲೆ ಉದುರುವದರಿಂದ ಪುಷ್ಪಮಯವಾದ ಶರೀರವುಳ್ಳವನಾಗಿ ಒಪ್ಪುತಿದ್ದನು, ಅತಿಪರಾಕ್ರಮಶಾಲಿಯಾಗಿ ನೂರುಗಾವುದದಾರಿ ಸಮುದ್ರವನ್ನು ದಾಟಿದವನಾದರೂ ಕಿಂಚಿನ್ಮಾತ್ರವಾದರೂ ನಿಟ್ಟುಸುರುಬಿಡದೆ ಶರೀರದಲ್ಲಿ ಬಳಲಿಕೆ ತೋರದೆ ರಮ್ಯಸ್ಥಳದಲ್ಲಿ ಸ್ವಸ್ಥಚಿತ್ತನಾಗಿ ಕುಳಿತಿದ್ದವನಂತೆ ಶಂಕಾತಂಕವಿಲ್ಲದೆ "ನಾನು ಸಾವಿರಗಾವುದವನ್ನಾದರೂ ಅಪರಿಮಿತಗಾವುದವನ್ನಾದರೂ ಪ್ರಯಾಸವಿಲ್ಲದೆ ದಾಟೇನು; ನೂರುಗಾವುದವೆಂಬ ಮಿತಿಯುಳ್ಳ ಈ ಸಮುದ್ರವನ್ನು ದಾಟಿದೆನೆಂಬುವದು ಆಶ್ಚರ್ಯವೇನು!" ಎಂದು ಚಿಂತಿಸಿ—ಕಪಿಶ್ರೇಷ್ಠರಿಗೂ ಮಹಾಬಲವಂತರಾದವರಿಗೂ ಅಗ್ರೇಸರನಾದ ಹನುಮಂತನು ಆ ತ್ರಿಕೂಟಪರ್ವತದಲ್ಲಿ ಕ್ಷಣಮಾತ್ರವುನಿಂತು ಅಲ್ಲಿಂದ ಮುಂದಕ್ಕೆ ಹೊರಟು ಕಪ್ಪಾಗಿ ಮನೋಹರವಾದ ಎಳಗರಿಕೆಗಳಿಂದಲೂ ನೀಲವರ್ಣವಾಗಿ ಪುಷ್ಪಿತವಾದ ವೃಕ್ಷಗಳಿಂದಲೂ ಪರಿಮಳಸುತ ಮದ್ದಾನೆಯ ಹಿಂಡುಗಳಿಂದ ನೀಲವರ್ಣವಾಗಿ ರಮಣೀಯವಾಗಿ ಫಲವತ್ತಾದ ವನಗಳಿಂದ ಮನೋಹರವಾದ ಶಿಖರಗಳನ್ನು ದಾಟಿದಾಟಿಕೊಂಡು ಹೋಗಿ ಆ ಪರ್ವತಾಗ್ರದಲ್ಲಿ ನಿಂತು ಪುಷ್ಪಿತಗಳಾಗಿ ಫಲಿತಗಳಾದ ಖರ್ಜೂರವೃಕ್ಷಗಳಿಂದಲೂ ಗೊರಟೆಯವೃಕ್ಷಗಳಿಂದಲೂ ಸರಳವೃಕ್ಷಗಳಿಂದಲೂ ಕೊಡಸೀಗೆಯವೃಕ್ಷಗಳಿಂದಲೂ ಪ್ರಿಯಂಗು ವೃಕ್ಷಗಳಿಂದಲೂ ಎಳಲೆವಾಲೆಗಳಿಂದಲೂ ಸಜ್ಜರಸದ ವೃಕ್ಷಗಳಿಂದಲೂ ಅತಿಮನೋಹರವಾಗಿ ಎಲ್ಲಿನೋಡಿದರೂ ಹಂಸಪಕ್ಷಿ ಚಕ್ರವಾಕಪಕ್ಷಿ ಜೊನ್ನವಕ್ಕಿ ಕೊಳರ್ವಕ್ಕಿಗಳುಳ್ಳ ಕೊಳಗಳೂ ಕಮಲಗಳಿಂದಲೂ ಕನ್ನೈದಿಲೆಪುಷ್ಪಗಳಿಂದಲೂ ಮನೋಹರವಾದ ಕೊಳಗಳಿಂದಲೂ ಅತಿರಮಣೀಯವಾಗಿ ಕ್ರೀಡಾಕೊಳಗಳಿಂದಲೂ ಚಂಗಣಿಗಿಲ ಮಡುಗಳಿಂದಲೂ ಸಮಸ್ತ ಋತುಗಳಲ್ಲಿಯೂ ಪುಷ್ಪಿಸುವ ವೃಕ್ಷಗಳುಳ್ಳ ಉದ್ಯಾನವನಗಳಿಂದಲೂ ನಿಬಿಡವಾಗಿ ಗಡಿಬಾಗಿಲುಗಳಲ್ಲಿ ಜನರು ಯೋಗ್ಯವಾಗಿ ಕುಳಿತಿರುವದಕ್ಕೆ ನಿರ್ಮಿಸಲ್ಪಟ್ಟ ಕಲ್ಲರೆಗಳಿಂದ ಅತಿ ರಮಣೀಯವಾಗಿ ಗಡಿಗಳಲ್ಲಿ ಬಿಲ್ಲುಗಾರರಾದ ರಾಕ್ಷಸರಿಂದ ಹೊರಗಾವಲು ಕಾಯಲ್ಪಟ್ಟಂಥಾದ್ದಾಗಿ ಮನೋಹರವಾದ ಕಾಂಚನಕೋಟೆಯುಳ್ಳಂಥಾದ್ದಾಗಿ ಶರತ್ಕಾಲದ ಮೇಘಗಳಿಗೆ ಸಮಾನವಾದ ಉಪ್ಪರಿಗೆಗಳುಳ್ಳ ಮನೆಗಳಿಂದ ಅಲಂಕರಿಸಲ್ಪಟ್ಟಂಥಾದ್ದಾಗಿ ಬಿಳೀ ಲೋವೆಗಳಿಂದ ನಾನಾವಿಧವಾದ ಮೇಲುಮಚ್ಚುಗಳುಳ್ಳಂಥಾದ್ದಾಗಿ ಎಲ್ಲಿನೋಡಿದರೂ ಉಪ್ಪರಿಗೆಗಳಿಂದಲೂ ಪತಾಕೆಟೆಕ್ಕೆಯಗಳಿಂದಲೂ ನೋಡುವ ಜನರ ಕಂಗೊಳಿಸುವಂಥಾದ್ದಾಗಿ ಸುವರ್ಣಮಯವಾದ ತೋರಣಗಳಿಂದಲೂ ನಾನಾವಿಧವಾದ ಚಿತ್ರಗಳಿಂದಲೂ ಲತೆಗಳ ಸಮೂಹಗಳಿಂದಲೂ ರಮಣೀಯವಾಗಿ ಸ್ವರ್ಗದಲ್ಲಿರುವ ದೇವೇಂದ್ರನ ಅಮರಾವತೀ ಪಟ್ಟಣದಂತೆ ಶೋಭಿತವಾಗಿ ವಿಶ್ವಕರ್ಮ ನಿರ್ಮಿತವಾಗಿ ರಾಕ್ಷಸೇಶ್ವರನಾದ ರಾವಣನಿಂದ ಪರಿಪಾಲಿಸಲ್ಪಟ್ಟ ಲಂಕಾಪಟ್ಟಣವನ್ನು ಕಂಡನು!

ಆ ಬಳಿಕ ಹನುಮಂತನು ಆ ಪಟ್ಟಣದ ಬಡಗಲಬಾಗಿಲಿನಲ್ಲಿ ನಿಂತು "ಕಟಕಟಾ! ಈ ಪಟ್ಟಣವು ಕೈಲಾಸ ಪರ್ವತದ ಕೋಡುಗಲ್ಲಿನಂತೆ ಆಕಾಶವನ್ನು ಮುಟ್ಟುತ್ತಿದೆ; ಭಯಂಕರಾಕಾರರಾದ ರಾಕ್ಷಸರಿಂದ ಇಟ್ಟಣಿಸಿ ಸರ್ಪಗಳಿಂದ ಪರಿಪೂರ್ಣವಾದ ಭೋಗವತಿ ಪಟ್ಟಣದಂತೆ ನೋಡಲಶಕ್ಯವಾಗಿದೆ; ಪುಣ್ಯಾತ್ಮರಿಂದ ಈಡಿರಿಯಲ್ಪಟ್ಟ ಕುಬೇರನ ಅಳಕಾಪುರೀಪಟ್ಟಣದಂತೆ ಅತ್ಯಂತ ದುರ್ಘಟವಾಗಿದೆ; ಎಲ್ಲಿ ನೋಡಿದರೂ ಶೂಲ ಪಟ್ಟಿಸಗಳಿಂದ ಕೂಡಿ ಅತಿ ಭಯಂಕರವಾದ ಕೋರದಾಡೆಗಳುಳ್ಳ ರಾಕ್ಷಸರಿಂದ ರಕ್ಷಿಸಲ್ಪಟ್ಟಂಥಾದ್ದಾಗಿದೆ; ಕಾಲಕೂಟ ವಿಷವನ್ನುಗುಳುತ ಮಹಾ ಶೇಷನಹಾಗೆ ಭಯಂಕರವಾದ ಸರ್ಪಗಳ ನಿಳಯದಿಂದ ದುರ್ಘಟವಾಗಿದೆ" ಎಂದು ಚಿಂತಿಸಿ ಆ ಪಟ್ಟಣವನ್ನು ಸುತ್ತಿನೋಡಿ ಅದನ್ನು ರಕ್ಷಿಸಿಕೊಂಡಿದ್ದ ಅತಿ ಭಯಂಕರವಾದ ಸಮುದ್ರರಾಜನನ್ನು ಕಂಡು ಪಟ್ಟಣದಲ್ಲಿದ್ದ ರಾಕ್ಷಸೇಶ್ವರನಾದ ರಾವಣನ ಚಾರಿತ್ರವನ್ನು ನೆನೆದು ಆಶ್ಚರ್ಯಪಟ್ಟು "ಕಟಕಟಾ! ಈ ಲಂಕಾಪಟ್ಟಣಕ್ಕೆ ಕಪಿಸೇನೆಗಳು ಬಂದರೂ ವ್ಯರ್ಥವಲ್ಲದೆ ಕಾರ್ಯಸಿದ್ಧಿಯಾಗಲಾರದು, ಈ ಲಂಕಾಪಟ್ಟಣವು ಮುತ್ತಿಗೆಗೆ ಸಾಧ್ಯವಲ್ಲ; ಗೆಲ್ಲುವದಕ್ಕೆ ಶಕ್ಯವಲ್ಲ; ಮೋಸಮಾಡಿ ತೆಗೆದುಕೊಳ್ಳುವದಕ್ಕೆ ಅವಕಾಶವಿಲ್ಲ. ರಾಮನು ಅತಿ ಪರಾಕ್ರಮಿಯಾದರೂ ಈ ರಾವಣನಿರುವ ಈ ಪಟ್ಟಣಕ್ಕೆ ಬಂದು ಏನು ಮಾಡಬಲ್ಲನು! ಈ ರಾವಣಾಸುರನು ಸಾಮ ದಾನ ಭೇದ ದಂಡ ಎಂಬ ಚತುರೋಪಾಯಗಳಲ್ಲಿ ಯಾವ ಉಪಾಯಕ್ಕೂ ಸಾಧ್ಯವಾಗುವವನಲ್ಲ; ಲೋಕದಲ್ಲಿ ಅರಸುಗಳಿಗೆ ಶತ್ರುಗಳನ್ನು ವಶಮಾಡಿಕೊಳ್ಳುವದಕ್ಕೆ ನಾಲ್ಕು ಉಪಾಯಗಳಲ್ಲದೆ ಐದನೇ ಉಪಾಯವಿಲ್ಲ. ಕಟಕಟಾ! ನಾನು ಸೀತಾದೇವಿಯನ್ನು ಕಂಡು ತಿರುಗಿ ಹೋಗುವ ಪರಿಯಂತರ ನಮ್ಮೊಡೆಯನಾದ ಸುಗ್ರೀವನು ಜೀವವಂತನಾಗಿರುವನೋ ಇರನೋ ಅರಿಯಲಾಗದು! ನಾನು ಈ ಶರೀರದೊಡನೆ ಲಂಕಾಪಟ್ಟಣಕ್ಕೆ ಹೋಗುವದಕ್ಕೆ ಶಕ್ಯವಲ್ಲ; ಈ ಪಟ್ಟಣದಲ್ಲಿರುವ ರಾಕ್ಷಸರು ಮಹಾ ಕ್ರೂರಕರ್ಮಿಗಳು—ಮಹಾ ಬಲವಂತರು—ಮಹಾ ಪರಾಕ್ರಮಿಗಳು; ಯಾವ ಪ್ರಕಾರದಲ್ಲಾದರೂ ಈ ರಾಕ್ಷಸರನ್ನು ವಂಚಿಸಿ ಮೋಸಮಾಡಿ ಸೀತಾದೇವಿಯನ್ನು ಬಿಡಿಸಬೇಕು; ರಾತ್ರೀ ಕಾಲದಲ್ಲಿ ಯಾರೂ ಕಾಣದಂತೆ ಈ ಪಟ್ಟಣವನ್ನು ಪ್ರವೇಶಿಸಿ ಬಂದ ಕಾರ್ಯವನ್ನು ಸಾಧ್ಯವ ಮಾಡಬೇಕಲ್ಲದೆ ಮತ್ತೊಂದಲ್ಲ; ಈ ಪಟ್ಟಣವು ದೇವಾಸುರರಿಗೂ ಒಳಹೊಗುವದಕ್ಕೆ ಅಸಾಧ್ಯವಾದಂಥಾದ್ದು; ಹಾಗಿರುವಲ್ಲಿ ಮಾನವರ ಪಾಡೇನು! ಯಾವ ಉಪಾಯದಿಂದ ಈ ಪಟ್ಟಣದಲ್ಲಿ ಯಾರೂ ಅರಿಯದಂತೆ ಸೀತಾದೇವಿಯನ್ನು ಹುಡುಕಬೇಕು! ಯಾವ ಪ್ರಕಾರದಲ್ಲಿ ರಾವಣಾಸುರನನ್ನು ಕಾಣಿಸಿಕೊಳ್ಳದೆ ಒಳಹೊಕ್ಕು ತಿರುಗುವದು! ಯಾವ ಮರ್ಯಾದೆಯಲ್ಲಿ ನಾನೊಬ್ಬನೇ ಹೋಗಿ ಸೀತಾದೇವಿಯೊಬ್ಬಳನ್ನೇ ಕಂಡೇನು! ಈಗ ಸೀತಾದೇವಿಯನ್ನು ಕಾಣದೆ ಹೋದರೆ ಸೂರ್ಯೋದಯದಿಂದ ಅಂಧಕಾರವು ಕೆಡುವಂತೆ ನನ್ನ ಮನಸ್ಸಿನ ಕಂಗೆಡಿಕೆಯಿಂದ ಇಷ್ಟುದಿವಸಗಳು ಮಾಡಿದ ಕಾರ್ಯಗಳೆಲ್ಲವೂ ದೇಶಕಾಲ ವಿರೋಧದಿಂದ ಕೆಟ್ಟುಹೋಗುವವು; ಒಂದು ಕಾರ್ಯಕ್ಕೆ ಬಂದು ಅನರ್ಥಕಾರ್ಯವನ್ನು ಮಾಡಿಕೊಂಡು ಹೋದವನ ಬುದ್ಧಿಯು ವ್ಯರ್ಥವಾಗುವದು; ಲೋಕದಲ್ಲಿ ಯಾವನೊಬ್ಬನು ತಾನೇನೂ ಅರಿಯದಿದ್ದರೂ ತಾನೇ ಸರ್ವಜ್ಞನೆಂದು ನುಡಿದುಕೊಳ್ಳುವನೋ ಆತನು ಯೋಚಿಸಿದ ಕಾರ್ಯಗಳೆಲ್ಲವು ಲಯವಾಗಿ ಹೋಗುವವು; ಆದಕಾರಣ ನಾನು ಬಂದಕಾರ್ಯವು ಸಾಧ್ಯವಾಗುವಂತೆಯೂ ನಾನು ಸಮುದ್ರವನ್ನು ದಾಟಬಂದದ್ದು ವ್ಯರ್ಥವಾಗದಂತೆಯೂ ಮಾಡಬೇಕು, ನಾನು ರಾಕ್ಷಸರಿಂದ ಕಾಣಲ್ಪಟ್ಟೆನಾದರೆ ಮಹಾತ್ಮನಾದ ರಾಮನ ಕಾರ್ಯವು ವ್ಯರ್ಥವಾಗುವದು; ರಾವಣಾಸುರನಿಂದ ಅನರ್ಥಕಾರ್ಯವೇ ಸಂಭವಿಸುವದು; ಈ ಸ್ಥಳದಲ್ಲಿ ರಾಕ್ಷಸರ ಕಣ್ಣಿಗೆ ಕಾಣಿಸಿಕೊಳ್ಳಧಿರುವದು ಶಕ್ಯವಲ್ಲ, ರಾಕ್ಷಸರೂಪದಿಂದಿರುವದಕ್ಕೂ ಆಗದು; ಇಲ್ಲಿ ವಾಯುವಿಗಾದರೂ ಯಾರೂ ಅರಿಯದಹಾಗಿರುವದಕ್ಕೆ ಶಕ್ಯವಲ್ಲ; ಈ ಸ್ಥಳದಲ್ಲಿ ಬಲವಂತರಾದ ರಾಕ್ಷಸರು ಅರಿಯದಿರುವ ಕೃತ್ಯವೇ ಇಲ್ಲ; ಯಾರಾದರು ನನ್ನ ಸ್ವರೂಪವನ್ನು ತಿಳಿದರೆ ನಾನು ಲಯವನ್ನೈದುವೆನು; ಒಡೆಯನ ಕಾರ್ಯವು ಕೆಡುವದು; ಆದ್ದರಿಂದ ನಾನು ರಾತ್ರೀಕಾಲದಲ್ಲಿ ಸೂಕ್ಷ್ಮರೂಪವಾಗಿ ರಾಮನ ಕಾರ್ಯಸಿದ್ಧಿಯಾಗುವ ಮರ್ಯಾದೆಯಲ್ಲಿ ರಾವಣಾಸುರನ ರಾಜಧಾನಿಯಾದ ಲಂಕಾಪಟ್ಟಣವನ್ನು ಪ್ರವೇಶಿಸಿ ಆತನ ಅರಮನೆಯನ್ನು ಹೊಕ್ಕು ಸೀತಾದೇವಿಯನ್ನು ಹುಡುಕಬೇಕು" ಎಂದು ನಿಶ್ಚಯಿಸಿ ಸೂರ್ಯಾಸ್ತಮಾನ ಕಾಲವನ್ನು ಬಯಸುತಿದ್ದನು.

ಆಮೇಲೆ ಸೂರ್ಯಾಸ್ತಮಾನವಾಗಲು ಹನುಮಂತನು ಚಿಕ್ಕಿನ ಪ್ರಮಾಣವುಳ್ಳ ಶರೀರವನ್ನು ತಾಳಿ ಅತ್ಯದ್ಭುತ ಸ್ವರೂಪದಿಂದ ಸಾಯಂಕಾಲದಲ್ಲಿ ಅತಿ ವೇಗವಾಗಿ ಹೋಗಿ ಲಂಕಾಪಟ್ಟಣವನ್ನು ಪ್ರವೇಶಮಾಡಿದನು. ಆ ಲಂಕಾಪಟ್ಟಣವು ಅತಿ ವಿಶಾಲವಾದ ರಾಜಬೀದಿಗಳುಳ್ಳಂಥಾದ್ದಾಗಿ ಎಲ್ಲಿ ನೋಡಿದರೂ ಸುವರ್ಣಮಯವಾದ ಕಂಭಗಳಿಂದ ರಮಣೀಯವಾದ ಉಪ್ಪರಿಗೆಗಳ ಸಮೂಹವುಳ್ಳಂಥಾದ್ದಾಗಿ ಸುವರ್ಣಮಯವಾದ ಗವಾಕ್ಷಿಗಳಿಂದಲೂ ಏಳುನೆಲೆ ಎಂಟು ನೆಲೆಗಳುಳ್ಳ ಉಪ್ಪರಿಗೆಗಳಿಂದಲೂ ಅತಿ ರಮ್ಯವಾಗಿ ಗಂಧರ್ವ ಪಟ್ಟಣಕ್ಕೆ ಸಮಾನವಾದ್ದಾಗಿ ಎಲ್ಲಿ ನೋಡಿದರೂ ಚಿನ್ನದ ಮೊಳೆಗಳುಳ್ಳ ಸ್ಫಟಿಕಗಳೂ ಶಿಲೆ ಬಿಗಿದ ನೆಲಗಟ್ಟುಗಳೂ ಉಳ್ಳಂಥಾದ್ದಾಗಿ ವೈಡೂರ್ಯ ರತ್ನ ಖಚಿತವಾದ ಮುತ್ತಿನ ಗವಾಕ್ಷಿಗಳಿಂದ ಅಲಂಕರಿಸಲ್ಪಟ್ಟಂಥಾದ್ದಾಗಿ ವಿಚಿತ್ರವಾದ ತೋರಣಗಳಿಂದ ಅಲಂಕರಿಸಲ್ಪಟ್ಟ ರಾಕ್ಷಸರ ಮನೆಗಳಿಂದ ಇಟ್ಟಣಿಸಲ್ಪಟ್ಟಂಥಾದ್ದಾಗಿತ್ತು! ಅಂಥಾ ಅದ್ಭುತಾಕಾರವಾದ ಲಂಕಾಪಟ್ಟಣವನ್ನು ನೋಡಿ ಹನುಮಂತನು ಅದನ್ನು ಒಳಹೊಕ್ಕು ತಿರುಗಿ ಹೋಗುವ ಪ್ರಕಾರವು ಹ್ಯಾಗೆಂದು ಮನಸ್ಸಿನಲ್ಲಿ ದುಃಖಪಡುತ ಮತ್ತು ದುರ್ಘಟವಾದ ಆ ಪಟ್ಟಣವನ್ನು ಹೊಕ್ಕು ಹೋದರೆ ಯಾವ ಪ್ರಕಾರದಲ್ಲಾಗಲೂ ಸೀತಾದೇವಿಯನ್ನು ಕಾಣಬಹುದೆಂದು ಸಂತೋಷಪಡುತ ಎಲ್ಲಿ ನೋಡಿದರೂ ಮುತ್ತಿನ ಸರಗಳ ತೋರಣಗಳಿಂದಲೂ ಸುವರ್ಣಮಯವಾದ ಗವಾಕ್ಷಿಗಳಿಂದಲೂ ಅತಿಭಯಂಕರಾಕಾರರಾಗಿ ಪರಾಕ್ರಮಿಗಳಾದ ರಾಕ್ಷಸರಿಂದಲೂ ಮೆರೆಯುತಲಿರುವ ಆ ಪಟ್ಟಣವನ್ನು ಚಂದ್ರನು ಸಂಪೂರ್ಣ ಕಳಾಯುಕ್ತನಾಗಿ ಸಮಸ್ತ ನಕ್ಷತ್ರಗಳನ್ನೂ ಕೂಡಿಕೊಂಡು ತನ್ನ ಬೆಳದಿಂಗಳ ಕಾಂತಿಯಿಂದ ಯಾವಾಗಲೂ ಬೆಳಗುತ ಮಾನಸ ಸರೋವರದಲ್ಲಿ ಸಂಚರಿಸುತ್ತಿರುವ ಹಂಸಪಕ್ಷಿಯಂತೆಯೂ ಶಂಖಮಣಿಯಂತೆಯೂ ಕ್ಷೀರಸಾಗರದಂತೆಯೂ ತಾವರೇಗೆಣಸಿನ ಸಮೂಹದಂತೆಯೂ ಪ್ರಕಾಶಮಾನನಾಗಿ ತೋರುತ್ತಿರಲು ಆತನನ್ನು ಕಂಡು ಮತ್ತೂ ಹರ್ಷದಿಂದ ನೋಡುತಿದ್ದನು.

---

## ೩ ನೇ ಅ ಧ್ಯಾ ಯ.

### ಹ ನು ಮಂ ತ ನು ಲಂ ಕಾ ದೇ ವಿ ಯ ನ್ನು ಸಂ ಹಾ ರ ಮಾ ಡಿ ದ್ದು.

ಆ ಬಳಿಕ ಹನುಮಂತನು ಆ ರಾತ್ರೀ ಸಮಯದಲ್ಲಿ ಲಂಕಾಪಟ್ಟಣವನ್ನು ಪ್ರವೇಶಿಸಿ ಧೈರ್ಯದಿಂದ ಶರೀರಬಲವನ್ನು ತೋರಿಸುತ ಮೇಘಮಂಡಲವನ್ನು ಮುಟ್ಟುವಹಾಗಿದ್ದ ಒಂದು ಉಪ್ಪರಿಗೆಯ ಅಗ್ರಭಾಗದಲ್ಲಿ ಕುಳಿತುಕೊಂಡು ಲಂಕಾಪಟ್ಟಣವನ್ನು ನೋಡುತಿದ್ದನು, ಆಗ ಆ ಪಟ್ಟಣವು ಎಲ್ಲಿ ನೋಡಿದರೂ ರಮಣೀಯವಾದ ಉದ್ಯಾನವನಗಳಿಂದಲೂ ತಾವರೇ ಪುಷ್ಪಗಳಿಂದ ರಮಣೀಯವಾದ ಕ್ರೀಡಾ ಕೊಳಗಳಿಂದಲೂ ಶರತ್ಕಾಲದ ಮೇಘದಂತೆ ಅತ್ಯಂತ ಉನ್ನತವಾಗಿ ಅತಿ ಬಿಳುಪಾದ ಉಪ್ಪರಿಗೆಗಳಿಂದಲೂ ಸಮುದ್ರ ಘೋಷದಂತೆ ಧ್ವನಿಗೈಯುತಿದ್ದ ರಾಕ್ಷಸಜನ ಸಮೂಹದಿಂದಲೂ ಉಬ್ಬಿ ಕೊಬ್ಬಿದ ರಾಕ್ಷಸರಿಂದಲೂ ಮನೋಹರವಾದ ತೋರಣಗಳಿಂದ ರಮ್ಯವಾದ ಮದನಕೈಗಳುಳ್ಳ ಹಾಲುಗಾರೆ ಮಾಡಿದ ಮೇಲುಮಚ್ಚುಗಳಿಂದಲೂ ರಮಣೀಯವಾಗಿ ಪಾತಾಳಲೋಕದಲ್ಲಿ ನಾಗರಾಜನಿರುವ ಭೋಗವತಿಯ ಪಟ್ಟಣದಂತೆ ನಕ್ಷತ್ರಸಮೂಹಗಳಿಂದಲೂ ಮಿಂಚುಗಳ ಸಮೂಹಗಳಿಂದಲೂ ಚಂಡಮಾರುತನಿಂದಲೂ ಮನೋಹರವಾಗಿ ಸುವರ್ಣಮಯವಾದ ಕೋಟೆಯಿಂದಲೂ ಚಿನ್ನದ ಕಿರಿಘಂಟೆಗಳ ಧ್ವನಿಗಳಿಂದ ರಮಣೀಯವಾದ ಪತಾಕೆಗಳಿಂದಲೂ ಅಲಂಕರಿಸಲ್ಪಟ್ಟಂಥಾದ್ದಾಗಿ ಸುವರ್ಣಮಯವಾದ ಬಾಗಿಲುಗಳಿಂದಲೂ ವೈಡೂರ್ಯನವರತ್ನ ಖಚಿತವಾದ ಹೊರಬಾಗಿಲುಗಳ ಜಗುಲಿಗಳಿಂದಲೂ ಸ್ಫಟಿಕ ಮಣಿಮಯವಾದ ಗೋಡೆಗಳಿಂದಲೂ ಪುಟವಿಡಲ್ಪಟ್ಟ ಸುವರ್ಣಮಯವಾದ ಮೇಲುಮಚ್ಚುಗಳುಳ್ಳ ಜಲಧಾರೆಗಳಿಂದಲೂ ವೈಡೂರ್ಯ ರತ್ನ ಖಚಿತವಾದ ಸ್ಫಟಿಕಮಣಿಗಳ ಸೋಪಾನಗಳಿಂದಲೂ ಆಕಾಶವನ್ನು ತಡುಕುತಿರುವ ಅತಿರಮಣೀಯವಾದ ಸಜ್ಜರಸದ ವೃಕ್ಷಗಳ ವನಗಳಿಂದಲೂ ನವಿಲು ಕ್ರೌಂಚಪಕ್ಷಿ ಹಂಸಪಕ್ಷಿಗಳಿಂದಲೂ ಮನೋಹರವಾಗಿ ತಾಳ ಮದ್ದಳ ಗೀತಾದಿ ರಮಣೀಯವಾದ ಸ್ವರಗಳಿಂದ ರಮಣೀಯವಾಗಿತ್ತು! ಅಂಥಾ ಲಂಕಾಪಟ್ಟಣವನ್ನು ನೋಡಿ ಹನುಮಂತನು ಮಹಾ

ಸಂತೋಷಪಟ್ಟು "ಆಹಾ! ಈ ಪಟ್ಟಣವನ್ನು ಯಾರಾದರು ಇಣಿಕಿನೋಡುವದಕ್ಕಾದರೂ ಸಾಧ್ಯವೇ! ಯಾವಾಗಲೂ ಆಯುಧಪಾಣಿಗಳಾದ ರಾಕ್ಷಸರು ಕಾದುಕೊಂಡಿರುವರಾದ್ದರಿಂದ ಕುಮುದನು ಅಂಗದನು ಸುಷೇಣನು ಮೈಂದನು ದ್ವಿವಿದನು ಸೂರ್ಯನಮಗನಾದ ಸುಗ್ರೀವನು ಕುಶಪರ್ವನು ಋಕ್ಷನು ನಾನು ಹೊರತಾಗಿ ಮಿಕ್ಕಾದವರಿಗೆ ಇಲ್ಲಿ ಬರುವದಕ್ಕೆ ಕೂಡದು!" ಎಂದು ಮನಸ್ಸಿನಲ್ಲಿ ಯೋಚನೆ ಮಾಡಿದನು.

ಈಪ್ರಕಾರದಿಂದ ಹನುಮಂತನು ಅತಿಪರಾಕ್ರಮಶಾಲಿಯಾದ ಶ್ರೀರಾಮನ ಪರಾಕ್ರಮವನ್ನೂ ಲಕ್ಷ್ಮಣನ ಸಾಹಸಾತಿಶಯವನ್ನೂ ತಿಳಿದವನಾದ್ದರಿಂದ ಸಂತೋಷದಿಂದ ರತ್ನಕಾಂತಿಯೆಂಬ ವಸ್ತ್ರಾಭರಣಗಳೂ ಉಪ್ಪರಿಗೆಗಳೆಂಬ ಕರ್ಣಾವತಂಸಗಳೂ ಗೋಪುರಗಳೆಂಬ ಸ್ತನಗಳೂ ಉಂಟಾಗಿ ಸರ್ವಾಲಂಕಾರಭೂಷಿತೆಯಾಗಿ ಉಬ್ಬಿಕೊಬ್ಬಿದ ಯುವ್ವನೋದಯವುಳ್ಳ ಸ್ತ್ರೀಯೋ ಎಂಬಂತೆ ದೇದೀಪ್ಯಮಾನವಾದ ಹೊಂಬಣ್ಣವುಳ್ಳ ಉಪ್ಪರಿಗೆಗಳಿಂದ ಹಗಲಿರುಳೆನ್ನದೆಯೂ ಅಂಧಕಾರ ಕವಿಯದೆಯೂ ಇದ್ದ ಲಂಕಾಪಟ್ಟಣವನ್ನು ನೋಡುತ ಹೋಗುತಿರುವ ಸಮಯದಲ್ಲಿ ರಾವಣನಿಂದ ರಕ್ಷಿಸಲ್ಪಟ್ಟ ಆ ಪಟ್ಟಣವು ರಾಕ್ಷಸೀಸ್ವರೂಪವಾಗಿ ಬೊಬ್ಬಿಟ್ಟು ಕೂಗುತ ಆತನ ಮುಂದೆ ಕಾಣಿಸಿಕೊಂಡು "ಎಲೈ ಕಪಿಯೇ, ನೀನು ಯಾರು? ಏನುಕಾರಣ ಇಲ್ಲಿಗೆ ಬಂದೆ? ನೀನು ಪ್ರಾಣಸಹಿತ ಹೋಗುವದಕ್ಕಿಲ್ಲ, ಆದ್ದರಿಂದ ಸತ್ಯವನ್ನೇ ಹೇಳು, ಈ ಪಟ್ಟಣವು ಮಹಾಬಲವಂತರಾದ ರಾಕ್ಷಸರಿಂದ ಅತ್ಯಂತ ಸಾವಧಾನವಾಗಿ ರಕ್ಷಿಸಲ್ಪಡುವಂಥಾದ್ದು, ನಿನ್ನಂಥಾವನು ಹೊಕ್ಕು ಹೋಗುವದಕ್ಕೆ ಅಶಕ್ಯವಾಗಿರುವದು" ಎಂದು ನುಡಿಯಿತು

ಆ ಮಾತನ್ನು ಕೇಳಿ ಹನುಮಂತನು "ಎಲೈ ಲಂಕಾದೇವಿಯೆ ಕೇಳು; ನಾನು ನನ್ನ ಸ್ವರೂಪವನ್ನೂ ನಾನು ಬಂದ ವೃತ್ತಾಂತವನ್ನೂ ಹೇಳುವೆನು, ನೀನು ನಿನ್ನ ಸ್ವರೂಪವನ್ನು ಯಥಾರ್ಥವಾಗಿ ಹೇಳು, ನೀನ್ಯಾರು? ನೋಡಿದರೆ ಮಹಾಭಯಂಕರವಾಗಿದೆ, ಈ ಪಟ್ಟಣದ ಬಾಗಿಲಲ್ಲಿ ಏನುಕಾರಣದಿಂದಿದ್ದೀ?" ಎಂದು ಕೇಳಿದನು.

ಆ ಮಾತನ್ನು ಕೇಳಿ ಲಂಕಾದೇವಿಯು ಅತ್ಯಂತ ಕೋಪಯುಕ್ತಳಾಗಿ ಹನುಮಂತನನ್ನು ನೋಡಿ ನಿಷ್ಠುರವಚನಗಳಿಂದ "ಎಲೇ ಕಪಿಯೆ ಕೇಳು. ನಾನು ರಾಕ್ಷಸೇಶ್ವರನಾಗಿ ಮಹಾತ್ಮನಾದ ರಾವಣೇಶ್ವರನ ಆಜ್ಞೆಯಿಂದ ಈ ಪಟ್ಟಣವನ್ನು ಕಾವುಕೊಂಡಿರುವ ಲಂಕಾದೇವತೆಯು, ನನ್ನ ಅಪ್ಪಣೆಯಿಲ್ಲದೆ ಒಳಹೊಕ್ಕು ಈ ಪಟ್ಟಣಕ್ಕೆ ಒಬ್ಬರೂ ಹೋಗಬಾರದು, ನೀನು ನನ್ನ ಅಪ್ಪಣೆಯಿಲ್ಲದೆ ಒಳಹೊಕ್ಕು ಬಂದೆಯಾದಕಾರಣ ಇಲ್ಲಿ ಪ್ರಾಣಗಳನ್ನು ಬಿಟ್ಟು ಭೂಶಯನವನ್ನು ಮಾಡಲುಳ್ಳವನು, ನೀನ್ಯಾರೆಂದು ನನ್ನನ್ನು ಕೇಳಿದೆಯಲ್ಲ; ನಾನು ಲಂಕಾಧಿದೇವತೆಯಾಗಿ ಲಂಕಾಪಟ್ಟಣವಾಗಿ ಲಂಕಾಪಟ್ಟಣವನ್ನು ಕಾದುಕೊಂಡಿರುವವಳು!" ಎಂದು ನುಡಿದಳು.

ಆ ಮಾತನ್ನು ಕೇಳಿ ಹನುಮಂತನು ಬೆಟ್ಟದಮರ್ಯಾದೆಯಲ್ಲಿ ಬೆಳೆದು ಸನ್ನದ್ಧನಾಗಿ ಭಯಂಕರವಾದ ಆ ಸ್ತ್ರೀಯನ್ನು ನೋಡಿ "ಎಲೈ ದೇವಿಯೆ, ಈ ಕೋಟೆಯನ್ನೂ ಮುತ್ತಿನ ತೋರಣಗಳುಳ್ಳ ಪಟ್ಟಣವನ್ನೂ ಈ ಪಟ್ಟಣದ ಸಮೀಪದಲ್ಲಿರುವ ವನಗಳನ್ನೂ ಈ ಪಟ್ಟಣದ ಒಳಗಿರುವ ಉದ್ಯಾನವನಗಳನ್ನೂ ಅರಮನೆಗಳನ್ನೂ ನೋಡಬೇಕೆಂದು ಬಂದೆನು" ಎಂದು ನುಡಿದನು

ಲಂಕಾದೇವಿಯು "ಎಲೈ ವಾನರಾಧಮನೆ, ನೀನು ಮಹಾ ಅಪ್ರಬುದ್ಧನು, ನನ್ನನ್ನು ಜಯಿಸದೇ ಈ ಪಟ್ಟಣವು ನಿನಗೆ ನೋಡುವುದಕ್ಕೆ ಅಸಾಧ್ಯವು" ಎಂದು ನುಡಿದಳು.

ಹನುಮಂತನು 'ಎಲೈ ಲಂಕಾಧಿದೇವತೆಯೆ, ನಾನು ಪಟ್ಟಣವನ್ನು ನೋಡಿ ನನ್ನ ದಾರಿಗೊಂಡು ಹೋಗುತ್ತೇನೆ; ಇದರಿಂದ ನಿನಗೆ ಬರುವ ಹಾನಿಯೇನು?" ಎಂದು ಕೇಳಿದನು.

ಆ ಮಾತನ್ನು ಕೇಳಿ ಲಂಕಾದೇವತೆಯು ತನ್ನ ಅಂಗೈಯಿಂದ ಹನುಮಂತನನ್ನು ಒಂದು ಪೆಟ್ಟು ಹೊಡೆದಳು; ಹನುಮಂತನು ಅತ್ಯಂತ ಕೋಪಯುಕ್ತನಾಗಿ ತನ್ನ ಎಡಗೈ ಬೆರಳುಗಳನ್ನು ಮಡುಹಿ ಮುಷ್ಟಿಯನ್ನು ಅಮರಿಸಿ

ಕೊಂಡು ಅವಳು ಸ್ತ್ರೀಯೆಂಬ ದಯೆಯಿಂದ ಒಂದೇಟು ಮೆಲ್ಲಗೆ ಹೊಡೆದನು, ಆ ಪೆಟ್ಟು ತಾಕಿ ಲಂಕಾದೇವಿಯು ಕಂಗೆಟ್ಟು ಮುಖಕಾಂತಿ ಗುಂದಿ ಭೂಮಿಯಮೇಲೆ ಬಿದ್ದಳು, ಆಮೇಲೆ ಹನುಮಂತನು ಅವಳು ಸ್ತ್ರೀಯೆಂಬ ದಯೆಯಿಂದ ಸುಮ್ಮನಿದ್ದನು ಆಗ ಲಂಕಾದೇವಿಯು ಕಂಗೆಟ್ಟು ಸ್ವರಗುಂದಿ ಬಿಕ್ಕುತ " ಎಲೈ ಕಪಿನಾಯಕ ನಾದ ಹನುಮಂತನೆ, ಲೋಕದಲ್ಲಿ ಸತ್ವವುಳ್ಳ ಬಲವಂತರು ಕಾರ್ಯವಶಕ್ಕಾಗಿ ಕ್ಷಮಿಸಿಕೊಂಡಿದ್ದು ಸಮಯಬಂ ದಲ್ಲಿ ತಮ್ಮ ಸತ್ವವನ್ನು ತೋರಿಸುವರು, ನಾನು ಮತ್ತೊಬ್ಬಳಲ್ಲ, ಲಂಕಾಪಟ್ಟಣವೇ ನಾನು, ಅಂಥಾ ನನ್ನನ್ನು ನಿನ್ನ ಪರಾಕ್ರಮದಿಂದ ಹೊಡೆದು ಕೆಡಹಿದೆ, ನೀನು ಮಹಾ ಬಲವಂತನು, ನಾನು ಒಂದು ಸತ್ಯವಚನವನ್ನು ಹೇಳು ವೆನು ಕೇಳು. ಪೂರ್ವದಲ್ಲಿ ಬ್ರಹ್ಮದೇವನು ನನಗೊಂದು ವರವನ್ನು ಕೊಟ್ಟನು, ಅದು ಯಾವುದೆಂದರೆ. ' ಎಲೆ ಲಂಕಾದೇವಿಯೆ, ಯಾವಾಗ ಒಂದು ಬಾರಿ ಒಂದು ಕಪಿಯು ಬಂದು ಬಲಾತ್ಕಾರದಿಂದ ನಿನ್ನನ್ನು ಹೊಡೆಯುವದೋ ಆಗ ನಿನ್ನಲ್ಲಿರುವ ರಾಕ್ಷಸರಿಗೆ ಕುಲಕ್ಷಯವೆಂದು ತಿಳಿ ' ಎಂಬದು; ಅಂಥಾ ಸಮಯಬಂದದ್ದರಿಂದ ಈಗ ನನ್ನನ್ನು ನೀನು ಹೊಡೆದೆಯಲ್ಲದೆ ಮತ್ತೊಂದಲ್ಲ, ಬ್ರಹ್ಮದೇವರ ವಾಕ್ಯವು ತಪ್ಪದು, ಸೀತಾದೇವಿಯ ನಿಮಿತ್ತವಾಗಿ ರಾಕ್ಷ ಸೇಶ್ವರನಾದ ರಾವಣನಿಗೂ ಸಮಸ್ತ ರಾಕ್ಷಸರಿಗೂ ಲಯಕಾಲವು ಬಂತು, ಈ ಅರ್ಥದಲ್ಲಿ ಸಂಶಯವಿಲ್ಲ, ಆದಕಾ ರಣ ನೀನು ಲಂಕಾಪಟ್ಟಣವನ್ನು ಒಳಹೊಕ್ಕು ನೋಡಿ ನಿನ್ನ ಮನಸ್ಸಿಗೆ ಬಂದುವನ್ನು ಸಾಧ್ಯಮಾಡಿಕೊ, ರಾಕ್ಷ ಸೇಶ್ವರನಾದ ರಾವಣನಿಂದ ಪರಿಪಾಲಿಸಲ್ಪಟ್ಟ ಈ ಪಟ್ಟಣವನ್ನು ಹೊಕ್ಕು ಹೋಗಿ ನೋಡಿ ನಿನ್ನ ಮನಸ್ಸುಬಂದಂತೆ ಸೀತಾದೇವಿಯನ್ನರಸಿ ನೋಡಿಕೊಂಡು ನೀನು ಬಂದ ದಾರಿಗೊಂಡು ಸುಖವಾಗಿ ಹೋಗು " ಎಂದು ಅಪ್ಪಣೆಕೊ ಟ್ಟು ಪಟ್ಟಣದ ಒಳಗೆ ಕಳುಹಿಸಿದಳು.

---

## ೪ ನೇ ಅಧ್ಯಾಯ

### ಹನುಮಂತನು ರಾವಣನ ಅಂತಃಪುರಕ್ಕೆ ಹೋದದ್ದು.

ಈ ಮರ್ಯಾದೆಯಲ್ಲಿ ಮಹಾ ಬಲಪರಾಕ್ರಮವುಳ್ಳ ಹನುಮಂತನು ಲಂಕಾಪಟ್ಟಣದ ಅಧಿದೇವತೆಯಾದ ಲಂಕಾದೇವಿಯನ್ನು ಜಯಿಸಿ ಎರಡನೇ ಕೋಟೆಯನ್ನು ದಾಟಿಹೋಗಿ ರಾವಣನು ಮೊದಲಾದ ಶತ್ರುಗಳ ತಲೆ ಯನ್ನು ಎಡಗಾಲಿಂದ ಮೆಟ್ಟಿ ಹೋಗುವಂತೆ ನೆಗೆದು ಅನೇಕ ಮುತ್ತಿನ ತೋರಣಗಳಿಂದಲೂ ಪುಷ್ಪಸರಗಳಿಂದ ಲೂ ಅಲಂಕರಿಸಲ್ಪಟ್ಟ ರಾಜಬೀದಿಯನ್ನೈದಿ ಅಲ್ಲಲ್ಲಿ ವಿನೋದಗೋಷ್ಠಿಗಳಾಗಿ ಕುಳಿತಿದ್ದ ರಾಕ್ಷಸರಿಂದಲೂ ವಜ್ರ ದಿಂದ ಕತ್ತಿದ ಜಾಳಾಂದ್ರ ಗವಾಕ್ಷಗಳುಳ್ಳ ಉಪ್ಪರಿಗೆಗಳಿಂದಲೂ ಮೇಘದಿಂದೊಪ್ಪುತಿರುವ ಗಗನದಂತೆ ಅತಿರಮಣೀ ಯವಾಗಿ ಪುಟವಿಕ್ಕಲ್ಪಟ್ಟ ಚಿನ್ನದ ಲೋವೆಗಳಿಂದ ಥಳಥಳಿಸುತಿದ್ದ ರಾಕ್ಷಸರ ಮನೆಯ ಸಾಲುಗಳಿಂದಲೂ ವಿಚಿತ್ರ ವರ್ಣವಾಗಿ ಪದ್ಮಸ್ವಸ್ತಿಕಾಕಾರವಾದ ರಂಗವಲಿಗಳಿಂದಲೂ ನಾನಾವರ್ಣವಾದ ಪುಷ್ಪತೋರಣಗಳಿಂದಲೂ ಅಲಂಕರಿ ಸಲ್ಪಟ್ಟ ಲಂಕಾಪಟ್ಟಣವನ್ನು ನೋಡಿ ಸಂತೋಷಪಟ್ಟನು. ಆ ಬಳಿಕ ರಾಮಕಾರ್ಯಕ್ಕೆ ಹಿತವಾಗಿ ಸುಗ್ರೀವ ನಿಂದ ಕಳುಹಿಸಲ್ಪಟ್ಟ ಹನುಮಂತನು ಒಂದು ಮನೆಯಿಂದ ಮತ್ತೊಂದು ಮನೆಯ ಮೇಲುಮಚ್ಚಿಗೆಗೆ ನೆಗೆದು ನಾನಾವರ್ಣವಾದ ಮನೆಗಳನ್ನು ನೋಡುತ ಅಲ್ಲಲ್ಲಿ ಹೋಮಮಾಡುತಿರುವ ರಾಕ್ಷಸರ ಮಂತ್ರೋಚ್ಚಾರಣೆಗ ಳನ್ನು ಕೇಳುತ ವೇದಾಧ್ಯಯನನಿರತರಾದ ರಾಕ್ಷಸರ ವೇದಘೋಷಗಳನ್ನು ಕೇಳುತ ಹೃದಯ ಕಂಠ ಶಿರಸ್ಸುಗಳೆಂ ಬ ತ್ರಿಸ್ಥಾನಗಳಲ್ಲಿಯೂ ದೋಷವಿಲ್ಲದೆ ಅಪ್ಸರಸ್ತ್ರೀಯರಹಾಗೆ ಯವ್ವನದೇಳಿಗೆಯಿಂದ ಕೊಬ್ಬಿದ ಸ್ತ್ರೀಯರು ಮನೋಹರವಾಗಿ ಮಂದರ ಮಧ್ಯಮ ತಾರಸ್ವರಗಳಿಂದ ಗಾನಮಾಡುವ ಸಂಗೀತಗಳನ್ನೂ ಕಾಂಚೀದಾಮದಲ್ಲಿ ಕಿರುಘಂಟೆಗಳ ಧ್ವನಿಗಳನ್ನೂ ರತ್ನಮಯವಾದ ಸೋಪಾನದಲ್ಲಿ ಸಂಚರಿಸುವವರ ಕಾಲಂದಿಗೆಗಳು ಸೋಪಾನದ ರತ್ನಗಳನ್ನು ತಾಕುವುದರಿಂದ ಹುಟ್ಟುವ ಝಣಝಣತ್ಕಾರಗಳನ್ನೂ ಕೈಚಪ್ಪಳೆಗಳಿಂದ ಹುಟ್ಟುವ ಒಳಗಳ ರವ ಗಳನ್ನೂ ರಾವಣನ ವಂಶಾವಳಿ ಬಿರುದಾವಳಿಗಳನ್ನು ಕೊಂಡಾಡುವ ಬಿರುದು ಗದ್ಯಗಳನ್ನೂ ಕೇಳುತ—ಅಲ್ಲಲ್ಲಿ ಚಾ

ಬೀದಿಗಳಲ್ಲಿ ಪಟ್ಟಣದ ಕಾವಲುಗಾರರಾದ ರಾಕ್ಷಸಸಮೂಹಗಳನ್ನೂ ಆ ರಾಕ್ಷಸಸಮೂಹಗಳಲ್ಲಿ ಬೆರೆದು ನೋಡುತಿದ್ದ ಬೇಹುಗಾರರನ್ನೂ ದೀಕ್ಷಿತರಾದ ಸನ್ಯಾಸಿಗಳನ್ನೂ ಜಟಾಧಾರಿಗಳಾಗಿ ದರ್ಭೆಪವಿತ್ರವುಳ್ಳ ತಪಸ್ವಿಗಳನ್ನೂ ಶತ್ರುಜಯಾರ್ಥವಾಗಿ ಮಾರಣಹೋಮಗಳನ್ನು ಮಾಡುತಿದ್ದ ರಾಕ್ಷಸರನ್ನೂ ಬಲೆಗೋಲು ದೊಣ್ಣೆ ಬೀಸುಗೋಲು ಮೊದಲಾದ ಆಯುಧಗಳನ್ನು ಧರಿಸಿಕೊಂಡು ಒಂದು ಕಣ್ಣುಳ್ಳವರಾಗಿಯೂ ಒಂದು ಕಿವಿಯುಳ್ಳವರಾಗಿಯೂ ಭಯಂಕರವಾದ ಮುಖವುಳ್ಳವರಾಗಿಯೂ ವಿಕಟಾಂಗಿಗಳಾಗಿಯೂ ಅತ್ಯಂತ ವಾಮನಸ್ವರೂಪಿಗಳಾಗಿಯೂ ಕೆಲವರು ಬಿಲ್ಲುಗಳನ್ನೂ ಕೆಲವರು ಖಡ್ಗಗಳನ್ನೂ ಕೆಲವರು ಒಂದು ಪೆಟ್ಟು ಹೊಡೆದರೆ ನೂರುಮಂದಿಯನ್ನು ಸಂಹರಿಸುವಂಥಾ ಶತಘ್ನಿಯೆಂಬ ಆಯುಧವನ್ನೂ ಹಿಡಿದು ನಾನಾವಿಧವಾದ ಕವಚಗಳನ್ನು ತೊಟ್ಟಿದ್ದ ರಾಕ್ಷಸರನ್ನೂ ಅತ್ಯಂತ ಘನಗಾತ್ರರಲ್ಲದೆಯೂ ಅತ್ಯಂತ ಕೃಶಾಂಗಿಗಳಲ್ಲದೆಯೂ ಅತಿ ದೀರ್ಘದೇಹಿಗಳಲ್ಲದೆಯೂ ಅತಿ ಗಿಡ್ಡರಲ್ಲದೆಯೂ ಅತ್ಯಂತ ಕೆಂಪು ಅತ್ಯಂತ ಕಪ್ಪಾದವರಲ್ಲದೆಯೂ ಇರುವ ರಾಕ್ಷಸರನ್ನೂ ಅತ್ಯಂತ ಗುಜ್ಜಾರಿಗಳಾಗಿಯೂ ಬಹುರೂಪಿಗಳಾಗಿಯೂ ವಿರೂಪಿಗಳಾಗಿಯೂ ಅತ್ಯಂತ ರೂಪವಂತರಾಗಿಯೂ ಅತ್ಯಂತ ತೇಜಸ್ವಿಗಳಾಗಿಯೂ ಇರುವ ರಾಕ್ಷಸರನ್ನೂ ಟೆಕ್ಕೆಯುಗಳನ್ನು ಹಿಡಿದುಕೊಂಡೂ ಶಕ್ತಿವೃಕ್ಷಗಳು ಪಟ್ಟಿಸಗಳು ಈಟಿಗಳು ಹಗ್ಗಗಳು ಉರುಲು ಹಗ್ಗಗಳು ಮೊದಲಾದವನ್ನು ಧರಿಸಿಕೊಂಡು ಸ್ವರ್ಣಾಭರಣಭೂಷಿತರಾಗಿ ನಾನಾವೇಷಗಳನ್ನು ಧರಿಸಿಕೊಂಡು ತಮ್ಮ ತಮ್ಮ ಮನಸ್ಸುಬಂದಂತೆ ಸಂಚರಿಸುತಲಿದ್ದವರನ್ನೂ ಅತಿ ತೀಕ್ಷ್ಣವಾದ ತ್ರಿಶೂಲ ವಜ್ರಾಯುಧಗಳನ್ನು ಧರಿಸಿಕೊಂಡು ರಾವಣನ ಅರಮನೆಯ ಬಾಗಿಲಪರ್ಯಂತ ಎಡೆಬಿಡದೆ ಇದ್ದ ರಾಕ್ಷಸಸಮೂಹಗಳನ್ನೂ ನೋಡುತ ತ್ರಿಕೂಟಪರ್ವತದಮೇಲೆ ಅತಿ ರಮಣೀಯವಾಗಿ ಒಪ್ಪುತ ಸುವರ್ಣಮಯವಾದ ತೋರಣಗಳಿಂದ ರಮ್ಯವಾಗಿದ್ದ ರಾಕ್ಷಸೇಶ್ವರನಾದ ರಾವಣನ ಅರಮನೆಯನ್ನು ಕಂಡನು! ಆ ಅರಮನೆಯು ಕಮಲಾಕಾರವಾಗಿ ರತ್ನಖಚಿತವಾಗಿ ಗಂದವಟಿಗೆಯ ಮೊಳೆಗಳಿಂದ ಕಂಗೊಳಿಪ ಸುವರ್ಣಮಯವಾದ ಪಾಳಿಗಳಿಂದಲೂ ಸ್ಫಟಿಕ ಶಿಲೆಗಳ ಕತ್ತರಿಡೆಸೆಗಳಿಂದಲೂ ರಮಣೀಯವಾಗಿ ದೇವೇಂದ್ರನ ಅಮರಾವತೀ ಪಟ್ಟಣದಂತೆ ಅತಿ ರಮ್ಯವಾಗಿ ಎಲ್ಲಿನೋಡಿದರೂ ಉತ್ತಮಾಶ್ವಗಳ ಹೇಷಿತಧ್ವನಿಗಳಿಂದಲೂ ರತ್ನಖಚಿತವಾದ ಸುವರ್ಣಪಲ್ಲಕ್ಕಿಗಳಿಂದಲೂ ಅತ್ಯದ್ಭುತವಾದ ಕುದುರೆಗಳಿಂದಲೂ ಶರತ್ಕಾಲದ ಮೇಘಮಂಡಲಕ್ಕೆ ಸಮಾನವಾದ ನಾಲ್ಕು ಕೊಂಬುಗಳುಳ್ಳ ಆನೆಗಳಿಂದಲೂ ಅಲಂಕರಿಸಲ್ಪಟ್ಟಂಥಾದ್ದಾಗಿ ಬಾಗಿಲಲೋವೆಗಳಲ್ಲಿ ನವಿಲು ಪಾರಾವತ ಗಿಣಿ ಹಂಸೆಗಳು ಮೊದಲಾದ ಪಕ್ಷಿಗಳಿಂದ ರಮಣೀಯವಾಗಿ ಮಹಾಪರಾಕ್ರಮಿಗಳಾದ ಅನೇಕಸಾವಿರಮಂದಿ ರಾಕ್ಷಸರಿಂದ ಹೊರಗಾವಲು ಕಾಯಲ್ಪಟ್ಟಂಥಾದ್ದಾಗಿತ್ತು! ಅಂಥಾ ಅರಮನೆಯನ್ನು ಕಂಡು ಹನುಮಂತನು ಅದರ ಅಂತಃಪುರವನ್ನು ಪ್ರವೇಶಿಸಿದನು, ಆ ಅಂತಃಪುರವು ಸುವರ್ಣಮಯವಾದ ತೊಟ್ಟಿ ಗಟ್ಟಿನ ಶಯ್ಯಾಗೃಹಗಳುಳ್ಳಂಥಾದ್ದಾಗಿ ಅನರ್ಘ್ಯವಾದ ಮುತ್ತಿನ ಸರಗಳ ತೋರಣಗಳುಳ್ಳಂಥಾದ್ದಾಗಿ ಉತ್ತಮವಾದ ಕರಿಯಗಿಲು ಶ್ರೀಗಂಧದ ಸಾರಣೆಗಳುಳ್ಳಂಥಾದ್ದಾಗಿತ್ತು!

## ೫ನೇ ಅಧ್ಯಾಯ.

### ಹನುಮಂತನು ಸೀತಾದೇವಿಯನ್ನು ಹುಡುಕಿದ್ದು.

ಈ ಮರ್ಯಾದೆಯಲ್ಲಿ ಹನುಮಂತನು ರಾವಣನ ಅರಮನೆಯನ್ನು ಹೊಕ್ಕ ಸಮಯದಲ್ಲಿ ಆತನ ವಿಲಾಸಾರ್ಥವಾಗಿ ಬಂದನೋ ಎಂಬಂತೆ ಆ ಉಪ್ಪರಿಗೆಯ ಮಧ್ಯಗತವಾಗಿ ಸಂಪೂರ್ಣಕಲಾಯುಕ್ತನಾಗಿ ಅತಿಪ್ರಕಾಶಮಾನವಾದ ಬೆಳದಿಂಗಳನ್ನು ಬೀರುತ ಚಂದ್ರನು ಗೋಸಮೂಹದಲ್ಲಿ ಒಪ್ಪುತಿರುವ ಬಿಳೀ ವೃಷಭರಾಜನಂತೆ ನಕ್ಷತ್ರಮಂಡಲದಲ್ಲಿ ಒಪ್ಪುತಿದ್ದನು! ಆಗ ಚಂದ್ರನು ನೋಡುವವರ ಕಣ್ಣುಗಳಿಗಿಂಪಾಗಿ ಹಗಲಿನಲ್ಲಿ ಸೂರ್ಯಕಿರಣಗಳಿಂದ ಕಂದಿದ ಪೈರು ಪಚ್ಚೆಗಳಿಗೆ ಶೈತ್ಯವನ್ನುಂಟುಮಾಡುತ ತನ್ನ ಪ್ರಕಾಶದಿಂದ ಸಮಸ್ತವಸ್ತುಗಳನ್ನೂ ಪ್ರಕಟಮಾಡುತ ಮಂದರ ಪರ್ವತದಲ್ಲಿರುವ ವನಲಕ್ಷ್ಮಿಯಂತೆಯೂ ಸಾಯಂಕಾಲದಲ್ಲಿ ತನ್ನನ್ನು ಕಂಡು

ಉಕ್ಕುವ ಸಮುದ್ರದಂತೆಯೂ ಕೊಳಗಳಲ್ಲಿರುವ ಬಿಳೀದಾವರೆಯ ಕಮಲಗಳಂತೆಯೂ ಸೌಂದರ್ಯದಿಂದೊಪ್ಪುತ ಕಾಂತಿಯೊಡನೆ ಕೂಡಿ ಬೆಳ್ಳೀ ಪಂಜರದಲ್ಲಿರುವ ಹಂಸಪಕ್ಷಿಯಂತೆಯೂ ಮಂದರಪರ್ವತದಂತೆಯೂ ಕೋಡುಗಲ್ಲಿನಮೇಲೆಯೇರುವ ಸಿಂಹರಾಜನಂತೆಯೂ ಮದ್ದಾನೆಯ ಮೇಲೆ ಕುಳಿತಿರುವ ವೀರಭಟನಂತೆಯೂ ಅಂತರಿಕ್ಷಮಾರ್ಗದಲ್ಲಿ ಒಪ್ಪುತ ಅತಿ ತೀಕ್ಷ್ಣವಾದ ಕೊಂಬುಗಳುಳ್ಳ ಬಿಳೀ ವೃಷಭರಾಜನಂತೆಯೂ ಅತ್ಯುನ್ನತವಾದ ಕೋಡುಗಲ್ಲುಗಳುಳ್ಳ ಕೈಲಾಸ ಪರ್ವತದಂತೆಯೂ ಚಿನ್ನದ ಕಟ್ಟಿನ ಕೊಂಬುಗಳುಳ್ಳ ಐರಾವತದಂತೆಯೂ ಪರಿಪೂರ್ಣವಾದ ಮಂಡಲದಿಂದೊಪ್ಪುತ ಅಹಿತವಾದ ಕಿರಣಗಳು ಇಬ್ಬನಿಗಳು ಎಂಬ ದೋಷರಹಿತನಾಗಿ ರಾಹು ಹಿಡಿತವೆಂಬ ಉಪದ್ರವಿಲ್ಲದವನಾಗಿ ಪ್ರಕಾಶ ಲಕ್ಷ್ಮಿಯಂತೆ ನಿರ್ಮಲಾಂಗನಾಗಿ ಒಪ್ಪುತ ಕಪ್ಪಾದ ಕಲ್ಲರೆಯಮೇಲಿರುವ ಸಿಂಹರಾಜನಂತೆಯೂ ರಣಾಂಗಣವನ್ನೈದಿದ ಐರಾವತದಂತೆಯೂ ರಾಜ್ಯಪದವಿಯನ್ನು ಪಡೆದ ಅರಸನಂತೆಯೂ ಪ್ರಕಾಶಯುಕ್ತನಾಗಿದ್ದನು!

ಹೀಗೆ ಒಪ್ಪುತಿದ್ದ ಚಂದ್ರನ ಪ್ರಕಾಶದಿಂದ ಇರುಳು ತೊಲಗಲು ಆ ಮಧ್ಯರಾತ್ರಿಯಲ್ಲಿ ಮಾಂಸಾಹಾರಿಗಳಾದ ರಾಕ್ಷಸರು ಮಾಂಸಭಕ್ಷಣಮಾಡುತ ಸ್ತ್ರೀಯರೂ ಪತಿಗಳೂ ಪ್ರಣಯಕಲಹವೆಂಬ ದೋಷಕಳೆದ ಪ್ರದೋಷಕಾಲದಲ್ಲಿ ಸುಖವಾಗಿರುತಿದ್ದರು, ಎಲ್ಲಿ ನೋಡಿದರೂ ಕಿವಿಗಿಂಪಾದ ವೀಣೆಗಳ ಮನೋಹರವಾದ ಧ್ವನಿಗಳು ಕೇಳಲ್ಪಡುತಿದ್ದವು, ಸದ್ವರ್ತನವುಳ್ಳ ಪತಿವ್ರತಾಸ್ತ್ರೀಯರು ತಮ್ಮ ಮನೆಗಳಲ್ಲಿ ತಮ್ಮ ಪತಿಗಳೊಡನೆ ಶಯನಮಾಡಿಕೊಂಡಿದ್ದರು, ರಾತ್ರಿಸಂಚಾರಕರಾಗಿ ಭಯಂಕರವಾದ ಚಾರಿತ್ರವುಳ್ಳ ರಾಕ್ಷಸರು ತಮ್ಮ ತಮ್ಮ ವ್ಯಾಪಾರಗಳಿಗೆ ಹೊರಡುತಿದ್ದರು, ಆ ರಾಕ್ಷಸರು ಮದಸೊಕ್ಕಿದವರಾಗಿಯೂ ಅನೇಕ ಭದ್ರಪೀಠಗಳಿಂದ ಇಟ್ಟಣಿಸಿದವರಾಗಿಯೂ ಉಬ್ಬಿಕೊಬ್ಬಿ ತಮಿಗೆ ಸರಿಯಾರೂ ಇಲ್ಲವೆಂದು ನುಡಿದಾಡುವವರಾಗಿಯೂ ತಮ್ಮ ವ್ಯಾಪಾರನಿಮಿತ್ತವಾಗಿ ತಿರುಗಾಡಿ ಬಂದು ಆಯುಧಗಳನ್ನು ತತ್ತಸ್ಥಾನಗಳಲ್ಲಿರಿಸುವವರಾಗಿಯೂ ಸುರೆಯ ಮದದಿಂದ ಮದಿಸಿ ಪೂರ್ವೋತ್ತರ ಸಂಗತಿಯಿಲ್ಲದೆ ಅಸಂಗತವಾದ ಅಪದ್ಧಪ್ರಲಾಪಗಳನ್ನು ನುಡಿಯುತಿದ್ದವರಾಗಿಯೂ ದುರ್ವಾರ್ತೆಯನ್ನೂ ಅನ್ಯೋನ್ಯ ಬೈದಾಟಗಳನ್ನೂ ಆಚರಿಸುವಂಥಾವರಾಗಿಯೂ ತಮ್ಮ ಸ್ತ್ರೀಯರನ್ನು ಬಿಗಿದಪ್ಪಿ ಮುಂಗುರುಳಿಡಿದು ಮುದ್ದಾಡಿ ಅವರ ಕದಂಪುಗಳಲ್ಲಿ ನಾನಾವಿಚಿತ್ರವಾದ ಮಕರಿಕಾಪತ್ರಗಳನ್ನು ಬರೆದು ಆ ಸ್ತ್ರೀಯರಮೇಲೆ ಕೈಗಳನ್ನು ಹಾಕಿಕೊಂಡಿರುವವರಾಗಿಯೂ ತಮ್ಮ ಪ್ರಾಣಕಾಂತರ ಶಯ್ಯಾಗೃಹಕ್ಕೆ ಅಲಂಕರಿಸಿಕೊಂಡು ಬರುತಿದ್ದವರಾಗಿಯೂ ತಮ್ಮ ಪ್ರಾಣಕಾಂತರೊಡನೆ ಇಷ್ಟಾಲಾಪಗಳನ್ನು ಮಾಡುತಿದ್ದವರಾಗಿಯೂ ನಿದ್ರೆ ಮಾಡುವವರಾಗಿಯೂ ರೂಪವತಿಯರಾದ ಸ್ತ್ರೀಯರ ಹಾಸ್ಯರಸಗೋಷ್ಠಿಯಲ್ಲಿ ವಿನೋದಿಸಿಕೊಂಡಿರುವವರಾಗಿಯೂ ಇದ್ದರು! ಕೆಲವು ಸ್ತ್ರೀಯರು ಪ್ರಣಯಕಲಹದಿಂದ ಪ್ರಾಣಕಾಂತರೊಡನೆ ಮುನಿದು ನಿಟ್ಟುಸುರು ಬಿಡುತಿದ್ದರು, ಕೆಲವರು ರಾವಣನಿಂದ ಸತ್ಕಾರವನ್ನು ಪಡೆದು ಆತನನ್ನು ಸ್ತುತಿಸಿ ಕೊಂಡಾಡುತಿದ್ದರು, ಆತನಿಂದ ಯುದ್ಧದಲ್ಲಿ ಮುರಿದ ಕೆಲವು ಪಟುಭಟರು ಮಂತ್ರೌಷಧಿಗಳಿಂದ ತಡೆಯಲ್ಪಟ್ಟ ಸರ್ಪದಂತೆ ಬಿಸುಸುಯ್ಯುತ ಮೊರೆಯುತಿದ್ದರು!

ಹನುಮಂತನು ಅವರೆಲ್ಲರನ್ನು ನೋಡುತ ಮನೋಹರವಾದ ಹೆಸರುಳ್ಳವರಾಗಿ ಬುದ್ಧಿ ಸಂಪನ್ನರಾದ ಪ್ರಧಾನರನ್ನೂ ನಾನಾಪ್ರಕಾರವಾಗಿ ವಿಚಿತ್ರವಾದ ಹೆಸರುಗಳುಳ್ಳ ಸದ್ಗುಣ ಸಂಪನ್ನರಾದ ಗುರಿಕಾರರನ್ನೂ ನೋಡುತ ತಮ್ಮ ತನುಕಾಂತಿಗಳಿಂದ ಬೆಳಗುತಿದ್ದ ರೂಪವತಿಯರಾದ ಸ್ತ್ರೀಯರನ್ನೂ ತನುಸೊಬಗುಳ್ಳವರಾಗಿ ರೂಪವಂತರಾದ ಸ್ತ್ರೀಯರನ್ನೂ ತನುಸೊಬಗುಳ್ಳವರಾಗಿ ಅಂತಃಕರಣಶುದ್ಧಿಯುಳ್ಳ ಸ್ತ್ರೀಯರನ್ನೂ ಚಂದ್ರನಲ್ಲಿ ಆಸಕ್ತಿಯುಳ್ಳ ನಕ್ಷತ್ರಗಳಂತೆ ತಮ್ಮ ಪ್ರಾಣಕಾಂತರಲ್ಲಿ ಅತ್ಯಂತ ಪ್ರಿಯವುಳ್ಳವರನ್ನೂ ತಮ್ಮ ತನುಕಾಂತಿಗಳಿಂದೊಪ್ಪುತ ಲಜ್ಜೆಯಿಂದ ಮರೆಸಲ್ಪಟ್ಟ ಕಾಮಾಭಿಲಾಷೆಯುಳ್ಳ ಪ್ರಾಣಕಾಂತರಿಂದ ತಕ್ಕೈಸಲ್ಪಟ್ಟವರಾಗಿಯೂ ಯವ್ವನದೇಳಿಗೆಯಿಂದ ತಮ್ಮ ಪ್ರಾಣಕಾಂತರನ್ನು ತಕ್ಕೈಸಿಕೊಂಡು ಮೈಮರೆತು ಬಿಡದೆ ಇದ್ದ ಸ್ತ್ರೀಯರನ್ನೂ ಉಪ್ಪರಿಗೆಗಳಲ್ಲಿ ತಮ್ಮ ಪ್ರಾಣಕಾಂತರ ತೊಡೆಗಳಮೇಲೆ ಕುಳಿತುಕೊಂಡಿದ್ದ ಸ್ತ್ರೀಯರನ್ನೂ ಪ್ರಾಣಕಾಂತರಲ್ಲಿ ಅತ್ಯಂತ

ಪ್ರಿಯವುಂಟಾದ ಧರ್ಮಬುದ್ಧಿಯುಳ್ಳವರನ್ನೂ ಮದನಾಭಿಲಾಷೆಯಿಂದ ಕಂಗೆಟ್ಟು ಕಾತರಿಸುತ್ತಿದ್ದ ಸ್ತ್ರೀಯರನ್ನೂ ತಮ್ಮ ಮನೆಗಳಲ್ಲಿ ಅತ್ಯಂತ ಸಂತೋಷದಿಂದ ಸಂಚರಿಸುತ್ತಿದ್ದ ಚಂದ್ರನ ಕಾಂತಿಯಂತೆ ಕಾಂತಿಯುಳ್ಳ ಸ್ತ್ರೀಯರನ್ನೂ ವಜ್ರತಳುಪಿನಂತೆ ತನುಸೊಬಗುಳ್ಳ ಪ್ರಿಯರಲ್ಲಿ ಶೋಭನವಾದ ಸಮದೃಷ್ಟಿಯುಳ್ಳ ಸ್ತ್ರೀಯರನ್ನೂ ವಾರೆಕಣ್ಣುಗಳುಳ್ಳ ಸ್ತ್ರೀಯರನ್ನೂ ಮಿಂಚಿನ ಸಮೂಹದಂತೆ ಹೊಳೆಯುತ್ತಿದ್ದ ಸುವರ್ಣಾಭರಣವುಳ್ಳ ಸ್ತ್ರೀಯರನ್ನೂ ನೋಡಿ ತಾನು ಹುಡುಕುವದಕ್ಕೆ ಬಂದ ರಾಜಕುಮಾರತಿಯಾಗಿ ಶೋಭನಾಂಗಿಯಾಗಿ ಪುಷ್ಪಿತವಾದ ಲತೆಯಂತೆ ಸುಕುಮಾರಾಂಗಿಯಾಗಿ ಪೂರ್ವದ ಹಿರಿಯರು ನಡೆದ ಸನ್ಮಾರ್ಗವಲ್ಲಿಯೇ ನಡೆಯುವಂಥಾವಳಾಗಿ ಯಾವಾಗಲೂ ಶ್ರೀರಾಮನ ಪಾದಾರವಿಂದಗಳಲ್ಲಿಯೇ ಧ್ಯಾನದೃಷ್ಟಿಯುಳ್ಳವಳಾಗಿ ಪತಿವ್ರತಾ ಸ್ತ್ರೀಯರಲ್ಲಿ ಉತ್ತಮಳಾಗಿ ವಿರಹಾಗ್ನಿಯಿಂದ ಬೆಂದು ಅನವರತ ಕಣ್ಣೀರು ಬಿಡುವಂಥಾವಳಾಗಿ ಶ್ರೀರಾಮನ ಸಮೀಪದಲ್ಲಿದ್ದಾಗ ವನದಲ್ಲಿರುವ ನವಿಲಿನಂತೆ ಮನೋಹರವಾದವಳಾಗಿ ಮಿತಿಯಿಲ್ಲದ ಕ್ರಯವುಳ್ಳ ಮೊಗಪಿನ ಚಿಂತಾಕ ಪದಕವನ್ನು ಧರಿಸಿಕೊಂಡಿದ್ದವಳಾಗಿ ಮನೋಹರವಾದ ಯುವೆಗಳುಳ್ಳವಳಾಗಿ ಶಂಖದಂತೆ ಒಟುವಾಗಿ ಉದ್ದವಾಗಿ ನುಣುಪಾದ ಕೊರಳುಗಳುಳ್ಳವಳಾಗಿದ್ದು ಆತನನ್ನಗಲಿ ಮಂಜುಮುಸುಕಿದ ಚಂದ್ರನ ಕಳೆಯಂತೆಯೂ ಧೂಳುಮುಸುಕಿದ ಸುವರ್ಣದ ಸಲಾಕಿಯಂತೆಯೂ ಬಿರುಗಾಳಿಯಿಂದ ಕೊಡಹಲ್ಪಟ್ಟ ಸಾಯಂಕಾಲದ ಮೇಘದಂತೆಯೂ ಸಮಸ್ತ ಭೂಮಂಡಲಾಧಿಪತಿಯಾಗಿ ದುಃಖಾಕ್ರಾಂತನಾದ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನು ಕಾಣದೇ ಚಿಂತಾಕ್ರಾಂತನಾಗಿದ್ದನು.

## ೬ನೇ ಅಧ್ಯಾಯ.

## ರಾವಣನ ಅರಮನೆಯ ವರ್ಣನೆ.

ಆ ಬಳಿಕ ಕಾಮರೂಪಿಯಾದ ಹನುಮಂತನು ಅನೇಕ ಸ್ವರೂಪನಾಗಿ ಲಂಕಾಪಟ್ಟಣದಲ್ಲಿ ಮನೆಮನೆ ತಪ್ಪದೆ ಸಂಚರಿಸಿ ರಾವಣನ ಅರಮನೆಯನ್ನು ಹೊಕ್ಕು ಹೋಗಿ ನೋಡಬೇಕೆಂಬ ಬುದ್ಧಿಯಿಂದ ಆತನ ಅಂತಃಪುರಕ್ಕೆ ಹೋದನು; ಆ ಅರಮನೆಯು ಎಲ್ಲಿ ನೋಡಿದರೂ ಸ್ಫಟಿಕಸಿಲೆ ಬಿಗಿದ ಆಳ್ವೇರಿಯಿಂದಲೂ ಸುವರ್ಣಮಯವಾದ ಕೋಟೆಗಳಿಂದಲೂ ರಮಣೀಯವಾಗಿ ಸಿಂಹಗಳಿಂದ ಕಾಯಲ್ಪಟ್ಟ ವನದಂತೆ ಅತಿ ಪರಾಕ್ರಮಿಗಳಾದ ರಾಕ್ಷಸರಿಂದ ಕಾಯಲ್ಪಟ್ಟಂಥಾದ್ದಾಗಿ ನಾನಾವಿಚಿತ್ರವಾದ ಚಿನ್ನ ಬೆಳ್ಳಿಗಳ ತೋರಣಗಳಿಂದ ಅಲಂಕರಿಸಲ್ಪಟ್ಟಂಥಾದ್ದಾಗಿ ಅನೇಕ ವಿಚಿತ್ರವಾದ ಪಟಸಾಲೆಗಳಿಂದ ಮನೋಹರವಾಗಿ ರಣದಲ್ಲಿ ಹಿಮ್ಮೆಟ್ಟದ ಗಜಾರೋಹಣ ಚತುರರಾದ ಪಟುಭಟರಿಂದ ರಕ್ಷಿಸಲ್ಪಟ್ಟಂಥಾದ್ದಾಗಿ ದಿಕ್ಕು ದಿಕ್ಕಿನಲ್ಲಿ ಮಹಾ ರಥಿಕರಾದ ವೀರಭಟರಿಂದ ಕಾಯಲ್ಪಟ್ಟಂಥಾದ್ದಾಗಿ ಸಿಂಹಚರ್ಮ ವ್ಯಾಘ್ರಚರ್ಮಗಳನ್ನು ತೊಟ್ಟು ಸುವರ್ಣಮಯವಾಗಿಯೂ ಬೆಳ್ಳೀಮಯವಾಗಿಯೂ ಇದ್ದ ಜರಿಗಳಿಂದ ಸನ್ನದ್ಧರಾಗಿ ರಥಾರೂಢರಾಗಿ ಬೊಬ್ಬಿಡುತ್ತಿದ್ದ ರಥಿಕರಿಂದ ರಕ್ಷಿಸಲ್ಪಟ್ಟಂಥಾದ್ದಾಗಿ ರತ್ನರಾಸಿಗಳಿಂದಲೂ ಅನರ್ಘ್ಯವಾದ ಹೇಮ ಪೀಠಗಳಿಂದಲೂ ಸುವರ್ಣಮಯವಾದ ಭೋಜನ ಪಾತ್ರೆಗಳಿಂದಲೂ ಇಟ್ಟಣಿಸಿದಂಥಾದ್ದಾಗಿ ದಿಕ್ಕುದಿಕ್ಕಿನಿಂದ ಬರುತ್ತಿದ್ದ ಮಹಾರಥಿಕರುಳ್ಳಂಥಾದ್ದಾಗಿ ಮಹತ್ತಾದ ರತ್ನ ಸಿಂಹಾಸನಗಳಿಂದ ಇಟ್ಟಣಿಸಲ್ಪಟ್ಟಂಥಾದ್ದಾಗಿ ರಾಕ್ಷಸರ ಭೀತಿಯಿಲ್ಲದೆ ಸಂಚರಿಸುತ್ತಿದ್ದ ಮೃಗ ಪಕ್ಷಿಗಳಿಂದ ರಮಣೀಯವಾಗಿ ಅನೇಕ ಸಾವಿರ ರಾಕ್ಷಸರಿಂದ ಪರಿಪೂರ್ಣವಾದಂಥಾದ್ದಾಗಿ ಎಲ್ಲಿ ನೋಡಿದರು ಸರ್ವಾಂಗ ಸೌಂದರ್ಯವುಳ್ಳ ಸ್ತ್ರೀಯರಿಂದ ಪರಿಪೂರ್ಣವಾಗಿ ಸಂತೋಷಯುಕ್ತರಾದ ಅನೇಕ ಸ್ತ್ರೀರತ್ನಗಳಿಂದ ಪರಿಪೂರ್ಣವಾದಂಥಾದ್ದಾಗಿ ಸಮುದ್ರಧ್ವನಿಯಂತೆ ಸ್ತ್ರೀಯರ ರತ್ನಾಭರಣಗಳ ಝಣಝುಣಾರವಗಳ ಧ್ವನಿಯುಳ್ಳಂಥಾದ್ದಾಗಿ ರಾಜಯೋಗ್ಯವಾದ ಕರಿಯಗಿಲು ದಿವ್ಯಚಂದನ ಧೂಪಗಳಿಂದ ಪರಿಮಳಿಸುತ್ತಿದ್ದಂಥಾದ್ದಾಗಿ ಮಹಾತ್ಮರಾದ ಪುಣ್ಯಜನರಿಂದ ಇಟ್ಟಣಿಸಿದಂಥಾದ್ದಾಗಿ ಭೇರಿ ಮದ್ದಳ ಶಂಖ ವೀಣಾವಾದ್ಯಗಳಿಂದ ಘಮಘಮಿಸುವಂಥಾದ್ದಾಗಿ ವೇದ ಪಠನಶೀಲರಾದ ರಾಕ್ಷಸರಿಂದ ಮಾಡಲ್ಪಟ್ಟ ನಿತ್ಯ ಹೋಮ ಪೌರ್ಣಮಾಸೇಷ್ಟಿಗಳುಂಟಾದ ಹೋಮ ಗಂಧವುಳ್ಳಂಥಾದ್ದಾಗಿ ಸಮುದ್ರದಂತೆ ಗಂಭೀರವಾದ ಧ್ವನಿಯೂ ಉಳ್ಳಂ

ಥಾದ್ದಾಗಿ ಎಲ್ಲಿನೋಡಿದರೂ ರತ್ನಾಭರಣಗಳಿಂದ ದೇದೀಪ್ಯಮಾನವಾದ ಅನೇಕ ಕುದುರೆಗಳಿಂದ ಒಪ್ಪುವಂಥಾದ್ದಾಗಿ ಲಂಕಾಪಟ್ಟಣಕ್ಕೆ ಆಭರಣವೋ ಎಂಬಂತೆ ಒಪ್ಪುತಿತ್ತು ! ಆ ಅರಮನೆಯಲ್ಲಿ ಹನುಮಂತನು ರಾವಣನಸಮೀಪದಲ್ಲಿ ಸಂಚರಿಸಿಕೊಂಡು ಒಂದು ಮನೆಯಿಂದ ಮತ್ತೊಂದು ಮನೆಗೆ ಹೋಗುತ ಆ ರಾಕ್ಷಸನ ಉಪ್ಪರಿಗೆಗಳನ್ನೂ ಉದ್ಯಾನ ವನಗಳನ್ನೂ ಅಂಜದೇ ಹೊಕ್ಕು ನೋಡುತ ಮುಂದೆ ನಡೆದು ರಾವಣನ ಪ್ರಧಾನನಾದ ಪ್ರಹಸ್ತನ ಮನೆಗೆ ಹೋಗಿ ಅಲ್ಲಿಂದ ಕುಂಭಕರ್ಣನ ಮನೆಗೆ ಹೋಗಿ ಅಲ್ಲಿಂದ ವಿಭೀಷಣನ ಮನೆಗೆ ಹೋಗಿ ಅಲ್ಲಿಂದ ಮಹೋದರನೆಂಬ ರಾಕ್ಷಸನ ಮನೆಗೆ ಹೋಗಿ, ಅಲ್ಲಿಂದ ವಿರೂಪಾಕ್ಷನ ಮನೆಗೆ ನಡೆದು ಅಲ್ಲಿಂದ ವಿದ್ಯುಜ್ಜಿಹ್ವನ ಮನೆಗೂ ವಿದ್ಯುನ್ಮಾಲಿಯ ಮನೆಗೂ ವಜ್ರದಂಷ್ಟ್ರನ ಮನೆಗೂ ಧೂಮ್ರಾಕ್ಷನ ಮನೆಗೂ ಸಂಪಾತಿಯ ಮನೆಗೂ ಶುಕನ ಮನೆಗೂ ಸಾರಣನ ಮನೆಗೂ ಇಂದ್ರಜಿತ್ತುವಿನ ಮನೆಗೂ ಜಂಬುಮಾಲಿಯ ಮನೆಗೂ ಸುಮಾಲಿಯ ಮನೆಗೂ ರಶ್ಮಿಕೇತುವಿನ ಮನೆಗೂ ಸೂರ್ಯಶತ್ರುವಿನ ಮನೆಗೂ ವಜ್ರಕಾಯನ ಮನೆಗೂ ವಿದ್ಯುದ್ರೂಪನ ಮನೆಗೂ ಹೋಗಿ ತದನಂತರ ಘಸನು ವಿಘಸನು ಶುಖನಾಭನು ಚಕ್ರನು ಶಠನು ವಿಕಟನು ಅಶ್ವದಂಷ್ಟ್ರನು ರೋಮಶನು ಯುದ್ಧೋನ್ಮತ್ತನು ಮತ್ತನು ಧ್ವಜಗ್ರೀವನು ವಿದ್ಯುಜ್ಜಿಂಹನು ಇಂದ್ರಜಿಂಹನು ಹಸ್ತಿಮುಖನು ಕರಾಳನು ಪಿಶಾಚನು ಶೋಣಿತಾಕ್ಷನು ಮೊದಲಾದ ಅನೇಕ ರಾಕ್ಷಸರ ಮನೆಗಳಿಗೂ ಹೋಗಿ ಅವರವರ ಸಂಪತ್ತುಗಳನ್ನು ನೋಡಿ ಸೀತಾದೇವಿಯನ್ನು ಕಾಣದೆ ಶೂಲಾದಿ ಆಯುಧಗಳನ್ನು ಧರಿಸಿಕೊಂಡಿದ್ದಂಥಾ ಪಟುಭಟರಾದ ರಾಕ್ಷಸರಿಂದ ಸುತ್ತಲೂ ಕಾಯಲ್ಪಟ್ಟ ರಾಕ್ಷಸೇಶ್ವರನಾದ ರಾವಣನ ಅರಮನೆಗೆ ಹೋದನು ಅಲ್ಲಿ ಕೆಂಪಾಗಿ ಬಿಳುಪಾಗಿ ಅತಿವೇಗವುಳ್ಳ ಸಿಂಹಗಳನ್ನೂ ಮತಂಗ ಪರ್ವತದಲ್ಲಿ ಹುಟ್ಟಿದವಾಗಿ ಪರಗಜಗಳಿಗೆ ಹೆದ್ರೈಸದವಾಗಿ ಯುದ್ಧರಂಗದಲ್ಲಿ ಐರಾವತಕ್ಕೆ ಸಮಾನಗಳಾಗಿ ಪರಸೇನೆಗಳನ್ನು ಸಂಹರಿಸುವವಾಗಿ ಮಳೆಯನ್ನು ಸುರಿಯುವ ಮೇಘದಂತೆಯೂ ವಜ್ರಗಳುಳ್ಳ ಪರ್ವತದಂತೆಯೂ ಮೇಘಧ್ವನಿಯ ಮರ್ಯಾದೆಯಲ್ಲಿ ಬೃಂಹಿತಧ್ವನಿ ಮಾಡುತಿದ್ದ ಮದ್ದಾನೆಗಳನ್ನೂ ಸುವರ್ಣಮಯವಾದ ಜಲಧಾರೆಗಳನ್ನೂ ರತ್ನಮಯವಾದ ಗವಾಕ್ಷಿಗಳನ್ನೂ ಮನೋಹರವಾಗಿ ಒಪ್ಪುತಿದ್ದ ನಾನಾವಿಧವಾದ ಪಲ್ಲಕ್ಕಿ ದಂಡಿಗೆಗಳನ್ನೂ ನಾನಾವಿಧವಾದ ಲತಾಮಂಟಪಗಳನ್ನೂ ಚಪ್ಪರ ಮಾಳಿಗೆಗಳನ್ನೂ ವಿನೋದಗೋಷ್ಠಿಯ ಗಾಳೀಮಂಟಪಗಳನ್ನೂ ವಿಶ್ವಕರ್ಮನು ನಿರ್ಮಿಸಿದ ಕ್ರೀಡಾಪರ್ವತಗಳನ್ನೂ ಕಾಮಭೋಗಯೋಗ್ಯವಾದ ಶಯ್ಯಾಗೃಹಗಳನ್ನೂ ದಿವದಲ್ಲಿ ಸಂಭೋಗಯೋಗ್ಯವಾಗಿ ರಮ್ಯವಾದ ಮಂಟಪಗಳನ್ನೂ ನೋಡಿದನು. ಆ ಅರಮನೆಯು ಎಲ್ಲಿನೋಡಿದರೂ ಮಂದರಗಿರಿಪರ್ವತಕ್ಕೆ ಸಮಾನವಾಗಿದ್ದ ಗೋಪುರಗಳಿಂದಲೂ ರಮಣೀಯಗಳಾದ ಧ್ವಜಸ್ತಂಭಗಳಿಂದಲೂ ಪರಿಪೂರ್ಣವಾಗಿ ರತ್ನರಾಸಿಗಳಿಂದಲೂ ನಿಧಿನಿಕ್ಷೇಪಗಳಿಂದಲೂ ಪರಿಪೂರ್ಣವಾಗಿ ಅಲ್ಲಲ್ಲಿ ಕರ್ಮಕಾಂಡನಿಪುಣರಾದ ಬ್ರಾಹ್ಮಣೋತ್ತಮರಿಂದ ಮಾಡಲ್ಪಟ್ಟ ವಿಜಯಸಾಧನವಾದ ಹೋಮಕರ್ಮಗಳುಳ್ಳದ್ದಾಗಿ ಕುಬೇರನ ಅರಮನೆಗೆ ಸಮಾನವಾಗಿ ಸೂರ್ಯನು ತನ್ನ ಕಿರಣಗಳಿಂದ ಪ್ರಕಾಶಿಸುವಂತೆ ತನ್ನಲ್ಲಿದ್ದ ರತ್ನಕಾಂತಿಗಳಿಂದ ಬೆಳಗುತಿತ್ತು ! ಆ ರಾಕ್ಷಸೇಶ್ವರನ ಅರಮನೆಯಲ್ಲಿದ್ದ ಮಂಚಗಳೂ ರತ್ನಪೀಠಗಳೂ ಸುವರ್ಣಮಯವಾಗಿದ್ದವು ; ಭೋಜನಪಾತ್ರೆಗಳು ಸುವರ್ಣಮಯ ಬೆಳ್ಳಿಯಮಯವಾಗಿದ್ದವು ! ಅಂಥಾ ಅರಮನೆಯನ್ನು ಕಪಿಶ್ರೇಷ್ಠನಾದ ಹನುಮಂತನು ಹೊಕ್ಕು ಅಲ್ಲಿದ್ದ ಸಮಸ್ತ ವಸ್ತುಗಳನ್ನೂ ನೋಡುವಾಗ ಅದು ಎಲ್ಲಿನೋಡಿದರು ಮಧುಪಾನನಿಮಿತ್ತವಾಗಿ ನಿರ್ಮಿಸಲ್ಪಟ್ಟ ರತ್ನಮಯವಾದ ಪಾತ್ರೆಗಳಿಂದ ಇಟ್ಟಣಿಸಲ್ಪಟ್ಟು ಸ್ತ್ರೀಯರ ರತ್ನಮಯವಾದ ಕಾಲಂದುಗೆಗಳ ಕಾಂಚೀದಾಮದ ಧ್ವನಿಯುಳ್ಳದ್ದಾಗಿ ತಾಳ ಮದ್ದಳೆ ಸಂಗೀತ ಧ್ವನಿಗಳಿಂದಲೂ ಸಂಭೋಗರತ್ನಗಳಾದ ಸ್ತ್ರೀಯರಿಂದಲೂ ಪರಿಪೂರ್ಣವಾಗಿತ್ತು ! ಅಂಥಾ ಸೌಭಾಗ್ಯವನ್ನು ನೋಡುತ ಹನುಮಂತನು ರಾವಣನ ಅಂತಃಪುರವನ್ನು ಪ್ರವೇಶಿಸಿದನು

## ೭ನೇ ಅಧ್ಯಾಯ.

## ರಾವಣನ ಅರಮನೆಯ ವರ್ಣನೆ.

ಆ ಸಮಯದಲ್ಲಿ ರಾವಣಾಸುರನ ಅರಮನೆಯು ವರ್ಷಾಕಾಲದಲ್ಲಿ ಬೆಳ್ಳಕ್ಕಿಗಳ ಸಮೂಹವುಳ್ಳ ಮಿಂಚಿನೊಡನೆ ಕೂಡಿದ ಮೇಘಮಂಡಲದಂತೆ ಒಪ್ಪುತ ವೈಡೂರ್ಯ ರತ್ನಗಳಿಂದ ಕೆತ್ತಲ್ಪಟ್ಟ ಸುವರ್ಣಮಯವಾದ ಗವಾಕ್ಷಗಳುಳ್ಳ ಮೇಲುಮಚ್ಚಿನ ಮನೆಗಳ ಸಮೂಹವುಳ್ಳಂಥಾದ್ದಾಗಿ ನಾನಾಪ್ರಕಾರವಾದ ರತ್ನಕಾಂತಿಗಳಿಂದ ಒಪ್ಪುತ ದೇವಾಸುರರಿಗೆ ಅತ್ಯಾಶ್ಚರ್ಯಕರವಾದ ಶಿಲ್ಪಿ ಚಿತ್ರಗಳಿಂದ ಕಳಂಕರಹಿತವಾಗಿ ಮಯನೆಂಬ ಶಿಲ್ಪಿಯಿಂದ ಸಾವಧಾನವಾಗಿ ನಿರ್ಮಿಸಲ್ಪಟ್ಟಂಥಾ ಸುವರ್ಣಸಂಪತ್ತಿಯುಳ್ಳ ಮನೆಗಳಿಂದ ಇಟ್ಟಣಿಸಲ್ಪಟ್ಟದ್ದಾಗಿ ಮೇಘಮಂಡಲದಂತೆ ಮನೋಹರವಾಗಿ ಸುವರ್ಣಮಯವಾಗಿ ರಾವಣನ ಭುಜಬಲಕ್ಕೆ ಅನುಗುಣವಾಗಿ ಭೂಲೋಕಕ್ಕೆ ಇಳಿದು ಬಂದ ಸ್ವರ್ಗವೋ ಎಂಬಂತೆ ಮನೋಹರವಾಗಿ ಭೂಲೋಕದಲ್ಲೆಲ್ಲಿಯೂ ತನಿಗೆ ಸರಿಯಾದ ಅರಮನೆ ಇಲ್ಲವೆಂದು ಪ್ರಸಿದ್ಧಿಪಡೆದಂಥಾದ್ದಾಗಿತ್ತು, ಆತನ ವಿಮಾನವು ಪರ್ವತಾಗ್ರದಂತೆ ನಾನಾವಿಧವಾದ ಪುಷ್ಪಗಳಿಂದಲೂ ಪುಷ್ಪಧೂಳಿಗಳಿಂದಲೂ ಪರಿಮಳಯುಕ್ತವಾಗಿ ನಾನಾಪ್ರಕಾರವಾದ ಚಿತ್ರಗಳಿಂದ ದೇದೀಪ್ಯಮಾನವಾಗಿ ಮಿಂಚಿನ ಹೊಳಹುಗಳಿಂದ ಒಪ್ಪುತಿದ್ದ ಮೇಘಮಂಡಲದಂತೆ ಅತಿರಮಣೀಯವಾಗಿ ಸ್ವರ್ಗಲೋಕದಲ್ಲಿ ಸುಕೃತಿಗಳಾದ ಜನರ ವಿಮಾನವೋ ಎಂಬಂತೆ ಉತ್ತಮವಾದ ರಾಜ ಹಂಸಪಕ್ಷಿಗಳಿಂದ ಮನೋಹರವಾಗಿ ನಾನಾಪ್ರಕಾರವಾದ ಗೈರಿಕಾದಿ ಧಾತುಗಳಿಂದ ವಿಚಿತ್ರವರ್ಣವಾದ ಪರ್ವತಾಗ್ರದಂತೆಯೂ ಸೂರ್ಯಚಂದ್ರರು ಮೊದಲಾದ ಗ್ರಹನಕ್ಷತ್ರಗಳಿಂದ ನಾನಾವಿಧವಾಗಿ ತೋರುವ ಅಂತರಿಕ್ಷದಂತೆಯೂ ಶಿಲ್ಪಿ ಶಾಸ್ತ್ರೋಕ್ತವಾಗಿ ನಾನಾವಿಧವಾದ ವಿಚಿತ್ರಗಳೆಲ್ಲಕ್ಕೂ ಉತ್ಪತ್ತಿಸ್ಥಾನವೋ ಎಂಬಂತೆ ಅತ್ಯದ್ಭುತವಾಗಿ ಮಹಾಮೇರುಪರ್ವತ ಮೊದಲಾದ ಪುಣ್ಯಪರ್ವತಗಳಿಂದ ಪರಿಪೂರ್ಣವಾದ ಭೂಮಂಡಲದ ಚಿತ್ರವುಳ್ಳಂಥಾದ್ದಾಗಿ ನಾನಾವಿಧವಾದ ಪುಷ್ಪಭಿತ್ತಿಗಳಿಂದ ಪರಿಪೂರ್ಣವಾಗಿ ಪುಷ್ಪಜಾಲಗಳಿಂದ ಇಟ್ಟಣಿಸಲ್ಪಟ್ಟ ಪರ್ವತಗಳ ಚಿತ್ರವುಳ್ಳಂಥಾದ್ದಾಗಿ ಪುಷ್ಪಗಳಿಂದ ಪರಿಪೂರ್ಣವಾದ ಕೊಳಗಳ ಚಿತ್ರವುಳ್ಳಂಥಾದ್ದಾಗಿ ರತ್ನಕಾಂತಿಗಳಿಂದ ದೇದೀಪ್ಯಮಾನವಾಗಿ ವೈಡೂರ್ಯ ರತ್ನಗಳಿಂದಲೂ ಹವಳಗಳಿಂದಲೂ ಬೆಳ್ಳಿಯಿಂದಲೂ ನಾನಾರತ್ನಗಳಿಂದಲೂ ನಿರ್ಮಿಸಲ್ಪಟ್ಟಂಥಾದ್ದಾಗಿ ನಾನಾಪಕ್ಷಿಜಾಲಗಳ ಚಿತ್ರಗಳುಳ್ಳಂಥಾದ್ದಾಗಿ ಬೆಳ್ಳಿಯಿಂದಲೂ ಸುವರ್ಣದಿಂದಲೂ ನಿರ್ಮಿಸಲ್ಪಟ್ಟ ಗಿರಿಗಳುಳ್ಳ ವಿಲಾಸಾರ್ಥವಾದ ಯಂತ್ರದಿಂದ ಹಾರುತ್ತಿದೆಯೋ ಎಂಬಂತೆ ಚರಿಸುವಂಥಾದ್ದಾಗಿ ಮನ್ಮಥನ ಬಂಧುಗಳೋ ಎಂಬಂತೆ ಅತಿ ರಮಣೀಯವಾದ ಪಕ್ಷಿಗಳ ಚಿತ್ರವುಳ್ಳಂಥಾದ್ದಾಗಿ ತಾವರೇ ಕಮಲಗಳನ್ನು ಮಳೆಗರೆಯುತಿದ್ದ ಸುಂಡಿಲುಗಳುಳ್ಳ ಗಜಚಿತ್ರಗಳುಳ್ಳಂಥಾದ್ದಾಗಿತ್ತು! ಆ ವಿಮಾನದಲ್ಲಿ ಪದ್ಮಹಸ್ತೆಯಾದ ಮಹಾಲಕ್ಷ್ಮಿಯು ಅನವರತವಾಗಿ ವರವನ್ನು ಕೊಡುತ್ತಿದ್ದಾಳೋ ಎಂಬಂತೆ ಮೆರೆಯುತಿತ್ತು!

ರಾವಣನ ಅರಮನೆಯನ್ನು ಹೊಕ್ಕು ಸೀತಾದೇವಿಯನ್ನು ಅರಸಿನೋಡುತ ಹನುಮಂತನು ಮನಸ್ಸಿನಲ್ಲಿ ಪರಮಪುರುಷನಾದ ಶ್ರೀರಾಮನ ಸದ್ಗುಣಚಾರಿತ್ರಗಳನ್ನು ಧ್ಯಾನಮಾಡುತ ಆತನ ವಿರಹವೇದನೆಯಿಂದ ದುಃಖಾಕ್ರಾಂತೆಯಾದ ಸೀತಾದೇವಿಯನ್ನು ಕಾಣದೆ ಮನಸ್ಸಿನಲ್ಲಿ ಅತಿಚಿಂತಾಕ್ರಾಂತನಾಗಿದ್ದನು.

---

## ೮ನೇ ಅಧ್ಯಾಯ.

## ರಾವಣನ ವಿಮಾನ ವರ್ಣನೆ.

ಈ ಮರ್ಯಾದೆಯಲ್ಲಿ ಹನುಮಂತನು ಸ್ಫಟಿಕಮಣಿಗಳಿಂದ ನಿರ್ಮಿತವಾಗಿ ಭಿತ್ತಿಗಳಿಂದಲೂ ರತ್ನಮಯವಾದ ಸೋಪಾನಗಳಿಂದಲೂ ಸುವರ್ಣಮಯವಾದ ಜಾಳಾಂದ್ರಗಳಿಂದಲೂ ಸುವರ್ಣಮಯವಾದ ಸೋಪಾನಗಳಿಂದಲೂ ನಿರ್ಮಿತವಾದ ರಾವಣನ ಪುಷ್ಪಕವೆಂಬ ವಿಮಾನವನ್ನು ನೋಡುತಿದ್ದನು; ಆ ವಿಮಾನವು ತನಿಗೆ ಸರಿಯಾದ

ವಿಮಾನವು ಲೋಕದಲ್ಲಿಲ್ಲವೆಂಬಂತೆ ವಿಶ್ವಕರ್ಮನಿಂದ ನಿರ್ಮಿಸಲ್ಪಟ್ಟದ್ದಾಗಿ ಸೂರ್ಯಮಂಡಲದಂತೆ ಪ್ರಕಾಶಿಸುತ್ತಿತ್ತು ; ಆ ವಿಮಾನದಲ್ಲಿ ಅದ್ಭುತವಾಗಿಲ್ಲದ ಚಿತ್ರವು ಒಂದಾದರೂ ಇಲ್ಲ, ಅನರ್ಘ್ಯವಲ್ಲದ ರತ್ನವು ಒಂದಾದರೂ ಇಲ್ಲ ; ಅದು ರಾವಣನ ಸಾಹಸಪರಾಕ್ರಮದಿಂದಲೂ ಆತನ ತಪಸ್ಸಾಮರ್ಥ್ಯದಿಂದಲೂ ಸಂಪಾದಿಸಲ್ಪಟ್ಟಂಥಾದ್ದು, ಅನೇಕ ಸಂಸ್ಥಾನಗಳಿಂದ ತರಲ್ಪಟ್ಟ ವಸ್ತುವಿಶೇಷಗಳಿಂದ ನಿರ್ಮಿಸಿದಂಥಾದ್ದಾದಕಾರಣ ಅಲ್ಲಲ್ಲಿದ್ದ ವಸ್ತುವಿಶೇಷಗಳಿಗೆ ಸರಿ ಮಿಗಿಲೆಂಬಂತೆ ಪ್ರಖ್ಯಾತ ವಾಯುವೇಗ ಮನೋವೇಗವುಳ್ಳಂಥಾದ್ದಾಗಿ ಯಾರಿಗೂ ತಡೆಯುವದಕ್ಕೆ ಅಸಾಧ್ಯವಾದ್ದಾಗಿ ಜನ್ಮಾಂತರದಲ್ಲಿ ಬಹು ಪುಣ್ಯವನ್ನು ಮಾಡಿ ಸುಕೃತಿಗಳಾಗಿ ಮಹಾತ್ಮರಾಗಿ ಕೀರ್ತಿವಂತರಾದವರ ಮನೋಹರ್ಷಕ್ಕೆ ಆಶ್ರಯವಾದಂಥಾದ್ದಲ್ಲದೆ ಉಳಿದವರಿಗೆ ದೊರಕದಂಥಾದ್ದಾಗಿ ಎಲ್ಲಿನೋಡಿದರೂ ಒಂದೊಂದು ವಿಶೇಷವುಳ್ಳದ್ದಾಗಿ ಅನೇಕ ಗೋಪುರಗಳ ಚಿತ್ರಗಳಿಂದ ರಮಣೀಯವಾಗಿ ಶರತ್ಕಾಲದ ಚಂದ್ರನಂತೆ ನೋಡುವವರ ಮನಸ್ಸಿಗೆ ಹರ್ಷವುಂಟುಮಾಡುವಂಥಾದ್ದಾಗಿ ಖೇಚರಮಾರ್ಗದಲ್ಲಿ ಸಂಚಾರವುಳ್ಳ ಮಹಾತ್ಮರಾದ ಅನೇಕಮಂದಿ ನಿಶಾಚರರಿಂದ ನಡೆಸುವಂಥಾದ್ದಾಗಿ ಅನೇಕ ಭೂತಗಳಿಂದ ವಹಿಸಲ್ಪಟ್ಟಂಥಾದ್ದಾಗಿ ಪುಟವಿಕ್ಕಲ್ಪಟ್ಟ ಸುವರ್ಣರಾಶಿಯಂತೆಯೂ ವಸಂತಕಾಲದ ದೇವತೆಯಂತೆಯೂ ಕಂಗೊಳಿಸುವಂಥಾದ್ದಾಗಿತ್ತು !

---

## ೯ನೇ ಅಧ್ಯಾಯ

## ರಾವಣನ ಅಂತಃಪುರ ವರ್ಣನೆ.

ಆ ಬಳಿಕ ಹನುಮಂತನು ಆರುಗಾವುದ ವಿಸ್ತಾರವುಳ್ಳದ್ದಾಗಿ ಅನೇಕ ಉಪ್ಪರಿಗೆಗಳುಳ್ಳ ರಾವಣಾಸುರನ ಅರಮನೆಯನ್ನು ಹೊಕ್ಕು ಸೀತಾದೇವಿಯನ್ನು ಹುಡಿಕಿ ಎಲ್ಲಿಯೂ ಕಾಣದೆ ರಾವಣಾಸುರನಿದ್ದ ಶಯ್ಯಾಗೃಹವನ್ನು ಹೊಕ್ಕನು, ಆ ಶಯ್ಯಾಗೃಹವು ನಾಲ್ಕು ಕೊಂಬುಗಳುಳ್ಳ ಆನೆಗಳಿಂದಲೂ ಎರಡು ಕೊಂಬುಗಳುಳ್ಳ ಆನೆಗಳಿಂದಲೂ ಆಯುಧಪಾಣಿಗಳಾದ ರಾಕ್ಷಸರಿಂದಲೂ ಹೊರವಳಯದಲ್ಲಿ ಕಾಯಲ್ಪಟ್ಟಂಥಾದ್ದಾಗಿ ಅನೇಕ ರಾಕ್ಷಸಸ್ತ್ರೀಯರಿಂದಲೂ ನಾನಾದೇಶಗಳ ರಾಯರನ್ನು ಸಂಹರಿಸಿ ಬಲಾತ್ಕಾರದಿಂದ ಹಿಡಿತಂದ ರಾಜಸ್ತ್ರೀಯರಿಂದಲೂ ನಿಬಿಡವಾಗಿ ತಿಮಿತಿಮಿಂಗಿಲಗಳೆಂಬ ಮತ್ಸ್ಯಗಳಿಂದಲೂ ಮೊಸಳೆ ವರುಣಪಾಶ ಮೊದಲಾದ ಜಲಜಂತುಗಳಿಂದಲೂ ಆಶ್ರಯಿಸಲ್ಪಟ್ಟ ಸಮುದ್ರದಂತೆ ದುಷ್ಟ ರಾಕ್ಷಸರಿಂದ ಪರಿಪೂರ್ಣವಾಗಿ ಗರುಡ ಚಂದ್ರರ ಪ್ರಕಾಶವುಳ್ಳದ್ದಾಗಿ ಕುಬೇರ ಯಮ ವರುಣರಲ್ಲಿರುವ ಸಂಪತ್ತಿಗೆ ಸರಿಮಿಗಿಲೆನಿಪ ಸಂಪತ್ತುಳ್ಳಂಥಾದ್ದಾಗಿತ್ತು ! ಅದರ ಮಧ್ಯವಲ್ಲಿದ್ದ ಉಪ್ಪರಿಗೆಯವಿಮಾನವು ರಮಣೀಯವಾಗಿತ್ತು ! ಆ ವಿಮಾನವನ್ನು ಪೂರ್ವದಲ್ಲಿ ವಿಶ್ವಕರ್ಮನು ನಿರ್ಮಿಸಿ ಬ್ರಹ್ಮದೇವರಿಗೆ ಕೊಟ್ಟನು, ಕುಬೇರನು ಬಹುಕಾಲವು ಬ್ರಹ್ಮದೇವರನ್ನು ಕುರಿತು ತಪಸ್ಸುಮಾಡಿ ಆ ವಿಮಾನವನ್ನು ಪಡೆದನೂ ; ಕುಬೇರನ ಮನೆಯಲ್ಲಿದ್ದ ಆ ವಿಮಾನವನ್ನು ರಾವಣನು ಬಲಾತ್ಕಾರದಿಂದ ತೆಕ್ಕೊಂಡುಬಂದನು. ಆ ವಿಮಾನವು ಸುವರ್ಣಮಯವಾಗಿ ರತ್ನಖಚಿತವಾಗಿ ಆಕಾಶವನ್ನು ತುಡುಕುತಿರುವ ಮಹಾಮೇರು ಮಂದರಗಿರಿಪರ್ವತಗಳ ಕೋಡುಗಲ್ಲುಗಳಿಗೆ ಸಮಾನವಾದ ಗೋಪುರಗಳಿಂದ ರಮಣೀಯವಾಗಿ ತೊಟ್ಟಿಕಟ್ಟಿನ ಮಾಳಿಗೆ ಶೃಂಗಾರ ಮಂಟಪ ಮೊದಲಾದ ಗೃಹವಿಶೇಷಗಳಿಂದ ಸೂರ್ಯಪ್ರಭೆಯಂತೆ ಹೊಳೆಯುತ ಸುವರ್ಣಮಯವಾದ ಸೋಪಾನಗಳುಳ್ಳದ್ದಾಗಿ ಮನೋಹರವಾದ ಜಗಲಿಗಳುಳ್ಳಂಥಾದ್ದಾಗಿ ಇಂದ್ರನೀಲಮಣಿ ರತ್ನಗಳ ಮೇಲಂತರದ ಜಗಲಿಗಳೂ ಸ್ಫಟಿಕಸಿಲೆಗಳಿಂದ ನಿರ್ಮಿಸಿದ ಚಾವಡಿಗಳೂ ಗವಾಕ್ಷಗಳೂ ಜಾಲಾಂಧರಗಳೂ ಉಳ್ಳಂಥಾದ್ದಾಗಿ ಹವಳಗಳಿಂದಲೂ ಮುತ್ತುಗಳಿಂದಲೂ ಕೆತ್ತಲ್ಪಟ್ಟ ಚಿತ್ರ ಪ್ರತಿಮೆಗಳುಳ್ಳಂಥಾದ್ದಾಗಿ ಅತಿ ಕೆಂಪಾದ ಸುವರ್ಣದ ನೆಲಗಟ್ಟುಗಳುಳ್ಳಂಥಾದ್ದಾಗಿ ಪರಿಮಳಯುಕ್ತವಾಗಿ ರಾವಣನು ಕರದ ಸಮಯದಲ್ಲಿ ಆತನ ಮನಸ್ಸಿಗೆ ಅನುಕೂಲವಾದ ಸ್ತ್ರೀಯರು ಬರುವದರಿಂದ ಅದರಲ್ಲಿದ್ದ ಮನೆಗಳು ಆತನು ಕರದೆಡೆಗೆ ಹಾರಿಬರುವವೋ ಎಂಬಂತೆ ರಮಣೀಯವಾಗಿ ಹವಳದ ಕಂಭಗಳಿಂದಲೂ ರತ್ನಸ್ತಂಭಗಳಿಂದಲೂ ಮನೋಹರವಾಗಿ ಪರ್ವತ ನದೀ ಕಾನ

ನ ಸಹಿತವಾದ ಭೂಮಂಡಲದ ಚಿತ್ರವುಳ್ಳಂಥಾದ್ದಾಗಿ ಮದಸೊಕ್ಕಿದ ಹಂಸ ನವಿಲು ಗಿಣಿ ಪಾರಾವತ ಮೊದಲಾದ ಪಕ್ಷಿಗಳ ಮನೋಹರವಾದ ಧ್ವನಿಗಳುಳ್ಳಂಥಾದ್ದಾಗಿ ಅಗಿಲು ಕುಂಕುಮ ಕಸ್ತೂರಿ ಕರ್ಪೂರ ಶ್ರೀಗಂಧ ಮೊದಲಾದ ಪರಿಮಳದ್ರವ್ಯಗಳ ಚಳಯಸಾರಣೆಯುಳ್ಳಂಥಾದ್ದಾಗಿ ಅಗಿಲು ಶ್ರೀಗಂಧ ಮೊದಲಾದ ಘಮಘಮಿಸುವ ಧೂಪಗಳಿಂದ ಮನೋಹರವಾಗಿ ನಾನಾವಿಧವಾದ ಪುಷ್ಪಸರಗಳಿಂದ ನಾನಾವರ್ಣವಾಗಿ ವಶಿಷ್ಠಮುನೀಶ್ವರನ ಕಾಮಧೇನುವಿನಂತೆ ಜಿತೇಂದ್ರಿಯ ವೈರಾಗ್ಯಸಂಪನ್ನರಾದ ಯತಿಗಳು ಮೊದಲಾದವರಿಗೂ ಮೋಹವುಂಟುಮಾಡುವಂಥಾದ್ದಾಗಿ ಮಹಾಲಕ್ಷ್ಮಿಯಂತೆ ಮನಸ್ಸಿನ ವ್ಯಥೆಯನ್ನು ತೊಲಗಿಸುವಂಥಾದ್ದಾಗಿ ರೂಪ ರಸ ಗಂಧ ಶಬ್ದ ಸ್ಪರ್ಶಗಳೆಂಬ ಐದು ವಿಷಯಾರ್ಥಗಳನ್ನು ನೇತ್ರೇಂದ್ರಿಯ ಘ್ರಾಣೇಂದ್ರಿಯ ತ್ವಗಿಂದ್ರಿಯ ಶ್ರೋತ್ರೇಂದ್ರಿಯ ಜಿಹ್ವೇಂದ್ರಿಯಗಳೆಂಬ ಪಂಚೇಂದ್ರಿಯಗಳನ್ನೂ ತೃಪ್ತಿಪಡಿಸುವಂಥಾದ್ದಾಗಿ ತಾಯಮಯರ್ಯಾದೆಯಲ್ಲಿ ಬೇಕಾದ ವಸ್ತುಗಳಿಂದ ಸಂತೋಷವುಂಟುಮಾಡುವಂಥಾದ್ದಾಗಿ ಸಾಕ್ಷಾತ್ ಸ್ವರ್ಗವೋ—ದೇವೇಂದ್ರನ ಅಮರಾವತಿಯೋ—ಅಣಿಮಾದ್ಯಷ್ಟ ವಿಭೂತಿಗಳ ಪುಂಜವೋ—ಎಂಬಂತೆ ಕಂಗೊಳಿಸುತಿತ್ತು!

ಹನುಮಂತನು ಆ ವಿಮಾನದಲ್ಲಿದ್ದ ಚಿತ್ರಗಳನ್ನೂ ಚಿನ್ನದ ದೀವಿಗೆಗಳಲ್ಲಿಯೂ ಕಂಭಗಳಲ್ಲಿಯೂ ಇದ್ದ ದೀಪಗಳು ಜೂಜಿನಲ್ಲಿ ಸೋತವರ ಮುಖದಂತೆ ರಾವಣನ ರತ್ನಾಭರಣಗಳ ಕಾಂತಿಯಿಂದ ಮಾಸಿದ ಪ್ರಭೆಯುಳ್ಳವಾಗಿ ತೋರುವದನ್ನೂ ಅರ್ಧರಾತ್ರಿಯು ಕಳೆದಮೇಲೆ ಮಧುಪಾನದಿಂದ ಸೊಕ್ಕಿ ಸುಪ್ಪತ್ತಿಗೆಗಳಮೇಲೆ ವ್ಯಾಮರತು ಮಲಗಿದ್ದ ಸರ್ವಾಭರಣ ಭೂಷಿತರಾಗಿ ಉತ್ತಮವಾದ ರೂಪ ಲಾವಣ್ಯ ಸೌಂದರ್ಯ ಮೊದಲಾದ ತನು ಸೊಬಗುಗಳಿಂದ ರಮಣೀಯವಾದ ಸ್ತ್ರೀಯರನ್ನೂ ನೋಡಿ ರಾತ್ರಿಯಲ್ಲಿ ರಾವಣನೊಡನೆ ಸಂಭೋಗಿಸಿ ಎಲ್ಲರೂ ವ್ಯಾಮರತು ಮಲಗಿರುವದರಿಂದ ಸದ್ದಿಲ್ಲದೆ ಸಾಯಂಕಾಲದಲ್ಲಿ ಮುಕುಳಿತವಾದ ತುಂಬಿಗಳ ಝೇಂಕಾರವಿಲ್ಲದೆ ಇದ್ದ ತಾವರೆಯ ಕೊಳದಂತೆ ಒಪ್ಪುತಿದ್ದ ರಾವಣನ ಶಯ್ಯಾಗೃಹವನ್ನೂ ನೋಡುತಿದ್ದನು! ಆ ಶಯ್ಯಾಗೃಹದಲ್ಲಿ ಮಲಗಿದ್ದ ಸ್ತ್ರೀಯರ ಮುಖಗಳು ಮುಚ್ಚಿದ ದಂತಪಙ್ತಿಗಳಿಂದಲೂ ಕಣ್ಣೆವೆಗಳಿಂದಲೂ ಕಮಲಗಂಧವುಳ್ಳ ಸುಯ್ಲುಗಳಿಂದಲೂ ರಮಣೀಯವಾಗಿ ಪ್ರಾತಃಕಾಲದಲ್ಲಿ ವಿಕಸಿತವಾದ ತಾವರೇ ಕಮಲಗಳಂತೆಯೂ ಮುಚ್ಚಿದ ಕಣ್ಣೆವೆಗಳಿಂದ ಸಾಯಂಕಾಲದಲ್ಲಿ ಮುಡಿಸಿದ ಎಸಳುಗಳುಳ್ಳ ತಾವರೇ ಕಮಲಗಳಂತೆಯೂ ನಿಟ್ಟುಸುರುಗಳಿಂದ ಪ್ರಾತಃಕಾಲದಲ್ಲಿ ವಿಕಸಿತವಾದ ಕಮಲಗಳನ್ನು ಬಯಸಿ ಬರುವ ತುಂಬಿಗಳಂತೆಯೂ ಪ್ರಕಾಶಿಸುತಿದ್ದವು! ಅಂಥಾ ಸ್ತ್ರೀಯರಿಂದ ಇಟ್ಟಣಿಸಿದ್ದ ರಾವಣನ ಶಯ್ಯಾಗೃಹವು ನಕ್ಷತ್ರಗಳಿಂದ ಪರಿಪೂರ್ಣವಾದ ಅಂತರಿಕ್ಷದಂತೆ ಒಪ್ಪುತಿರಲು ಅವರ ಮಧ್ಯದಲ್ಲಿದ್ದ ರಾವಣನು ನಕ್ಷತ್ರಗಳ ಮಧ್ಯದಲ್ಲಿದ್ದ ಚಂದ್ರನಂತೆ ಒಪ್ಪುತಿದ್ದನು! ಆ ಸ್ತ್ರೀಯರು ನಕ್ಷತ್ರಮಂಡಲದಲ್ಲಿದ್ದು ಭೋಗಕ್ಷಯವಾಗಿ ಭೂಮಿಯಲ್ಲಿ ಬಿದ್ದ ನಕ್ಷತ್ರಗಳಂತೆ ನೋಡುವದಕ್ಕೆ ಆಶ್ಚರ್ಯಕರವಾಗಿ ತಮ್ಮ ತನುಕಾಂತಿಗಳು ನಕ್ಷತ್ರಗಳ ಶುಭ ಪ್ರಭೆಯಂತೆ ಒಪ್ಪುತಿರಲು ಆ ಶಯ್ಯಾಗೃಹದಲ್ಲಿ ನಿದ್ರೆಮಾಡುತಿದ್ದರು! ಕೆಲವರು ಮದ್ಯಪಾನಮಾಡಿ ನೃತ್ಯಮಾಡಿದ್ದರಿಂದ ಸಡಲಿದ ಪುಷ್ಪಮಾಲಿಕೆಗಳೂ ಭೂಷಣಗಳೂ ರತ್ನಗಳೂ ಉಳ್ಳವರಾಗಿದ್ದರು, ಕೆಲವರು ಮಧುಪಾನದಿಂದ ವ್ಯಾಮರತು ಕಾಲಂದಿಗೆಗಳನ್ನು ಕೈಗಳಿಗೆ ಹಾಕಿಕೊಂಡು ಮುತ್ತಿನ ಕಂಠಮಾಲೆಗಳನ್ನು ಹಿಂದಕ್ಕೆ ಹಾಕಿಕೊಂಡು ಮಲಗಿದ್ದರು; ಕೆಲವರು ಮುತ್ತಿನ ಸರಗಳನ್ನು ಹಾಕಿಕೊಂಡು ಸಡಲಿದ ವಸ್ತ್ರಗಳುಳ್ಳವರಾಗಿದ್ದರು; ಕೆಲವರು ಕಾಂಚೀದಾಮಗಳನ್ನು ಕಟ್ಟಿಕೊಂಡು ಹೇರು ಹಾಕುವದಕ್ಕೆ ಹಿಡಿತಂದ ಗೋಳಿಗೆ ಕುದುರೆಗಳಂತೆ ಒಪ್ಪುತಿದ್ದರು, ಕೆಲವರು ಸಂಭೋಗಕಾಲದಲ್ಲಿ ಪುರುಷನ ಶರೀರಸಮ್ಮರ್ಧದಿಂದ ಕುಂದಿ ಹರದ ಪುಷ್ಪಮಾಲಿಕೆಗಳುಳ್ಳವರಾಗಿ ಆನೆಯಿಂದ ಮರಿಸಲ್ಪಟ್ಟ ಪುಷ್ಪಲತೆಯಂತೆ ಒಪ್ಪುತಿದ್ದರು; ವ್ಯಾಮರತು ಮಲಗಿದ್ದ ಕೆಲವು ಸ್ತ್ರೀಯರ ಸ್ತನಗಳ ಮಧ್ಯದಲ್ಲಿದ್ದ ಮುತ್ತಿನ ಸರಗಳು ತಾವರೇ ಮೊಗ್ಗುಗಳ ಮಧ್ಯದಲ್ಲಿ ಸಂಚರಿಸುತಿದ್ದ ಹಂಸಪಕ್ಷಿಗಳಂತೆ ಒಪ್ಪುತಿದ್ದವು; ವಿದಳಿತಗಳಾದ ವೈಡೂರ್ಯ ರತ್ನಾಭರಣಗಳು ಕದಂಬ ಪಕ್ಷಿಗಳಂತೆ ಒಪ್ಪುತಿದ್ದವು, ಸ್ತನಗಳಿಂದಲೂ ಪೂರವಾರಗಳಿಂದಲೂ ರಮಣೀಯವಾದ ಕೆಲವು ಸ್ತ್ರೀಯರು ಚಕ್ರವಾಕಪಕ್ಷಿಗಳಿಂದ

ಕೂಡಿದ ನದಿಗಳಂತೆ ಒಪ್ಪುತ್ತಿದ್ದರು , ಕೆಲವರು ಸುವರ್ಣದ ಕಿರುಗಂಟೆಗಳುಳ್ಳ ಕಾಂಚೀದಾಮಗಳಿಂದ ಅಲಂಕರಿಸಲ್ಪಟ್ಟು ಹೊಂದಾವರೆಯ ಕಮಲಗಳಿಂದ ರಮಣೀಯವಾದ ನದೀತೀರದಂತೆ ಒಪ್ಪುತ್ತಿದ್ದರು , ನಿದ್ರೆಮಾಡುತ್ತಿದ್ದ ಸ್ತ್ರೀಯರ ಕೋಮಲವಾದ ಶರೀರಗಳಲ್ಲಿಯೂ ಕುಚಾಗ್ರಗಳಲ್ಲಿಯೂ ಹುಟ್ಟಿದ ಬೆವರು ಹನಿಗಳು ಮುತ್ತಿನ ಸರಗಳಂತೆ ಒಪ್ಪುತ್ತಿದ್ದವು , ಸುಯ್ಲುಗಾಳಿಯಿಂದ ಮೇಲಕ್ಕೆ ಹಾರುವ ದುಕೂಲವಸ್ತ್ರಗಳು ಮುಸುಕಿಟ್ಟು ಮಲಗಿದ್ದ ಸ್ತ್ರೀಯರು ಮದನಾಗ್ನಿಯನ್ನು ಮಟ್ಟುಮಾಡುವ ಬೆಳ್ಳಿಯ ನದಿಗಳಂತೆ ಒಪ್ಪುತ್ತಿದ್ದವು , ಹಾಗೆ ಗಾಳಿಯಿಂದ ಮೇಲಕ್ಕೆ ಹಾರುತ್ತಿದ್ದ ವಸ್ತ್ರಗಳು ದಿಗ್ವಿಜಯಾರ್ಥವಾಗಿ ಹೊರಟ ಮನ್ಮಥನ ಪತಾಕಗಳಂತೆ ಒಪ್ಪುತ್ತಿದ್ದವು , ಅವರ ಕಿವಿಗಳಲ್ಲಿದ್ದ ಓಲೆಗಳು ಗಾಳಿಯಿಂದ ಕದಲಲ್ಪಟ್ಟು ರಥಚಕ್ರಗಳಂತೆ ಒಪ್ಪುತ್ತಿದ್ದವು , ಆ ಸ್ತ್ರೀಯರ ಮುಖದಿಂದುಟ್ಟಿದ ಪರಿಮಳಯುಕ್ತವಾದ ಸುಯ್ಲುಗಾಳಿಯು ರಾವಣನ ಮುಖದಲ್ಲಿ ಬೀಸುತ್ತಿತ್ತು , ಕೆಲವು ಸ್ತ್ರೀಯರು ಕಾಮಗ್ರಹ ಸೋಕಿ ಚಿತ್ತವಿಕಲತೆಗೊಂಡು ತಮ್ಮ ಸವತಿ ಸ್ತ್ರೀಯರ ಮುಖಗಳನ್ನು ರಾವಣನ ಮುಖವೆಂಬ ಭ್ರಮೆಯಿಂದ ಆಘ್ರಾಣಿಸಿ ಚುಂಬನ ಮಾಡುತ್ತಿದ್ದರು , ರಾವಣನಲ್ಲಿ ಅತ್ಯಂತ ಪ್ರಿಯವಾದ ಮನಸ್ಸುಳ್ಳ ಆ ಸ್ತ್ರೀಯರು ಸ್ವತಂತ್ರವಿಲ್ಲದಿದ್ದರೂ ತಮ್ಮ ಸವತಿಯರಿಗೆ ಸೇವೆಮಾಡಿಕೊಂಡು ಒಬ್ಬರಿಗೊಬ್ಬರು ಅನುಕೂಲವಾಗಿದ್ದರು , ಕೆಲವರು ರತ್ನ ಕಡಗಗಳಿಂದ ಅಲಂಕರಿಸಲ್ಪಟ್ಟ ತಮ್ಮ ಕೈಗಳನ್ನು ಸವತಿಯರ ಕೈಗಳಮೇಲೆ ಹಾಕಿಕ್ಕೊಂಡು ಎದೆಗಳಿಂದ ಅವರ ಎದೆಗಳನ್ನೊತ್ತರಿಸಿಕೊಂಡು ಮಲಗಿದ್ದರು , ಒಬ್ಬಳಮೇಲೆ ಒಬ್ಬಳು ಕೈಹಾಕಿಕೊಂಡು ಅವಳಮೇಲೆ ಮತ್ತೊಬ್ಬಳು ಕೈಹಾಕಿಕೊಂಡು ಈ ಮರ್ಯಾದೆಯಲ್ಲಿ ಅನೇಕ ಸಾವಿರಮಂದಿ ಸ್ತ್ರೀಯರು ಒಬ್ಬರಮೇಲೊಬ್ಬರು ಕೈಹಾಕಿಕೊಂಡು ಪುಷ್ಪಮಾಲೆಯನ್ನನುಕರಿಸಿದ್ದರು ! ಮತ್ತೂ ಪುಷ್ಪಿತವಾದ ಮರಗಳ ಕೊಂಬುಗಳ ಅನ್ಯೋನ್ಯ ಸಂಬಂಧದಿಂದ ಮನೋಹರವಾಗಿ ತುಂಬಿ ಹಿಂಡಿನಿಂದ ಝೇಂಕರಿಸಲ್ಪಟ್ಟ ಪುಷ್ಪಗಳ ತೊಡೊಂಬಗಳಿಂದ ಪರಿಪೂರ್ಣವಾದ ವನದಂತೆ ಒಪ್ಪುತ್ತಿದ್ದರು ! ಅವರ ವಸ್ತ್ರಾಭರಣಾದಿಗಳು ಉಚಿತ ಸ್ಥಾನಗಳಲ್ಲಿಡಲ್ಪಟ್ಟಿದ್ದರೂ ಅನೇಕಗಳಾಗಿದ್ದದ್ದರಿಂದ ಇವರವು—ಅವರವು ಎಂದು ಹೇಳಕೂಡವಾಗಿದ್ದವು. ದೇವರ್ಷಿ ನಾಗ ಗಂಧರ್ವ ಕಿನ್ನರ ಸ್ತ್ರೀಯರೂ ಅನೇಕ ರಾಕ್ಷಸ ಸ್ತ್ರೀಯರೂ ಮನ್ಮಥನ ಬಾಣಕ್ಕೊಳಗಾಗಿ ರಾವಣನನ್ನು ಮದುವೆಯಾದರು , ಅವರಲ್ಲಿ ಅನೇಕರು ಅವರ ಬಂಧುಗಳೊಡನೆ ಯುದ್ಧಮಾಡಬೇಕೆಂಬ ಇಚ್ಛೆಯಿಂದ ರಾವಣನು ಹಿಡಿತಂದವರಾಗಿಯೂ ಅನೇಕರು ರಾವಣನಲ್ಲಿ ಮದನ ಕದನವನ್ನು ಮಾಡಬೇಕೆಂಬ ಬುದ್ಧಿಯಿಂದ ತಾವೇ ಬಂದವರಾಗಿಯೂ ಇದ್ದರು ರಾವಣನು ತಂದ ಸ್ತ್ರೀಯರಲ್ಲಿ ಸೀತಾದೇವಿಯು ಒಬ್ಬಳು ಹೊರ್ತಾಗಿ ರಾವಣನಲ್ಲಿ ಪ್ರೀತಿಯಿಲ್ಲದವಳಾದರೂ ಲಜ್ಜೆಯುಳ್ಳವಳಾದರೂ ಮತ್ತೊಬ್ಬಳಿಲ್ಲ ; ಒಬ್ಬಳಾದರು ಹೀನಜಾತಿಯವಳಲ್ಲ , ರೂಪ ಹೀನವಾದವಳಲ್ಲ , ಪ್ರಾಢಿಮೆಯಿಲ್ಲದವಳಲ್ಲ , ವಿನಯಾದಿ ಗುಣವಿಲ್ಲದವಳಲ್ಲ , ಬಲಕ್ಷೀಣವಾದವಳಲ್ಲ , ಪುರುಷನ ಮನಸ್ಸಿಗೆ ಸಂತೋಷಮಾಡದ ಸ್ತ್ರೀಯಿಲ್ಲ ! ಅವರೆಲ್ಲರನ್ನು ನೋಡಿ ಹನುಮಂತನು ತನ್ನ ಮನಸ್ಸಿನಲ್ಲಿ " ಸೀತಾದೇವಿಯು ಈ ಸ್ತ್ರೀಯರಲ್ಲಿರುವ ಗುಣಗಳುಂಟಾದವಳಾಗಿದ್ದರೆ ಶ್ರೀರಾಮನಿಗೆ ಕ್ಷೇಮವಾಗುವದು ! ಸೀತಾದೇವಿಯು ಪತಿವ್ರತಾಶಿರೋಮಣಿಯು , ರಾವಣನ ಮಾಯೆಯಿಂದ ಬಂಧನಕ್ಕೆ ಒಳಗಾದಳು , ಆಕೆಯು ಇನ್ನೆಲ್ಲಿಧ್ದಾಳೋ ತಿಳಿಯಲಿಲ್ಲ " ಎಂದು ಚಿಂತಿಸುತ್ತಿದ್ದನು

---

## ೧೦ ನೇ ಅಧ್ಯಾಯ

## ರಾವಣನ ಅಂಗ ವರ್ಣನೆ.

ಈ ಮರ್ಯಾದೆಯಲ್ಲಿ ಹನುಮಂತನು ರಾವಣನ ಶಯ್ಯಾಗೃಹದಲ್ಲಿ ಹುಡುಕುತ್ತಿದ್ದಲ್ಲಿ ಸ್ಫಟಿಕಮಣಿಮಯವಾದ ಭಿತ್ತಿಗಳಿಂದಲೂ ರತ್ನಮಯವಾದ ಕಂಭ ಬೋದಿಗೆ ಲೋವೆ ಮದನಕೈಗಳಿಂದಲೂ ಅತಿ ರಮ್ಯವಾಗಿ ವೈಡೂರ್ಯ ರತ್ನಗಳಿಂದ ಕೆತ್ತಲ್ಪಟ್ಟ ಸುವರ್ಣಮಯವಾದ ಭದ್ರಪೀಠಗಳಿಂದಲೂ ಗಜದಂತಗಳಿಂದ ನಿರ್ಮಿಸಲ್ಪಟ್ಟ ಭದ್ರಪೀಠಗಳಿಂದಲೂ ಹಂಸತೂಲಿಕಾತಲ್ಪಗಳಿಂದಲೂ ರಮಣೀಯವಾದ ಮಂಚಗಳಿಂದಲೂ ಸುವರ್ಣ

ಮಯವಾದ ಮಂಚಗಳಿಂದಲೂ ಸುವರ್ಣಮಯವಾಗಿ ಸೂರ್ಯಪ್ರಭೆಯಂತೆ ಒಪ್ಪುತ ಅಶೋಕ ಪುಷ್ಪಮಾಲಿಕೆಗಳಿಂದಲೂ ಬಿಳೀ ಪುಷ್ಪಮಾಲಿಕೆಗಳಿಂದಲೂ ಅಲಂಕರಿಸಲ್ಪಟ್ಟ ಅಗ್ರಭಾಗವುಳ್ಳದ್ದಾಗಿ ಶರತ್ಕಾಲದ ಚಂದ್ರಮಂಡಲದಂತೆ ಬಿಳುಪಾದ ಚಾಮರಗಳನ್ನು ಬೀಸುವ ಸ್ತ್ರೀಯರಿಂದ ಅತಿ ರಮ್ಯವಾಗಿ ನಾನಾವಿಧವಾದ ಪರಿಮಳ ದ್ರವ್ಯಗಳಿಂದ ಪರಿಪೂರ್ಣವಾಗಿ ದಿವ್ಯವಾದ ಮೋಹನ ಧೂಪದಿಂದ ಘಮಘಮಿಸುತ ಅತ್ಯಂತ ಮೃದುವಾದ ರತ್ನಗಂಬಳಿಗಳಿಂದ ಮನೋಹರವಾಗಿ ಪರಿಮಳವಾದ ಪುಷ್ಪಸರಗಳಿಂದ ಸುತ್ತವರಿದು ಅಲಂಕರಿಸಲ್ಪಟ್ಟಂಥಾ ವಿಮಾನಮಧ್ಯದಲ್ಲಿದ್ದ ರತ್ನಮಯವಾದ ಮಂಚದಮೇಲೆ ಕಾರ್ಮುಗಿಲಿನಂತೆ ತನುಕಾಂತಿಯುಳ್ಳವನಾಗಿ ರತ್ನಖಚಿತವಾದ ಸುವರ್ಣಕುಂಡಲಗಳನ್ನು ಧರಿಸಿಕೊಂಡು ಹೊಂಬಟ್ಟೆಯ ಹಚ್ಚಡವನ್ನು ಹೊದ್ದುಕೊಂಡು ಕೆಂಗಣ್ಣುಳ್ಳವನಾಗಿ ಮೊಣಕಾಲುಪರಿಯಂತ ಬೀಳುವ ತೋಳುಗಳುಳ್ಳವನಾಗಿ ಸಂಧ್ಯಾಕಾಲದ ಮೇಘದಂತೆ ಕುಂಕುಮಗಂಧಾನುಲೇಪನದಿಂದ ಕೆಂಪಾದ ಶರೀರವುಳ್ಳವನಾಗಿ ದಿವ್ಯಾಭರಣಭೂಷಿತನಾಗಿ ಕಾಮರೂಪಿಯಾಗಿ ರಾತ್ರಿಯಲ್ಲಿ ರಮಣೀಯವಾದ ಕಾಂತಾಮಣಿಗಳ ಭೋಗದಿಂದ ಸೊಕ್ಕಿ ವ್ಯಾಮರತು ಮಲಗಿದ್ದ ರಾವಣನು ಪುಷ್ಪಲತೆಗಳಿಂದ ಸುತ್ತುವರಿಯಲ್ಪಟ್ಟ ಮಂದರಗಿರಿ ಪರ್ವತಗಂತೆಯೂ ಕನಕಗಿರಿಯಮೇಲೆ ಮೆರೆಯುತಿದ್ದ ಮಹಾ ಶೇಷನಂತೆಯೂ ಒಪ್ಪುತಿದ್ದನು! ಹನುಮಂತನು ಆತನ ವಿಮಾನ ಸೋಪಾನಮಾರ್ಗದಿಂದ ಹತ್ತಿ ಹೋಗಿ ಬಂದು ಜಗಲಿಯನ್ನೇರಿಕೊಂಡು ತಪ್ಪಲಿನಲ್ಲಿ ಮಲಗಿದ್ದ ಉತ್ತಮವಾದ ಮದ್ದಾನೆಯುಳ್ಳ ಕಾಂಚನಗಿರಿಯಂತೆ ಒಪ್ಪುತ ಆ ಮಂಚದಮೇಲೆ ಮಲಗಿದ್ದ ರಾವಣನನ್ನು ನೋಡುತಿದ್ದನು. ರಾವಣನ ಭುಜಗಳು ಐರಾವತದೊಡನೆ ಯುದ್ಧಮಾಡಿದಾಗ ಅದರ ಪೆಟ್ಟುಗಳಿಂದುಂಟಾದ ಗಾಯಗಳ ರೇಖೆಗಳುಳ್ಳವಾಗಿ ಇಂದ್ರಚಾಪದಂತೆ ಮನೋಹರವಾಗಿ ಅನೇಕಸಾರಿ ದೇವೇಂದ್ರನೊಡನೆ ಜಗಳ ಮಾಡಿದ್ದರಿಂದ ವಜ್ರಾಯುಧದ ಪೆಟ್ಟುಗಳಿಂದ ಜಡೆಗಟ್ಟಿದ ಮುಡುಹುಗಳುಳ್ಳವಾಗಿ ನಾರಾಯಣನ ಸುದರ್ಶನವೆಂಬ ಚಕ್ರಹತಿಯ ರೇಖೆಗಳುಳ್ಳವಾಗಿ ಉದ್ದವಾದವಾಗಿ ಶುಭಲಕ್ಷಣಗಳಾಗಿ ಶೋಭನವಾದ ಬೆರಳುಗಳಿಂದ ಮನೋಹರಗಳಾದ ಹಸ್ತಗಳುಳ್ಳವಾಗಿ ಲಾಳಮುಂಡಿಗೆಗಳಂತೆಯೂ ಆನೆಯ ಸುಂಡಿಲಂತೆಯೂ ಮನೋಹರಗಳಾಗಿ ಮಲಗಿರುವ ಐದು ಹೆಡೆಗಳುಳ್ಳ ಸರ್ಪಗಳಂತೆ ಮನೋಹರವಾಗಿ ಮೊಲದ ಕರದಂತೆ ಎಳಗೆಂಪಾಗಿ ಶೈತ್ಯವಾದ ಕುಂಕುಮ ಗಂಧದಿಂದ ಅನುಲೇಪಿಸಲ್ಪಟ್ಟವಾಗಿ ಉತ್ತಮವಾದ ಸ್ತ್ರೀಯರನ್ನು ತಕ್ಕೈಸಿಕೊಳ್ಳುವವಾಗಿ ದೇವ ದಾನವ ಯಕ್ಷ ಗಂಧರ್ವ ಪನ್ನಗಾದಿಗಳನ್ನು ಗೋಳಾಡಿಸುವವಾಗಿ ಮಂದರ ಪರ್ವತದ ಮೇಲೆ ಮಲಗಿದ್ದ ಸರ್ಪಗಳಂತೆ ಒಪ್ಪುತಿದ್ದವು! ಅಂಥಾ ಭುಜಗಳುಳ್ಳ ರಾವಣನು ಕೊಡುಗಲ್ಲುಗಳಿಂದ ಮನೋಹರವಾದ ಅಂಜನಪರ್ವತದಂತೆ ಒಪ್ಪುತಿರಲು ಆತನ ಮುಖದಿಂದ ಹೊರಡುತಿದ್ದ ಸುಯ್ಲುಗಾಳಿಯು ಮಾಂದಳಿರು ಸುರಹೊನ್ನೆ ವಕುಳಪುಷ್ಪಗಳ ಪರಿಮಳವುಳ್ಳದ್ದಾಗಿ ಮದ್ಯ ಮೃಷ್ಟಾನ್ನ ರಸಗಂಧದೊಡನೆ ಕೂಡಿ ಆ ಶಯ್ಯಾಗೃಹವೆಲ್ಲವನ್ನು ವ್ಯಾಪಿಸಿಕೊಂಡಿತ್ತು! ಮುತ್ತಿನ ಮಣಿಗಳಿಂದಲೂ ಸುವರ್ಣ ರತ್ನಗಳಿಂದಲೂ ಕೆತ್ತಲ್ಪಟ್ಟ ಮಕುಟದಿಂದಲೂ ಕುಂಡಲಗಳಿಂದಲೂ ಒಪ್ಪುತಿದ್ದ ಮುಖವುಳ್ಳವನಾಗಿ ಕದಂಬ ಗಂಧದಿಂದ ಅನುಲೇಪಿಸಲ್ಪಟ್ಟ ಮೇಲುಬ್ಬಾಗಿ ವಿಶಾಲವಾದ ಎದೆಕಟ್ಟುಳ್ಳವನಾಗಿ ಸಡಲಿದ ಬಿಳೀ ಪಟ್ಟೆಯ ವಸ್ತ್ರವುಳ್ಳವನಾಗಿ ನಿದ್ರೆಯಿಂದ ಮೆರೆಯುತಿದ್ದ ಕೃಷ್ಣಸರ್ಪನಂತೆಯೂ ಗಂಗೆಯ ಮಧ್ಯದಲ್ಲಿ ಮಲಗಿದ್ದ ಮದ್ದಾನೆಯಂತೆಯೂ ಒಪ್ಪುತ ನಾಲ್ಕು ದಿಕ್ಕುಗಳಲ್ಲಿದ್ದ ಚಿನ್ನದ ದೀವಿಗೆಗಳಿಂದಲೂ ಕಂಭಗಳಲ್ಲಿದ್ದ ದೀಪಗಳಿಂದಲೂ ಪ್ರಕಟವಾಗಿ ಕಾಣಿಸುತಿದ್ದ ಸರ್ವಾಂಗ ಸಾಭಾಗ್ಯವುಳ್ಳವನಾಗಿ ರಾವಣನು ಮಿಂಚಿನ ಹೊಳೆಯಿಂದ ಒಪ್ಪುತಿದ್ದ ಮೇಘಮಂಡಲದಂತೆ ಪ್ರಕಾಶಿಸುತಿರಲು ಆತನ ಕಾಲದೆಶೆಯಲ್ಲಿ ಮಲಗಿದ್ದ ಸ್ತ್ರೀಯರ ರತ್ನಾಭರಣ ಕಾಂತಿಯಿಂದಲೂ ಅವರ ಮುಖಗಳ ಕಾಂತಿಯಿಂದಲೂ ಪ್ರಕಾಶಮಾನವಾದ ಆ ವಿಮಾನವು ನಕ್ಷತ್ರ ಸಮೂಹದಿಂದ ಬೆಳಗುತಿದ್ದ ಗಗನಮಂಡಲದಂತೆ ರಮಣೀಯವಾಗಿತ್ತು!

ಆ ಸ್ತ್ರೀಯರಲ್ಲಿ ಕೆಲವರು ವೀಣೆಗಳನ್ನು ನುಡಿಸಿ ಅವುಗಳಮೇಲೆ ಕೈಗಳನ್ನು ಹಾಕಿಕೊಂಡು ವ್ಯಾಮರತು ಮಲಗಿದ್ದರು, ಕೆಲವರು ನರ್ತನವನ್ನು ಮಾಡಿ ಅದಕ್ಕಾಗಿ ತೊಟ್ಟ ಭೂಷಣಗಳನ್ನು ಸಡಲಿಸದೆ ಮಲಗಿದ್ದರು;

ಕೆಲವರು ಡಿಂಡಿಮ ವಾದ್ಯಗಳನ್ನು ಬಾರಿಸಿ ಆ ವಾದ್ಯಗಳನ್ನು ಕಂಕುಳಲ್ಲಿಟ್ಟುಕೊಂಡು ಬಾಲಕರನ್ನು ತಬ್ಬಿಕೊಂಡು ಮಲಗಿದ್ದ ಸ್ತ್ರೀಯರಂತೆ ಒಪ್ಪುತಿದ್ದರು, ಕಲವರು ಮದ್ದಳೆಗಳನ್ನಪ್ಪಿಕೊಂಡು ಬಹುಕಾಲಕ್ಕೆ ಪ್ರಾಣಕಾಂತನ ಕೂಟವನ್ನು ಪಡೆದು ಆತನನ್ನು ಬಿಡಲಾರದೆ ತಕ್ಕೈಸಿಕೊಂಡು ಮಲಗಿದ್ದ ಸ್ತ್ರೀಯರಂತೆ ಒಪ್ಪುತಿದ್ದರು; ಕೆಲವರು ವಿಪಂಚಿಯೆಂಬ ವಾದ್ಯವಿಶೇಷಗಳನ್ನು ತಬ್ಬಿಕೊಂಡು ಮಲಗಿ ಕಾಮುಕ ಸ್ತ್ರೀಯರಂತೆ ಒಪ್ಪುತಿದ್ದರು, ಕೆಲವರು ತಮ್ಮ ಸ್ತನಗಳಮೇಲೆ ಕೈಗಳನ್ನು ಹಾಕಿಕೊಂಡು ವಸಂತಕಾಲದಲ್ಲಿ ಪುಷ್ಪತೊಡಂಬೆಗಳಮೇಲೆ ಕವುಚಿರುವ ಎಳದಳಿರುಳ್ಳ ಪುಷ್ಪಲತೆಗಳಂತೆ ಒಪ್ಪುತಿದ್ದರು; ಕೆಲವರು ಒಬ್ಬರಿಗೊಬ್ಬರು ಅನ್ಯೋನ್ಯವಾಗಿ ಆಲಿಂಗಿಸಿಕೊಂಡು ಮಲಗಿದ್ದರು, ಕೆಲವರು ಅನರ್ಘ್ಯವಾದ ಕಂಠಮಾಲೆಗಳ ಕಾಂತಿಯಿಂದ ಆ ಶಯ್ಯಾಗೃಹವನ್ನು ಬೆಳಗಿಸುತಿದ್ದರು. ಅಂಥಾ ಸ್ತ್ರೀಯರ ಮಧ್ಯದಲ್ಲಿ ಮಲಗಿದ್ದ ರಾವಣನ ಪಟ್ಟದರಾಣಿಯಾಗಿ ಸರ್ವಾಭರಣಭೂಷಿತೆಯಾಗಿ ಸರ್ವಾಂಗ ಸೌಂದರ್ಯವತಿಯಾಗಿ ತನುಸೊಬಗುಳ್ಳವಳಾದ ಮಂಡೋದರಿಯನ್ನು ಕಂಡು ಹನುಮಂತನು ಆಕೆಯು ಸೀತಾದೇವಿಯೆಂದೆಣಿಸಿ ಹರ್ಷಯುಕ್ತನಾಗಿ "ಯಾವ ಪ್ರಕಾರದಲ್ಲಾದರೂ ಸೀತಾದೇವಿಯನ್ನು ಕಂಡೆನಲ್ಲಾ!" ಎಂದು ಸಂತೋಷಪಟ್ಟನು.

## ೧೧ನೇ ಅಧ್ಯಾಯ.

### ಹನುಮಂತನು ರಾವಣನ ಅಂತಃಪುರದಲ್ಲಿ ಸೀತೆಯನ್ನು ಹುಡುಕಿದ್ದು.

ಈ ಪ್ರಕಾರದಲ್ಲಿ ಹನುಮಂತನು ಸುಂದರಿಯಾದ ಮಂಡೋದರಿಯನ್ನು ಕಂಡು ಆಕೆಯು ಸೀತಾದೇವಿಯೆಂದೆಣಿಸಿ ಹರ್ಷಬಟ್ಟು ಆ ಬಳಿಕ ಸಂಶಯದಿಂದ ತನ್ನ ಮನಸ್ಸಿನಲ್ಲಿ "ಈಕೆಯು ಸೀತಾದೇವಿಯಾದ ಪಕ್ಷದಲ್ಲಿ ಶ್ರೀರಾಮನ ವಿಯೋಗಾವಸ್ಥೆಯಲ್ಲಿ ಭೋಜನಮಾಡಿ ಸರ್ವಾಭರಣಭೂಷಿತೆಯಾಗಿ ಮಧುಪಾನಮಾಡಿ ಸೊಕ್ಕಿ ಮಲಗಳು; ಅದಲ್ಲದೆ ದೇವೇಂದ್ರನಿಗೆ ಸಮಾನವಾದಂಥಾವನಾದರೂ ಪರಪುರುಷನ ಸಮೀಪಕ್ಕೆ ಸೇರಳು; ಆದಕಾರಣ ಇವಳು ಸೀತಾದೇವಿಯಲ್ಲ, ಯಾರೋ ಒಬ್ಬ ಸ್ತ್ರೀಯಾಗಿರಬೇಕು" ಎಂದು ನಿಶ್ಚಯಿಸಿ ಮತ್ತೊಂದು ಸ್ಥಳದಲ್ಲಿ ಸೀತಾದೇವಿಯನ್ನು ಹುಡುಕಬೇಕೆಂದು ರಾವಣನ ಮಧುಪಾನಶಾಲೆಗೆ ಹೋಗಿ ಅಲ್ಲಿ ಆತನ ಸಂಭೋಗದಿಂದ ವ್ಯಾಮರತು ಮಲಗಿದ್ದ ಸ್ತ್ರೀಯರನ್ನೂ ನೃತ್ಯಗೀತಾದಿ ವಾದ್ಯಗಳಿಂದ ದಣಿದು ಮಲಗಿದ್ದ ಸ್ತ್ರೀಯರನ್ನೂ ಕಂಡನು; ಅಲ್ಲಲ್ಲಿ ರಾಶಿಯಾಗಿ ಸುರಿದಿದ್ದ ಮೃಗಮಾಂಸಗಳೂ ಕಾಡುವರಾಹ ಮಾಂಸಗಳೂ ಕಾಡು ಕೋಣಗಳ ಮಾಂಸಗಳೂ ಸೀಕರಣೆ ಪರಮಾನ್ನ ಮೊದಲಾದ ಲೇಹ್ಯವಸ್ತುಗಳೂ ಬೆಲ್ಲದ ಪಾನಕ ಮೊದಲಾದ ಪಾನದ್ರವ್ಯಗಳೂ ಕಜ್ಜಾಯ ಮೊದಲಾದ ಭಕ್ಷ್ಯಗಳೂ ಅನ್ನ ಮೊದಲಾದ ಭೋಜ್ಯವಸ್ತುಗಳೂ ಮಧುರ ಆಮ್ಲ ಲವಣ ಖಾರ ಕಹಿ ತೊಗರಣಗಳಾದ ಷಡ್ರಸಗಳಿಂದ ತುಂಬಿದ ಸುವರ್ಣ ಪಾತ್ರೆಗಳೂ ಮಾವುನೇರಲು ಮೊದಲಾದ ಮಧುರ ಫಲಗಳ ರಾಶಿಗಳೂ ಪರಿಮಳ ಪುಷ್ಪಗಳ ಮುಡಿಸರಗಳೂ ಮಧುಪಾನನಿಮಿತ್ತವಾಗಿರಿಸಿದ ರತ್ನ ಪೀಠಗಳೂ ಭೋಜನಾರ್ಥವಾಗಿರಿಸಿದ ಸುವರ್ಣ ಪಾತ್ರೆಗಳೂ ಉಂಟಾಗಿ ಆ ಮಧುಪಾನ ಶಾಲೆಯು ದೇದೀಪ್ಯಮಾನವಾಗಿ ಹೊಳೆಯುತಿತ್ತು ಮತ್ತು ಅನೇಕ ಪರಿಮಳ ದ್ರವ್ಯಗಳಿಂದ ಪರಿಮಳಿಸುತಿದ್ದ ಮಧುವಿನಿಂದಲೂ ಸಕ್ಕರೆಯಿಂದ ನಿರ್ಮಿಸಿದ ಮದ್ಯದಿಂದಲೂ ಜೇನುತುಪ್ಪದಿಂದ ನಿರ್ಮಿಸಿದ ಮದ್ಯದಿಂದಲೂ ಪುಷ್ಪರಸದಿಂದ ನಿರ್ಮಿಸಿದ ಮದ್ಯದಿಂದಲೂ ಪರಿಪೂರ್ಣವಾದ ಚಿನ್ನ ಬೆಳ್ಳಿಗಳಿಂದ ಮಾಡಿದ ಗುಡಾಣಗಳಿಂದಲೂ ಸುವರ್ಣಮಯವಾದ ಗಿಂಡಿಗೆಗಳಿಂದಲೂ ಸ್ಫಟಿಕಮಣಿಮಯವಾದ ರತ್ನಗಳಿಂದಲೂ ಪರಿಪೂರ್ಣವಾಗಿತ್ತು. ಆ ಪಾನಪಾತ್ರೆಗಳಲ್ಲಿ ಕೆಲವು ಅರ್ಧಮಾನ ಪಾನಮಾಡಲ್ಪಟ್ಟು ಉಳಿದ ಮದ್ಯವುಳ್ಳವಾಗಿಯೂ ಕೆಲವು ಮದ್ಯದಿಂದ ತುಂಬಿ ಪಾನಮಾಡಲ್ಪಡದೆ ಇದ್ದಂಥಾವಾಗಿಯೂ ಕೆಲವು ಮದ್ಯವೆಲ್ಲವು ಪಾನಮಾಡಲ್ಪಟ್ಟು ಬರಿಯಾಗಿದ್ದಂಥಾವಾಗಿಯೂ ಕೆಲವು ಪಾನಮಾಡಿದವರು ಮದಸೊಕ್ಕಿ ಇಟ್ಟಾಡುವವರಿಂದ ಒಡೆದಂಥಾವಾಗಿಯೂ ಕೆಲವು ಪರಿಮಳ ಕಟ್ಟು ತುಂಬಿದ ಗುಡಾಣಗಳಿಂದ

ತುಂಬಲ್ಪಟ್ಟಂಥಾವಾಗಿಯೂ ಇದ್ದವು ಮಧುಪಾನಮಾಡಿ ಮೈಮರೆತು ಅನ್ಯೋನ್ಯ ತಕ್ಕೈಸಿಕೊಂಡು ಮಲಗಿದ್ದವರೂ ಒಬ್ಬರ ವಸ್ತ್ರವನ್ನೊಬ್ಬರು ತೆಗೆದು ಹೊದ್ದುಕೊಂಡು ಮೈಮರೆತು ಮಲಗಿದ್ದವರೂ ಉಟ್ಟು ಹೊದ್ದಿದ್ದ ವಸ್ತ್ರಗಳೂ ಅಲಂಕರಿಸಿಕೊಂಡಿದ್ದ ಪುಷ್ಪಮಾಲಿಕೆಗಳೂ ಅವರ ಸುಯ್ಲು ಮಂದಮಾರುತದಿಂದ ಚರಿಸುತ್ತಿರಲು ಆ ಸ್ತ್ರೀಯರ ಉಚ್ಛ್ವಾಸಗಳಿಂದೊರಡುವ ಪರಿಮಳವು ಶ್ರೀಗಂಧ ಪರಿಮಳದಿಂದಲೂ ನಾನಾಪ್ರಕಾರವಾದ ಪುಷ್ಪಮಾಲಿಕೆಗಳ ಪರಿಮಳಗಳಿಂದಲೂ ಕೂಡಿ ತಂಗಾಳಿಯನ್ನುಂಟುಮಾಡುತಿತ್ತು! ಕೆಲವು ಸ್ತ್ರೀಯರು ಕೃಷ್ಣವರ್ಣವುಳ್ಳವರಾಗಿಯೂ ಕೆಲವರು ಶ್ಯಾಮಲವರ್ಣವುಳ್ಳವರಾಗಿಯೂ ಕೆಲವರು ಪುಟವಿಕ್ಕಿದ ಚಿನ್ನದಂತೆ ತನುಕಾಂತಿಯುಳ್ಳವರಾಗಿಯೂ ಇದ್ದರು!

ಈ ಪ್ರಕಾರದಲ್ಲಿ ಸ್ತ್ರೀಯರಿಂದ ಪರಿಪೂರ್ಣವಾದ ರಾವಣನ ಅಂತಃಪುರವನ್ನು ಹೊಕ್ಕು ನೋಡಿ ಹನುಮಂತನು ಸೀತಾದೇವಿಯನ್ನು ಕಾಣದೆ ಚಿಂತಿಸಿ "ಕಟಕಟಾ! ಈ ಅಂತಃಪುರದಲ್ಲಿ ಸೀತಾದೇವಿಯು ಕಾಣಬರಲಿಲ್ಲ; ಇಲ್ಲಿ ಬಂದದ್ದರಿಂದ ನನಗೆ ಮಹತ್ತಾದ ಪಾಪವು ಸಂಭವಿಸಿತು, ಮಲಗಿರುವ ಪರಸ್ತ್ರೀಯರ ದರ್ಶನಮಾಡಿದರೆ ಪುರುಷನಿಗೆ ದೋಷವು ಬರುವದೆಂದು ಧರ್ಮಶಾಸ್ತ್ರವುಂಟು; ನನಗೆ ಪರಸ್ತ್ರೀಯರ ದರ್ಶನದಲ್ಲಿ ಇಚ್ಛೆಯಿಲ್ಲ, ಆದರೆ ಪರಸ್ತ್ರೀಲೋಲನಾದ ರಾವಣನ ದರ್ಶನದಿಂದ ಪಾಪವು ಸಂಭವಿಸುವದು; ಕಾರ್ಯನಿಮಿತ್ತವಾಗಿ ಮಲಗಿದ್ದ ಸ್ತ್ರೀಯರನ್ನು ನೋಡಿದ್ದರಿಂದ ಕಿಂಚಿತ್ತಾದರೂ ನನಗೆ ಚಿತ್ತವಿಕಾರ ಹುಟ್ಟಲಿಲ್ಲ; ಲೋಕದಲ್ಲಿ ಚಿತ್ತವಿಕಾರವೇ ಪಾಪಸಾಧನವಲ್ಲದೆ ದರ್ಶನಮಾತ್ರವು ಪಾಪಸಾಧನವಲ್ಲ; ಚಕ್ಷುರಾದಿ ಇಂದ್ರಿಯಗಳು ತಮ್ಮತಮ್ಮ ವಿಷಯಗಳಲ್ಲಿ ಪ್ರವೇಶಿಸುವದು ಸ್ವಭಾವವು; ಲೋಕದಲ್ಲಿ ಸ್ತ್ರೀಯರನ್ನು ಕಾಣಬೇಕಾದರೆ ಸ್ತ್ರೀಯರ ಸಮೂಹದಲ್ಲಿ ಹುಡುಕಬೇಕಲ್ಲದೆ ಮತ್ತೊಂದು ಸ್ಥಳದಲ್ಲಿ ಕಾಣುವದಕ್ಕೆ ಶಕ್ಯವಲ್ಲ; ಯಾವದು ಯಾವ ಸ್ಥಳದಲ್ಲಿರುವದಕ್ಕೆ ಯೋಗ್ಯವೋ ಅಲ್ಲೇ ಇರುವದಲ್ಲದೆ ಮತ್ತೊಂದು ಸ್ಥಳದಲ್ಲಿರಲಾರದು, ಸ್ತ್ರೀಯರನ್ನು ಸ್ತ್ರೀಯರಿರುವಲ್ಲಿಯೇ ಹುಡುಕಬೇಕಲ್ಲದೆ ಮೃಗಸಮೂಹದಲ್ಲಿ ಹುಡುಕಿದರೆ ಪ್ರಯೋಜನವಿಲ್ಲ; ಆದಕಾರಣ ನಾನು ಅಂತರಂಗದಲ್ಲಿ ರಾವಣನ ಅಂತಃಪುರವನ್ನು ಹೊಕ್ಕು ದೇವಗಂಧರ್ವ ಸ್ತ್ರೀಯರು ಮೊದಲಾದ ಸ್ತ್ರೀಯರನ್ನು ಕಂಡೆನು, ಆದರೂ ಇದರೊಳಗೆ ಸೀತಾದೇವಿಯನ್ನು ಕಾಣಲಿಲ್ಲ!" ಎಂದು ವ್ಯಥೆಪಡುತಿದ್ದನು.

---

## ೧೨ನೇ ಅಧ್ಯಾಯ

### ಹನುಮಂತನು ಲಂಕಾಪಟ್ಟಣದಲ್ಲಿ ಸೀತಾದೇವಿಯನ್ನು ಹುಡುಕಿದ್ದು.

ಈ ಪ್ರಕಾರಲ್ಲಿ ಹನುಮಂತನು ರಾವಣನ ಅಂತಃಪುರವನ್ನು ಹೊಕ್ಕು ಶಯ್ಯಾಗೃಹ ಮೊದಲಾಗಿ ಗೃಹ ಪುಷ್ಪಕವೆಂಬ ವಿಮಾನ ತೊಟ್ಟಿಕಟ್ಟು ಮೇಲುಮಚ್ಚು ಉಪ್ಪರಿಗೆ ಮಧುಪಾನಶಾಲೆ ಏಕಾಂತಶಾಲೆ ಲತಾಗೃಹ ಘೋಳಮಂಟಪ ಮೊದಲಾದ ಮನೆಗಳಲ್ಲಿ ಶೀತಾದೇವಿಯನ್ನುಡಿಕಿ ಕಾಣದೆ ಚಿಂತಾಕ್ರಾಂತನಾಗಿ ಕಂಗೆಟ್ಟು ತನ್ನ ಮನಸ್ಸಿನಲ್ಲಿ "ಕಟಕಟಾ! ಸೀತಾದೇವಿಯು ನನ್ನ ಕಣ್ಣುಗಳಿಗೆ ಗೋಚರವಾಗದ್ದರಿಂದ ಶರೀರವನ್ನು ಬಿಟ್ಟಿರಬೇಕು, ಈ ಅರ್ಥದಲ್ಲಿ ಸಂಶಯವಿಲ್ಲ, ಈ ರಾಕ್ಷಸರು ಮಹಾಬಲವಂತರು; ಸೀತಾದೇವಿಯು ತನ್ನ ಶೀಲವನ್ನು ಕೆಡಿಸಿಕೊಳ್ಳುವವಳಲ್ಲ; ದುಷ್ಟರಾವಣನು ಶೀಲವತಿಯಾದ ಶೀತಾದೇವಿಯನ್ನು ಕೊಂದುಹಾಕಿರಬೇಕು; ಇಲ್ಲದಿದ್ದರೆ ಕೋರೆದಾಡೆಗಳಿಂದ ಭಯಂಕರವಾದ ಮುಖವುಳ್ಳವರಾಗಿ ಅತ್ಯದ್ಭುತವಾದ ಶರೀರಾಕಾರವುಳ್ಳ ಈ ರಾಕ್ಷಸಸ್ತ್ರೀಯರನ್ನು ನೋಡಿ ಕಂಗೆಟ್ಟು ಸೀತಾದೇವಿಯು ಲೋಕಾಂತರವನ್ನೈದಿರಬೇಕು! ಕಟಕಟಾ! ಅಷ್ಟುಮಂದಿ ಕಪಿನಾಯಕರಮುಂದೆ ಸೀತಾದೇವಿಯನ್ನು ಕಂಡು ಬರುವದಾಗಿ ರಾಜನಾದ ಸುಗ್ರೀವನಿಗೆ ಹೇಳಿಬಂದು ಈಗ ಆ ದೇವಿಯನ್ನು ಕಾಣದೇಹೋದರೆ ನನ್ನ ಪೌರುಷವು ಏನಾಗುವದು! ನಾನು ಸುಗ್ರೀವನ ಬಳಿಗೆ ಹ್ಯಾಗೆ ಹೋಗು

ವೆನು, ಕಾರ್ಯವನ್ನು ಸಾಧ್ಯಮಾಡಿಕೊಳ್ಳದೆ ಹೋದರೆ ಆತನು ನನ್ನನ್ನು ಹ್ಯಾಗೆ ನೋಡುವನು! ಸೀತಾದೇವಿಯನ್ನು ಕಾಣದಮೇಲೆ ಇಷ್ಟುದಿವಸಗಳು ಬೆಟ್ಟಗುಟ್ಟೆ ಶಿಖರಾವಳಿ ವನಾಂತರ ದ್ವೀಪಾಂತರಗಳಲ್ಲಿ ಅರಸಿ ನೋಡಿದ್ದೂ ಅಸಾಧ್ಯವಾದ ಈ ಸಮುದ್ರವನ್ನು ದಾಟಿದ್ದೂ ಪ್ರಾಣಿಮಾತ್ರಕ್ಕೆ ಅಗೋಚರವಾದ ರಾವಣನ ಅಂತಃಪುರವನ್ನು ಹೊಕ್ಕು ನೋಡಿದ್ದೂ—ಈ ಪ್ರಯಾಸಗಳೆಲ್ಲವೂ ವ್ಯರ್ಥವಾಗುವವು, ಸೀತಾದೇವಿಯನ್ನು ಕಾಣದೆ ಸುಗ್ರೀವನು ಮೊದಲಾದ ಕಪಿನಾಯಕರ ಸಮೀಪಕ್ಕೆ ಹೋದರೆ ನನ್ನನ್ನು ಕೊಂಡಾಡಿದ ಜಾಂಬವನು ಏನನ್ನುವನು! ಆದಕಾರಣ ಎಷ್ಟು ಪ್ರಯಾಸಪಟ್ಟಾದರೂ ಸೀತಾದೇವಿಯನ್ನು ಹುಡುಕಿ ಕಾಣಬೇಕಲ್ಲದೆ ಸುಮ್ಮನೆ ಹೋಗಬಾರದು; ಲೋಕದಲ್ಲಿ ಪ್ರಯಾಸಪಡದೆ ಕಾರ್ಯವು ಸಾಧ್ಯವಾಗುವದಿಲ್ಲ; ಪ್ರಯಾಸವುಹೊರತಾಗಿ ಸುಖವಿಲ್ಲ, ನಾನು ಇನ್ನು ನನ್ನ ಶರೀರ ಪ್ರಯಾಸವನ್ನು ಗಣಿಸದೆ ಈ ಲಂಕಾಪಟ್ಟಣದೊಳಗೆ ಇದುವರಿಗೂ ನೋಡದಿದ್ದ ಸ್ಥಳಗಳಲ್ಲಿ ಆಲಸ್ಯವಿಲ್ಲದೆ ಹುಡುಕಿ ನೋಡುವೆನು, ಲೋಕದಲ್ಲಿ ಆಲಸ್ಯವಿಲ್ಲದೆ ಮಾಡುವ ಯತ್ನವು ಕಾರ್ಯಸಾಧಕವಾಗುವದು, ಆದಕಾರಣ ಕಾರ್ಯಾರ್ಥಿಯಾಗಿ ಬಂದ ನಾನು ಆಲಸ್ಯವಿಲ್ಲದೆ ಯತ್ನಮಾಡಿ ಈ ರಾವಣನು ಪರಿಪಾಲಿಸುವ ರಾಜ್ಯವೆಲ್ಲವನ್ನು ಅರಸಿ ನೋಡುತ್ತೇನೆ!" ಎಂದುನಿಶ್ಚಯಿಸಿದನು.

ಆ ಬಳಿಕ ಹನುಮಂತನು ಅಂತರಿಕ್ಷಮಾರ್ಗಕ್ಕೆ ನೆಗೆದುಹೋಗಿ ನೋಡುತ ಮುಚ್ಚಿದ ಮನೆಗಳ ಬಾಗಲುಗಳನ್ನು ತೆರೆದು ನೋಡುತ ಲಾಳವಿಂಡಿಗೆ ಬೀಗಮುದ್ರೆಗಳಿಂದ ಸತುವಾದ ಬಾಗಿಲುಗಳನ್ನು ಒದ್ದು ಕೆಡಹಿ ಮುರಿದು ಆ ಮನೆಗಳಲ್ಲಿ ನೋಡುತ ಗುರಿಕಾರರಾದ ರಾಕ್ಷಸರ ಮನೆಗಳಲ್ಲಿಯೂ ಉದ್ಯಾನ ವನಗಳಲ್ಲಿಯೂ ಕ್ರೀಡಾಕೊಳಗಳಲ್ಲಿಯೂ ಉಪ್ಪರಿಗೆಗಳಲ್ಲಿಯೂ ಆ ಲಂಕಾಪಟ್ಟಣದ ಕೋಟೆಕೊತ್ತಳ ಆಳುವೇರಿಗಳಲ್ಲಿಯೂ ಚಾವಡಿಗಳಲ್ಲಿಯೂ ಜನಗೋಷ್ಠಿ ಚಾವಡಿಗಳಲ್ಲಿಯೂ ಹಳ್ಳಗಳಲ್ಲಿಯೂ ರಾವಣನ ಬೊಕ್ಕಸ ಭಂಡಾರದ ಮನೆಗಳಲ್ಲಿಯೂ ಆ ಪಟ್ಟಣದೊಳಗಾಗಿ ತಾನು ಹುಡುಕದ ಸ್ಥಳವು ನಾಲ್ಕು ಬೆಟ್ಟಿಷ್ಟಾದರೂ ಇಲ್ಲದಂತೆ ನೋಡಿ ಮತ್ತು ಆ ಪಟ್ಟಣದಲ್ಲಿ ಘೋರಾಕಾರರಾದ ರಾಕ್ಷಸಸ್ತ್ರೀಯರಲ್ಲಿ ರಾವಣನು ಬಲಾತ್ಕಾರದಿಂದ ಹಿಡಿತಂದು ಶೆರೆಯಿಟ್ಟಿದ್ದ ದೇವ ಗಂಧರ್ವ ನಾಗ ಯಕ್ಷ ಕಿನ್ನರ ಕಿಂಪುರುಷ ಸ್ತ್ರೀಯರಲ್ಲಿಯೂ ಅರಸಿನೋಡಿ ಸೀತಾದೇವಿಯನ್ನು ಕಾಣದೆ ತನ್ನ ಪ್ರಯಾಸವೆಲ್ಲವು ವ್ಯರ್ಥವಾಯಿತೆಂದು ಚಿಂತಿಸುತಿದ್ದನು

---

## ೧೩ನೇ ಅಧ್ಯಾಯ.

### ಹನುಮಂತನು ಸೀತಾದೇವಿಯನ್ನು ಕಾಣದೆ ಕ್ಲೇಶಪಟ್ಟದ್ದು.

ಈ ಮರ್ಯಾದೆಯಲ್ಲಿ ಹನುಮಂತನು ಸೀತಾದೇವಿಯನ್ನು ಲಂಕಾಪಟ್ಟಣದಲ್ಲಿ ಕಾಣದೆ ಚಿಂತಾಕ್ರಾಂತನಾಗಿ ಮೇಘಮಂಡಲದಲ್ಲಿ ಮಿಂಚುಹೊಳೆಯುವಂತೆ ಅಂತರಿಕ್ಷಮಾರ್ಗವನ್ನು ತನ್ನ ತನುಕಾಂತಿಯಿಂದ ಬೆಳಗಿಸುತ ತ್ರಿಕೂಟ ಪರ್ವತದ ಅಗ್ರಭಾಗದಲ್ಲಿದ್ದ ಲಂಕಾಪಟ್ಟಣದಿಂದ ಹೊರಟುಬರುತ "ಕಟಕಟಾ! ನಾನು ಅತಿಸಾಹಸವನ್ನು ಮಾಡಿ ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನು ಹೊಕ್ಕು ನೋಡಿದೆನು; ಅಲ್ಲಲ್ಲಿರುವ ಕೆರೆಗಳನ್ನೂ ಕೊಳಗಳನ್ನೂ ನದಿಗಳನ್ನೂ ಹಳ್ಳಗಳನ್ನೂ ಗುಟ್ಟೆ ಬೆಟ್ಟಗಳನ್ನೂ ಶಿಖರಾವಳಗಳನ್ನೂ ಅರಸಿನೋಡಿ ಸೀತಾದೇವಿಯನ್ನು ಕಾಣದೆ ಹೋದೆನು; ಗೃಧ್ರರಾಜನಾದ ಸಂಪಾತಿಯು ರಾವಣನು ಸೀತಾದೇವಿಯನ್ನಪಹರಿಸಿಕೊಂಡು ಬಂದು ಲಂಕಾಪಟ್ಟಣದಲ್ಲಿರಿಸಿದ್ದಾಗಿ ಹೇಳಿದ್ದರಿಂದ ಈ ಪಟ್ಟಣಕ್ಕೆ ಬಂದು ರಾವಣನ ಅಂತಃಪುರಕ್ಕೆ ಹೋಗಿ ಸೀತಾದೇವಿಯನ್ನರಸಿದೆನು; ಆ ದೇವಿಯು ಅತ್ಯಂತ ದುಷ್ಟನಾದ ರಾವಣನ ಸಮೀಪದಲ್ಲಿರುವವಳಲ್ಲ; ಅವನು ಆಕೆಯನ್ನು ಅಪಹರಿಸಿಕೊಂಡು ಬರುವಾಗ ರಾಮನ ಬಾಣವನ್ನು ನೆನೆದು ಬೆದರಿದ ಸಮಯದಲ್ಲಿ ಸೀತಾದೇವಿಯು ಸಮುದ್ರದಲ್ಲಿ ಬಿದ್ದಳೋ ಏನೋ ಅರಿಯಲಾಗದು, ಅಲ್ಲದಿದ್ದರೆ ಅಂತರಿಕ್ಷಮಾರ್ಗದಲ್ಲಿ ಬರುವಾಗ ಸಮುದ್ರವನ್ನು ಕಂಡು ಭಯಪಟ್ಟು ಶರೀರವನ್ನು ಬಿಟ್ಟಳೋ ಹ್ಯಾಗೋ! ಇಲ್ಲವೇ ಅಂತರಿಕ್ಷದಲ್ಲಿ ಬರುವಾಗ ವೇಗಾತಿಶಯದಿಂದ ವೈಕ

ಲುಕಿ ಶರೀರವನ್ನು ಬಿಟ್ಟಳೋ! ಅಲ್ಲದೆ ಶೀಲವತಿಯಾದ ಆ ದೇವಿಯು ಕ್ಷುದ್ರರಾವಣನು ಬಲಾತ್ಕಾರಮಾಡಲು ತನ್ನ ಶೀಲವನ್ನುಳಿಸಿಕೊಳ್ಳಬೇಕೆಂದು ಮರಣವನ್ನೈದಿದಳೋ! ಈ ದುಷ್ಟಾಚಾರನಾದ ರಾವಣನಾದರೂ ದುಷ್ಟೆಯರಾದ ರಾಕ್ಷಸಸ್ತ್ರೀಯರಾದರು ಆಕೆಯನ್ನು ನುಂಗಿರಬೇಕು! ತಾವರೆ ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳುಂಟಾಗಿ ಪೂರ್ಣಚಂದ್ರನಂತೆ ಮನೋಹರವಾದ ಶ್ರೀರಾಮನ ಮುಖವನ್ನು ಧ್ಯಾನಮಾಡಿ ಧ್ಯಾನಾಲಯದಿಂದ ಲಯವನ್ನೈದಿದಳೋ! 'ಹಾ ರಾಮಾ! ಹಾ ಲಕ್ಷ್ಮಣಾ! ಹಾ ಅಯೋಧ್ಯಾಪಟ್ಟಣವೇ!' ಎಂದು ಬಹಳವಾಗಿ ಹಂಬಲಿಸಿ ಶರೀರವನ್ನು ಬಿಟ್ಟಳೋ! ಅಲ್ಲದಿದ್ದರೆ ರಾವಣನ ಮನೆಗೆ ಒಂದು ಕಂಗೆಟ್ಟು ಮೃತಿಯನ್ನೈದಿದಳೋ! ಅಲ್ಲವೇ ರಾವಣನ ಮನೆಯಲ್ಲಿ ಸೆರೆಯಿಡಲ್ಪಟ್ಟು ಪಂಜರದಲ್ಲಿರುವ ಹೆಣ್ಣುಗಿಣಿಯಂತೆ ಹಂಬಲಿಸಿ ಶರೀರವನ್ನು ಬಿಟ್ಟಳೋ! ಪ್ರಸಿದ್ಧವಾದ ಜನಕರಾಯನ ವಂಶದಲ್ಲಿ ಹುಟ್ಟಿ ಇಕ್ಷ್ವಾಕುವಂಶೋದ್ಧಾರಕನಾದ ಶ್ರೀರಾಮನ ಪಟ್ಟದ ರಾಣಿಯಾಗಿ ಸುಕುಮಾರಾಂಗಿಯಾಗಿದ್ದ ಸೀತಾದೇವಿಯು ಕಠಿನಹೃದಯನಾದ ರಾವಣನ ವಶದಲ್ಲಿ ಹ್ಯಾಗೆ ಇದ್ದಾಳೋ—ತಪ್ಪಿಹೋದಳೋ—ಪ್ರಮಾದದಿಂದ ಮೃತ್ಯುವನ್ನೈದಿದಳೋ!" ಎಂದು ಚಿಂತಿಸಿ ಮತ್ತೂ "ಸೀತಾದೇವಿಯಲ್ಲಿ ಅತ್ಯಂತ ಆಸಕ್ತಿಯುಳ್ಳ ಶ್ರೀರಾಮನ ಕೂಡೆ ಏನೆಂದು ಹೇಳುವೆನು! ನಿಶ್ಚಯವನ್ನು ತಿಳಿಯದೆ ಏನಾದರು ಒಂದನ್ನು ಹೇಳಬಾರದು, ಹೇಳಿದರೂ ದೋಷ—ಹೇಳದಿದ್ದರೂ ದೋಷ! ಇಂಥಾ ವಿಷಮಕಾರ್ಯ ಬಂದಲ್ಲಿ ಏನುಮಾಡಬೇಕು! ಈಗ ಕಾಲೋಚಿತಕಾರ್ಯವೇನು! ಕಟಕಟಾ! ನಾನು ಸೀತಾದೇವಿಯನ್ನು ಕಾಣದೆ ಕಿಷ್ಕಿಂಧಾಪಟ್ಟಣಕ್ಕೆ ಹೋದರೆ ಅಲ್ಲಿ ನನಗೆ ಪುರುಷಾರ್ಥವೇನು! ಹಾಗೆ ಹೋದಪಕ್ಷದಲ್ಲಿ ಈ ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನು ಹೊಕ್ಕು ನೋಡಿದ್ದೆಲ್ಲವು ವ್ಯರ್ಥವಾಗುವದು; ಸುಗ್ರೀವನು ಏನುಹೇಳುವನೋ! ಕಪಿನಾಯಕರು ಕೂಡಿ ಏನುಹೇಳುವರೋ! ಕಿಷ್ಕಿಂಧಾಪಟ್ಟಣಕ್ಕೆ ಹೋದರೆ ಆ ಸುದ್ದಿಯನ್ನು ಕೇಳಿ ದಶರಥರಾಯನ ಕುಮಾರರಾದ ರಾಮಲಕ್ಷ್ಮಣರು ಬಂದರೆ ಅವರಿಗೆ ಯಾವ ಪ್ರಿಯಕಾರ್ಯವನ್ನು ಹೇಳಲಿ; ಸೀತಾದೇವಿಯನ್ನು ಕಾಣಲಿಲ್ಲವೆಂದು ಹೇಳಿದರೆ ಆ ಮಾತನ್ನು ಕೇಳಿದ ಕ್ಷಣದಲ್ಲಿಯೇ ಶ್ರೀರಾಮನು ಶರೀರವನ್ನು ಬಿಡುವನು, ಅತಿ ನಿಷ್ಠುರವಾಗಿ ಅತಿ ಕಠಿಣವಾಗಿ ಅತಿಕ್ರೂರವಾಗಿ ಕರ್ಣಕಠೋರವಾದ ಆದುರ್ವಾರ್ತೆಯನ್ನು ಕೇಳಿದರೆ ಆತನು ಶರೀರದಿಂದಿರನು; ಆತನಲ್ಲಿ ಅತ್ಯಂತ ಪ್ರಿಯವುಳ್ಳ ಲಕ್ಷ್ಮಣನು ಶ್ರೀರಾಮನ ವಿಪತ್ತನ್ನು ಕಂಡು ತಾನೂ ಶರೀರವನ್ನು ಬಿಡುವನು, ರಾಮಲಕ್ಷ್ಮಣರ ಮರಣವಾರ್ತೆಯನ್ನು ಕೇಳಿದರೆ ಭರತನು ಪಂಚತ್ವವನ್ನೈದುವನು; ಆತನ ಮರಣವನ್ನು ಕೇಳಿ ಶತ್ರುಘ್ನನು ಶರೀರವನ್ನು ಬಿಡುವನು, ಈ ನಾಲ್ಕು ಮಕ್ಕಳ ದೇಹತ್ಯಾಗವಾರ್ತೆಯನ್ನು ಕೇಳಿ ಕೈಕೆಯೀದೇವಿ ಸುಮಿತ್ರಾದೇವಿ ಕೌಸಲ್ಯಾದೇವಿಗಳು ಮೃತಿಯನ್ನೈದುವರು, ಇಷ್ಟುಮಂದಿಯ ಶರೀರತ್ಯಾಗ ವಾರ್ತೆಯನ್ನು ಕೇಳಿದರೆ ಸತ್ಯಸಂಧನಾದ ಸುಗ್ರೀವನು ಲೋಕಾಂತರವನ್ನೈದುವನು; ಆತನ ಶರೀರತ್ಯಾಗ ವಾರ್ತೆಯನ್ನು ಕೇಳಿ ಆತನ ಸ್ತ್ರೀಯಾದ ರುಮಾದೇವಿಯು ದೇಹತ್ಯಾಗವನ್ನು ಮಾಡಿಕೊಳ್ಳುವಳು, ಆಮೇಲೆ ವಾಲಿಯ ಮರಣಶೋಕದಿಂದ ಕೃಶಳಾಗಿರುವ ತಾರಾದೇವಿಯು ನಿಲ್ಲಲರಿಯಳು; ತಾಯಿತಂದೆಗಳ ಮರಣವಾರ್ತೆಯನ್ನು ಕೇಳಿ ಅಂಗದನು ಜೀವಿಸಲಾರನು; ಸುಗ್ರೀವನ ಮರಣವಾರ್ತೆಯನ್ನು ಕೇಳಿ ಆತನಿಂದ ವಸ್ತ್ರಾಲಂಕಾರ ಭೂಷಣ ಭೋಜನಾದಿ ಸನ್ಮಾನಗಳನ್ನು ಪಡೆಯುವಂಥಾ ಕಪಿನಾಯಕರು ತಮ್ಮ ಮುಷ್ಟಿಗಳಿಂದಲೂ ಗುಂಡುಕಲ್ಲುಗಳಿಂದಲೂ ತಮ್ಮ ತಲೆಗಳನ್ನು ಒಡೆದುಕೊಂಡು ಪರಲೋಕವನ್ನೈದುವರು; ದೇಶಾಂತರಗಳಲ್ಲಿಯೂ ಪರ್ವತಗಳಲ್ಲಿಯೂ ವನಾಂತರಗಳಲ್ಲಿಯೂ ಆಹಾರನಿಮಿತ್ತವಾಗಿರುವ ಕಪಿಗಳು ವ್ಯಾಪಾರಗಳನ್ನು ಬಿಟ್ಟು ತಮ್ಮ ಸ್ತ್ರೀಪುತ್ರರಸಮೇತರಾಗಿ ಕಮರಿಗಳಲ್ಲಿ ಬಿದ್ದು ಶರೀರಗಳನ್ನು ಬಿಡುವರು; ಇಲ್ಲವೇ ವಿಷಪ್ರಯೋಗ ಅಗ್ನಿಪ್ರವೇಶ ಉಪವಾಸ ಆಯುಧಗಳ ಅಲಗು ಮೊದಲಾದವುಗಳಿಂದ ಶರೀರವನ್ನು ಬಿಡುವರು! ನಾನು ಹೋಗಿ ಸೀತಾದೇವಿಯನ್ನು ಕಾಣಲಿಲ್ಲವೆಂದು ಹೇಳುವಮಾತ್ರದಲ್ಲಿಯೇ ಇಷ್ಟು ಅನರ್ಥಗಳುಂಟಾಗಿ ಇಕ್ಷ್ವಾಕುವಂಶವೂ ಕಪಿವಂಶವೂ ನಾಶವನ್ನೈದುವವು! ಆದಕಾರಣ ನಾನು ಸೀತಾದೇವಿಯನ್ನು ಕಾಣದೆ ಕಿಷ್ಕಿಂಧಾಪಟ್ಟಣಕ್ಕೆ ಹೋಗಲೊಲ್ಲೆನು—ಸುಗ್ರೀವನನ್ನು ಕಾಣಿಸಿಕೊಳ್ಳಲೊಲ್ಲೆನು! ನಾನು ಕಿಷ್ಕಿಂಧಾಪಟ್ಟಣಕ್ಕೆ ಹೋಗದೇ ಇದ್ದಪಕ್ಷದಲ್ಲಿ ರಾಮಲಕ್ಷ್ಮಣ ಸುಗ್ರೀವಾದಿಗಳು ನಾನು ಕಾರ್ಯಸಾಧನೆಮಾಡಿ ಇಂ

ದೋ ನಾಳೆಯೋ ಬರುವೆನೆಂಬ ಆಶೆಯಿಂದ ಜೀವಿಸಿಕೊಂಡಿರುವರು', ನಾನು ಸೀತಾದೇವಿಯನ್ನು ಕಾಣದಿದ್ದಪಕ್ಷದಲ್ಲಿ ವಾನಪ್ರಸ್ಥಾಶ್ರಮವನ್ನು ಮಾಡಿಕೊಂಡು ಯಾರಾದರೂ ತಾವೇ ತಂದುಕೊಟ್ಟ ಕಬಳವನ್ನು ಕೈಕೊಂಡು ಆಹಾರಸಿಯಮವನ್ನು ಮಾಡಿಕೊಂಡಿದ್ದು ಬಂದು ಮರದಡಿಯನ್ನಾಶ್ರಯಿಸಿಕೊಂಡಿರುವೆನಲ್ಲದೆ ಕಿಷ್ಕಿಂಧಾಪಟ್ಟಣಕ್ಕೆ ಹೋಗೆನು! ಇಲ್ಲದಿದ್ದರೆ ಸಮುದ್ರತೀರದಲ್ಲಿ ನೀರುಳ್ಳ ಪ್ರದೇಶದಲ್ಲಿ ಕಂದಮೂಲ ಫಲಾದಿಗಳುಳ್ಳ ವನದಲ್ಲಿ ವಾಸ ಮಾಡಿಕೊಂಡಿರುವೆನು, ಹಾಗೂ ಅಲ್ಲದಿದ್ದರೆ ಚಿತೆಯನ್ನು ಮಾಡಿ ಅಗ್ನಿಪ್ರವೇಶವನ್ನು ಮಾಡುವೆನು! ತಪಸ್ವಿನಿಯಾದ ಸೀತಾದೇವಿಯನ್ನರಸಿಕೊಂಡು ಬಂದ ನಾನು ಸಮುದ್ರತೀರದಲ್ಲಿ ಮರಣವನ್ನು ನಿಶ್ಚಯಿಸಿಕೊಂಡು ಪ್ರಾಯೋಪವೇಶಕ್ಕೆ ಕುಳಿತರೆ ನನ್ನ ಶರೀರವನ್ನು ನರಿ ಹದ್ದು ಕಾಗೆಗಳು ಭಕ್ಷಿಸಿಕೊಂಡು ಹೋಗಲಿ! ಸ್ವಾಮಿಕಾರ್ಯಕ್ಕೆ ಹನಿಬಂದಲ್ಲಿ ಭೃತ್ಯನಾದವನು ಆ ಕಾರ್ಯಕ್ಕೆ ಶಲವಾಗಿ ಶರೀರವನ್ನು ಬಿಟ್ಟರೆ ಆತ್ಮಹತ್ಯ ದೋಷವಿಲ್ಲವೆಂದು ಧರ್ಮಶಾಸ್ತ್ರಗಳನ್ನು ಬಲ್ಲ ಋಷಿಗಳು ಹೇಳುವರು, ಅಲ್ಲದಿದ್ದರೆ ಗಂಗಾಪ್ರವೇಶವನ್ನಾದರೂ ಮಾಡುವೆನು. ಸೀತಾದೇವಿಯನ್ನರಸಬೇಕೆಂದು ಸಾಯಂಕಾಲದಲ್ಲಿ ಲಂಕಾಪಟ್ಟಣವನ್ನು ಪ್ರವೇಶಮಾಡಿದ ನನಗೆ ಈ ರಾತ್ರಿಯು ಕಳೆಯಿತು, ಈ ರಾತ್ರಿಯಲ್ಲಿ ನಾನು ಲಂಕಾಪಟ್ಟಣವನ್ನು ಪ್ರವೇಶಮಾಡಿ ಲಂಕಾದೇವತೆಯಕೂಡೆ ಯುದ್ಧವನ್ನು ಮಾಡಿ ಆಕೆಯನ್ನು ಜಯಿಸಿದಾಗ ಚಂದ್ರೋದಯವಾಗಿ ಶುಭಸೂಚಕವಾಯಿತು, ಈ ರಾತ್ರಿಯು ನಾನು ಲಂಕಾಪಟ್ಟಣವನ್ನು ಪ್ರವೇಶಿಸಿದ್ದರಿಂದ ಕೀರ್ತಿಸಾಧನವಾಗಿ ನಾನು ನಿದ್ರೆಯಿಲ್ಲದೆ ಪಟ್ಟಣವನ್ನೂ ರಾವಣಾದಿಗಳ ಮನೆಗಳನ್ನೂ ಪ್ರವೇಶಿಸಿದ್ದರಿಂದ ಪ್ರಸಿದ್ಧಿಪಡೆದು ಇಂಥಾ ರಾತ್ರಿಯಲ್ಲಿ ಸೀತಾದೇವಿಯ ದರ್ಶನವಿಲ್ಲದ್ದರಿಂದ ನಾನು ಇಲ್ಲಿಂದ ತಿರಿಗಿ ಹೋಗುವದಕ್ಕಿಲ್ಲ, ಎಲ್ಲಿಯೂ ಆ ದೇವಿಯನ್ನು ಕಾಣದಿದ್ದರೆ ಅಂಗದನಿಗೂ ಆತನ ಕೂಡೆ ಬಂದ ಕಪಿನಾಯಕರಿಗೂ ವಿಪತ್ತು ಬರುವದು, ಅವರಿಗೆ ವಿಪತ್ತು ಬಂದಾಗಲೇ ನನಗೆ ಬಹುಪಾಪವು ಸಂಭವಿಸುವದು; ನಾನು ಇಲ್ಲಿ ಶರೀರವನ್ನು ಬಿಟ್ಟೆನಾದರೆ ಅವರು ಜೀವವಂತರಾಗಿರರು!'' ಎಂದು ದುಃಖಾತಿಶಯದಿಂದ ಬಹುವಿಧವಾಗಿ ಹಂಬಲಿಸಿ ದುಃಖವನ್ನು ಕಡೆಗಾಣದೆ "ನಾನು ಇಲ್ಲಿ ಸೀತಾದೇವಿಯನ್ನು ಕಾಣದಮೇಲೆ ಮಹಾಬಲವಂತನಾಗಿ ದಶಗ್ರೀವನಾದ ರಾವಣನನ್ನಾದರೂ ಕೊಂದು ಹೋಗುವೆನು, ಅಲ್ಲದಿದ್ದರೆ ರುದ್ರನಿಗೆ ಪಶುಭಾಗದಂತೆ ಆತನನ್ನು ಸಮುದ್ರಮಧ್ಯದಲ್ಲಿಡುವೆನು'' ಎಂದು ಕೋಪಾತಿಶಯದಿಂದ ಅತ್ಯಂತ ಚಿಂತಾಕ್ರಾಂತನಾಗಿ ಮತ್ತು ಧೈರ್ಯವನ್ನು ತಂದುಕೊಂಡು "ಇನ್ನು ಸೀತಾದೇವಿಯನ್ನು ಕಾಣುವ ಪರಿಯಂತರ ಸಾವಧಾನವಾಗಿ ಅರಸಿ ನೋಡುವೆನು; ಸಂಪಾತಿಯೆಂಬ ಗೃಧ್ರರಾಜನು ಇಲ್ಲಿ ಸೀತಾದೇವಿಯು ಇದ್ದಾಳೆ ಎಂದು ಹೇಳಿದ್ದರಿಂದ ಪಟ್ಟಣದಲ್ಲಿ ಮಾತ್ರವೇ ಸೀತಾದೇವಿಯನ್ನರಸಿ ಕಾಣದೆ ಶ್ರೀರಾಮನ ಸಮೀಪಕ್ಕೆ ಹೋದರೆ ಆತನೂ ಸುಗ್ರೀವನು ಮೊದಲಾದ ಕಪಿನಾಯಕರೂ ಉಳಿಯುವದಕ್ಕಿಲ್ಲ, ಆದ್ದರಿಂದ ನಾನು ಆಹಾರನಿಯಮ ಮಾಡಿಕೊಂಡು ಜಿತೇಂದ್ರಿಯನಾಗಿ ಇಲ್ಲೇ ಇರುವೆನು, ಹಾಗಲ್ಲದಿದ್ದರೆ ನನ್ನ ಅಪರಾಧದಿಂದ ಸಮಸ್ತ ಕಪಿಗಳಿಗೂ ಹಾನಿ ಬರುವದು, ಇನ್ನು ಕೆಲವು ಸ್ಥಳಗಳಲ್ಲಿ ಆ ದೇವಿಯನ್ನು ಹುಡುಕಬೇಕು; ಅನೇಕ ಪುಷ್ಪವೃಕ್ಷಗಳಿಂದ ಇಟ್ಟಣಿಸಿರುವ ಅಶೋಕವನವಿದೆ, ಆ ವನವನ್ನು ಇನ್ನೂ ನೋಡಲಿಲ್ಲ'' ಎಂದು ಯೋಚಿಸಿ ಅಷ್ಟವಸುಗಳಿಗೂ ಏಕಾದಶರುದ್ರರಿಗೂ ಅಶ್ವಿನೀದೇವತೆಗಳಿಗೂ ಮರುತ್ತುಗಳಿಗೂ ತನ್ನ ತಾಯಿತಂದೆಗಳಿಗೂ ನಮಸ್ಕಾರವನ್ನು ಮಾಡಿ ಸಮಸ್ತ ರಾಕ್ಷಸರನ್ನೂ ಜಯಿಸಿ ಇಕ್ಷ್ವಾಕುವಂಶವನ್ನು ವೃದ್ಧಿಹೊಂದಿಸುವ ಸೀತಾದೇವಿಯನ್ನು ತಪಸ್ವಿಗೆ ತಪಃಸಿದ್ಧಿಯಂತೆ ಶ್ರೀರಾಮನಿಗೆ ಕೊಡಬೇಕೆಂದು ಮಹಾದೇವನಿಗೆ ನಮಸ್ಕರಿಸಿ ಸೀತಾ ಲಕ್ಷ್ಮಣಸಮೇತನಾದ ಶ್ರೀರಾಮನಿಗೂ ಇಂದ್ರಾದಿ ದಿಕ್ಪಾಲಕರಿಗೂ ಚಂದ್ರಸೂರ್ಯರಿಗೂ ಸುಗ್ರೀವನಿಗೂ ನಮಸ್ಕಾರಗಳನ್ನು ಮಾಡಿ ಸಮಸ್ತ ದಿಕ್ಕುಗಳನ್ನೂ ನೋಡುತ ಅಶೋಕವನಕ್ಕೆ ಹೋಗುವದಕ್ಕೆ ನಿಶ್ಚಯಿಸಿದನು.

ಆ ಬಳಿಕ ಹನುಮಂತನು ತನ್ನ ಮನಸ್ಸಿನಲ್ಲಿ "ರಮಣೀಯವಾದ ಅಶೋಕವನವನ್ನು ಬಲವಂತರಾದ ರಾಕ್ಷಸರು ಕಾದುಕೊಂಡಿರುವರು; ಈ ಅರ್ಥದಲ್ಲಿ ಸಂಶಯವಿಲ್ಲ; ನಾನು ಶ್ರೀರಾಮನ ಕಾರ್ಯಸಾಧನೆಯಾಗಬೇಕೆಂದು ರಾವಣನ ಭಯದಿಂದ ಶರೀರವನ್ನು ಸಂಕೋಚಮಾಡಿಕೊಂಡು ಸಂಚರಿಸುವಾಗ ನನಗೆ ಷಡ್ಗುಣೈಶ್ವರ್ಯಸಂಪನ್ನ

ನಾದ ಬ್ರಹ್ಮನು ಇಂದ್ರಾದಿ ದೇವತೆಗಳು ಸಮಸ್ತ ಋಷಿಗಳು ಮೊದಲಾದವರೆಲ್ಲರು ಕಾರ್ಯಸಿದ್ಧಿಯನ್ನು ಮಾಡಿ ಕೊಡುವರಲ್ಲದೆ ಮತ್ತೊಂದಲ್ಲ, ಸಮಸ್ತ ಪ್ರಾಣಿಗಳೂ ಈ ಕಾರ್ಯಕ್ಕೆ ಸಹಾಯವನ್ನು ಮಾಡುವರಲ್ಲದೆ ಪ್ರತಿಕೂಲವಮಾಡರು ತಾವರೇ ಯಸಳಿನಂತೆ ಕಣ್ಣುಗಳುಳ್ಳ ಸೀತಾದೇವಿಯ ಮುಖವನ್ನು ಎಂದಿಗೆ ಕಂಡೇನು! ಕಟಕಟಾ! ಕ್ಷುದ್ರನಾದ ರಾವಣನು ಶೀತಾದೇವಿಯನ್ನು ಬಲಾತ್ಕಾರಧಿಂದ ಆಪಹರಿಸಿಕ್ಕೊಂಡು ಹೋದನಲ್ಲಾ! ಆ ದೇವಿಯನ್ನು ನಾನೆಂದಿಗೆ ಕಂಡೇನು!" ಎಂದು ಅತ್ಯಂತ ಚಿಂತಾಕ್ರಾಂತನಾಗಿದ್ದನು.

---

## ೧೪ನೇ ಅಧ್ಯಾಯ.

## ಅಶೋಕವನವರ್ಣನೆ.

ಆ ಬಳಿಕ ಹನುಮಂತನು ಅಶೋಕವನಕ್ಕೆ ಹೋಗಿ ಸೀತಾದೇವಿಯನ್ನು ನೋಡಬೇಕೆಂದು ಆ ವನದ ಪ್ರಾಕಾರದ ಮೇಲೆ ಕುಳಿತುಕ್ಕೊಂಡು ಧೈರ್ಯವನ್ನು ತಾಳಿ ವಸಂತಕಾಲ ಪ್ರಾರಂಭದಲ್ಲಿ ಪುಷ್ಪಿತವಾದ ಅಗ್ರಭಾಗಗಳುಳ್ಳ ಅಶೋಕ ಕಂಚಿವಾಳ ಪಾದರಿ ಕಡಬ ಸುರಹೊನ್ನೆ ಗೋರಂಟಿ ಮೊದಲಾದ ವೃಕ್ಷಗಳೂ ಮೊಲ್ಲೆ ಮಲ್ಲಿಗೆ ಇರುವಂತಿಗೆ ಅದರುಗಂಚಿ ಸುರಗಿ ಜಾಜಿ ಮೊದಲಾದ ಲತಾವಿಶೇಷಗಳನ್ನೂ ನೋಡಿ ಆ ವನದಲ್ಲಿ ಸುವರ್ಣ ಕಾಂತಿಯಂತೆ ಹೊಳೆಯುತಿದ್ದ ಪುಷ್ಪಗಳುಳ್ಳ ವೃಕ್ಷಗಳನ್ನೂ ಬೆಳ್ಳಿಯಂತೆ ಚಕಚಕಾಯಮಾನವಾಗಿ ಹೊಳೆಯುತಿದ್ದ ಪುಷ್ಪಗಳುಳ್ಳ ವೃಕ್ಷಗಳನ್ನೂ ಮದಸೊಕ್ಕಿ ಸ್ವರಗೈಯುತಿದ್ದ ಪಕ್ಷಿಗಳನ್ನೂ ಆನಂದದಿಂದ ಸಂಚರಿಸುತಿದ್ದ ಮೃಗಜಾತಿಗಳನ್ನೂ ನೋಡಿ ಎಸೆಯಲ್ಪಟ್ಟ ಅಂಬಿನಂತೆ ಅತಿವೇಗದಿಂದ ನೆಗೆದುಹೋದನು ಆ ವನವು ಪರಿಮಳವುಳ್ಳ ಪುಷ್ಪ ತೊಡಂಬೆಗಳಿಂದಲೂ ಸ್ವಾದುವಾದ ಫಲಗಳಿಂದಲೂ ಇಟ್ಟಣಿಸಿ ವೃಕ್ಷಗಳಿಂದ ರಮಣೀಯವಾಗಿ ಕಿವಿಗಿಂಪಾಗಿ ಸ್ವರಗೈಯುತಿದ್ದ ಕೋಗಿಲೆಗಳಿಂದಲೂ ದುಂಬಿ ಹಿಂಡುಗಳಿಂದಲೂ ರಮಣೀಯವಾಗಿತ್ತು! ಆ ವನಮಧ್ಯದಲ್ಲಿದ್ದ ವೃಕ್ಷಗಳಲ್ಲಿ ಬಂದು ಕೊಂಬಿಂದಾ ಮತ್ತೊಂದು ಕೊಂಬೆಗೆ ನೆಗೆದು ಹೋಗಲು ಆ ಕೊಂಬುಗಳು ಚಲಿಸುವದರಿಂದ ಅವುಗಳಲ್ಲಿ ಕುಳಿತಿದ್ದ ಪಕ್ಷಿಗಳು ಗರಿಗಳನ್ನು ಕೊಡಹಿಕೊಂಡು ಏಳುತ್ತಿರುವದರಿಂದಲೂ ಆ ಕೊಂಬುಗಳಲ್ಲಿದ್ದ ಪುಷ್ಪಗಳು ಆತನಮೇಲೆ ಉದುರುವದರಿಂದಲೂ ಆ ವನದೇವತೆಯು ಹನುಮಂತನ ಬಲವನ್ನು ಕಂಡು ಸಂತೋಷಪಟ್ಟು ಆನಂದಾತಿಶಯದಿಂದ ಆತನಮೇಲೆ ಪುಷ್ಪಮಳೆಯನ್ನು ಕರೆದು ಚರಿಸುತಿದ್ದ ಪಕ್ಷಿಗಳ ಗರಿಗಳೆಂಬ ಕೈಚಪ್ಪಳೆಯನ್ನಿಕುತ ಕೊಂಬುಗಳು ಕದಲುವ ನೆವದಿಂದ ನರ್ತನಮಾಡುತಿದ್ದಳೋ ಎಂಬಂತೆ ಬಪ್ಪುತಿರಲು ಪುಷ್ಪಗಳಿಂದ ಪರಿಪೂರ್ಣವಾದ ಶರೀರವುಳ್ಳ ಹನುಮಂತನು ಪುಷ್ಪಮಯವಾದ ಪರ್ವತದಂತೆ ಒಪ್ಪುತಿದ್ದನು! ನಾನಾ ದಿಕ್ಕುಗಳಲ್ಲಿ ಕೊಂಬಿನಿಂದ ಕೊಂಬೆಗೆ ಓಡಾಡುತ ತನ್ನನ್ನು ಕಂಡಂಥಾ ಪ್ರಾಣಿಗಳಿಗೆ ಸಾಕ್ಷಾತ್ ವಸಂತನೋ ಎಂಬಂತೆ ತೋರುತ ಪುಷ್ಪಮಯವಾಗಿ ಒಪ್ಪುತಿದ್ದ ಹನುಮಂತನಿಂದ ಅಶೋಕವನದ ಭೂಮಿಯು ಸರ್ವಾಲಂಕಾರ ಭೂಷಿತೆಯಾದ ಸ್ತ್ರೀಯಂತೆ ಒಪ್ಪುತಿತ್ತು! ಅತಿವೇಗವುಳ್ಳ ಹನುಮಂತನ ವೇಗದಿಂದ ಚಲಿಸಲ್ಪಟ್ಟ ವೃಕ್ಷಗಳು ಮಳೆಸುರಿದಂತೆ ಸಮಸ್ತ ಪುಷ್ಪಗಳನ್ನೂ ಉದುರಿಸುತಿದ್ದವು! ಆಗ ಆತನ ಸಂಚಾರ ವೇಗದಿಂದ ಉದುರಿದ ಪುಷ್ಪ ಫಲ ತಳಿರುಗಳುಳ್ಳ ವೃಕ್ಷಗಳು ಭೂಷಣ ವಸ್ತ್ರಾಭರಣಗಳನ್ನು ತೆಗೆದುಕೊಂಡು ಹೊರಡಿಸಲ್ಪಟ್ಟ ಸೇವಕ ಜನರಂತೆ ಒಪ್ಪುತಿದ್ದವು! ಸ್ವರಗೈವ ಪಕ್ಷಿಸಮೂಹವು ಪುಷ್ಪಫಲ ತಳಿರು ಕೊಂಬೆಗಳಿಲ್ಲದಿದ್ದ ಮರಗಳಲ್ಲಿ ವಾಯುವೊಡನೆ ಶೆಣಿಸಿ ವಾಯುವಿಗೆ ಇದಿರಾಗಿ ಸಮರಸನ್ನಾಹವಾಗಿ ನಿಂತವೋ ಎಂಬಂತೆ ಒಪ್ಪುತಿದ್ದವು! ಆತನ ಬಾಲ ಕೈಕಾಲುಗಳ ವೇಗದಿಂದ ಕೋಡಿಸಲ್ಪಟ್ಟ ಆ ವನವು ಕಾಮುಕ ಪುರುಷನಿಂದ ಮುಂಗುರುಳಿಡಿದು ಕಪೋಲವನ್ನೂ ಅಧರಗಳನ್ನೂ ಚುಂಬಿಸಿ ದಂತಾಕ್ಷತ ನಖಕ್ಷತಗಳನ್ನು ಮಾಡಿ ವಿರಹವೇದನೆ ಮಾಡಲ್ಪಟ್ಟ ಸ್ತ್ರೀಯಂತೆ ಒಪ್ಪುತಿತ್ತು! ಮತ್ತು ತಿರುಗಾಡಲ್ಪಟ್ಟ ಲತೆಗಳೊಡನೆ ಕೂಡಿ ಘಾಳಿಯಿಂದ ಕದಲಿಸಲ್ಪಟ್ಟ ಮೇಘಮಂಡಲದಂತೆಯೂ ವಿಂಧ್ಯಪರ್ವತದಂತೆಯೂ ಒಪ್ಪುತಿತ್ತು! ಆ ವನಮಧ್ಯದಲ್ಲಿ ರತ್ನಮಯವಾದ ಭೂಮಿಗಳೂ ಸುವರ್ಣಮಯವಾದ ಭೂಮಿಗಳೂ ಬೆಳ್ಳಿಮಯವಾದ ಭೂಮಿ

ಗಳೂ ಕಾಣಲ್ಪಟ್ಟವು, ಅಮೃತಕ್ಕೆ ಸಮಾನವಾದ ಉದಕಗಳಿಂದ ಪರಿಪೂರ್ಣವಾಗಿ ಅನರ್ಘ್ಯವಾದ ರತ್ನಗಳಿಂದ ನಿರ್ಮಿತವಾದ ಸೋಪಾನಗಳುಳ್ಳ ಕೊಳಗಳೂ ಮುತ್ತಿನಮಣಿ ಹವಳಮಣಿಮಯವಾದ ಮಳಲೊಟ್ಟುಗಳಿಂದಲೂ ಸ್ಫಟಿಕ ಶಿಲೆಗಳಿಂದಲೂ ಕಟ್ಟಲ್ಪಟ್ಟ ತೀರಗಳುಳ್ಳವಾಗಿ ನಾನಾವಿಚಿತ್ರವಾದ ಪುಷ್ಪಗಳಿಂದ ಪರಿಪೂರ್ಣವಾದ ಮರಗಳಿಂದ ಸುತ್ತುವರಿಯಲ್ಪಟ್ಟವಾಗಿ ವಿಕಸಿತವಾದ ಕಮಲ ಕನ್ನೈದಿಲೆ ಪುಷ್ಪಗಳಿಂದಲೂ ರಾಜಹಂಸಪಕ್ಷಿ ಮೊದಲಾದ ಜಲಚರ ಪಕ್ಷಿಗಳಿಂದಲೂ ಹವಳದ ತಡಿಗಳಿಂದಲೂ ಅತಿ ರಮಣೀಯವಾದ ತೀರಗಳಿಂದಲೂ ಕೂಡಿ ಅನೇಕ ಪುಷ್ಪಲತೆಗಳುಳ್ಳವಾಗಿ ಮಧ್ಯದಲ್ಲಿ ಕಣಿಗಿಲ ಪುಷ್ಪಗಳ ಗಿಡಗಳುಳ್ಳವಾಗಿ ಅತ್ಯಂತ ಸ್ವಾದೋದಕವುಳ್ಳ ನದಿಗಳೂ ಕಾಣಲ್ಪಟ್ಟವು! ಮತ್ತು ಆ ವನಮಧ್ಯದಲ್ಲಿ ಇಂದ್ರನೀಲಮಣಿಮಯವಾಗಿ ಕಾರ್ಮುಗಿಲಂತೆ ರಮಣೀಯವಾಗಿ ಉನ್ನತವಾಗಿ ವಿಚಿತ್ರವಾಗಿ ಮೂರು ಶಿಖರಗಳುಳ್ಳದ್ದಾಗಿ ಸ್ಫಟಿಕ ಶಿಲಾಗೃಹಗಳಿಂದಲೂ ಮಂಟಪಗಳಿಂದಲೂ ಪರಿಮಳಿತವಾದ ಪುಷ್ಪವೃಕ್ಷಗಳಿಂದಲೂ ಮನೋಹರವಾದ ಒಂದು ಕ್ರೀಡಾಪರ್ವತವು ಕಾಣಲ್ಪಟ್ಟಿತು, ಅದು ತನ್ನ ಮುಂಗಡೆಯಲ್ಲಿ ಹರಿಯುವ ನದಿಯನ್ನು ಕೂಡಿ ತನ್ನ ಪ್ರಾಣಕಾಂತೆಯಾದ ಸ್ತ್ರೀಯನ್ನು ತೊಡೆಯಮೇಲೆ ಮಲಗಿಸಿಕೊಂಡಿರುವ ಕಾಮುಕನಂತೆ ಒಪ್ಪುತಿತ್ತು! ತನ್ನ ತೀರಗಳಲ್ಲಿದ್ದ ಪುಷ್ಪವೃಕ್ಷಗಳ ಬೀಳುಗೊಂಬೆಗಳಿಂದ ಕುತುಕಲ್ಪಟ್ಟ ಉದಕಪ್ರವಾಹವುಳ್ಳ ಆ ನದಿಯು ತನ್ನ ಪ್ರಾಣಕಾಂತನೊಡನೆ ಪ್ರಣಯಕಲಹದಿಂದ ಮುನಿಸಿಕೊಂಡು ಹೋಗುತ್ತಿರುವ ಸಮಯದಲ್ಲಿ ಸಖಿಯರಿಂದ ತಡೆಯಲ್ಪಟ್ಟ ಸ್ತ್ರೀಯು ಮರ್ಯಾದೆಯಲ್ಲಿ ಒಪ್ಪುತಿತ್ತು! ಹನುಮಂತನು ಅವನ್ನು ನೋಡಿ ಮುಂದೆ ನಾನಾವಿಚಿತ್ರವಾದ ಉಪ್ಪರಿಗೆಗಳನ್ನೂ ಸುವರ್ಣಮಯವಾದ ಜಗಲಿಗಳನ್ನೂ ಜ್ಯೋತಿರ್ಲತೆಗಳನ್ನೂ ವಜ್ರಗಳುಳ್ಳ ಭೂಪ್ರದೇಶಗಳನ್ನೂ ಪುಟವಿಕ್ಕಿದ ಚಿನ್ನದಂತೆ ಕಾಂತಿಯುಳ್ಳ ವೃಕ್ಷಗಳನ್ನೂ ಕಂಡು ಆ ವೃಕ್ಷಗಳ ಕಾಂತಿಯಿಂದ ತನ್ನ ಶರೀರವು ಸುವರ್ಣಮಯವಾಗಿ ಮಹಾಮೇರುಪರ್ವತದಂತೆ ಪ್ರಕಾಶಮಾನವಾಗಿದ್ದನು! ಆ ವೃಕ್ಷಗಳ ಅಗ್ರಭಾಗದಲ್ಲಿ ಕಟ್ಟಿದ ಸುವರ್ಣದ ಕಿರುಘಂಟೆಗಳು ವಾಯುವಿನಿಂದ ಚಲಿಸಿ ಧ್ವನಿಗೈಯುತಿದ್ದವು! ಆ ಬಳಿಕ ಹನುಮಂತನು ಪಲ್ಲವಿತವಾಗಿ ಕೋರಕಿತವಾಗಿ ಫಲಿತವಾಗಿ ಅತ್ಯುನ್ನತವಾಗಿ ಅತಿಮನೋಹರವಾದ ಒಂದು ಶಿಂಶುಪಾವೃಕ್ಷವನ್ನು ಕಂಡು ತನ್ನ ಮನಸ್ಸಿನಲ್ಲಿ "ಈ ಮರವನ್ನು ಹತ್ತಿ ನಾನಾದಿಕ್ಕುಗಳನ್ನೂ ನೋಡಿದರೆ ಶ್ರೀರಾಮನ ವಿರಹಾಗ್ನಿಜ್ವಾಲೆಯನ್ನು ತಡೆಯಲಾರದೆ ತಿರುಗಾಡುತಿರುವ ಸೀತಾದೇವಿಯು ಕಾಣಿಸಿಕೊಂಡಾಳು, ನಾನಾವಿಧವಾಗಿ ಅತಿವಿಚಿತ್ರವಾದ ಪುಷ್ಪವೃಕ್ಷಗಳಿಂದಲೂ ನಾನಾವಿಚಿತ್ರವಾದ ಪುಷ್ಪಲತೆಗಳಿಂದಲೂ ರಮಣೀಯವಾದ ಈ ವನವು ರಾವಣನ ಅಶೋಕವನವಾಗಿರಬಹುದು, ವನಸಂಚಾರದಲ್ಲಿ ಅತ್ಯಂತ ಪ್ರಿಯವುಳ್ಳ ಜಗದೇಕವೀರನಾದ ಶ್ರೀರಾಮನ ಪಟ್ಟದ ರಾಣಿಯಾದ ಸೀತಾದೇವಿಯು ಈ ವನದಲ್ಲಿ ಇರಬಹುದು, ಈ ಅರ್ಥದಲ್ಲಿ ಸಂಶಯವಿಲ್ಲ, ಹಾಗಲ್ಲದೆ ಮತ್ತೊಂದು ಸ್ಥಳದಲ್ಲಿದ್ದರೂ ಹೊತ್ತುಕಳೆಯುವದಕ್ಕಾಗಿ ಈ ವನವನ್ನು ನೋಡುವದಕ್ಕೆ ಬರಬಹುದು, ಪ್ರಾತಃಕಾಲದಲ್ಲಿ ಪುಣ್ಯಮಜ್ಜನ ಸ್ನಾನ ದೇವತಾರ್ಚನೆ ನಿಮಿತ್ತದಿಂದಲಾದರೂ ಬರಬಹುದು; ಈ ವನವು ಆ ದೇವಿಯ ತನುಕಾಂತಿಗೆ ಸಮಾನವಾದ ಕಾಂತಿಯುಳ್ಳದ್ದಾಗಿದೆ; ಆಕೆಯು ಜೀವದಿಂದಿರುವ ಪಕ್ಷದಲ್ಲಿ ಈ ವನಕ್ಕೆ ಬಾರದೇ ಇರಳು!" ಎಂದು ನಿಶ್ಚಯಿಸಿ ಆ ಶಿಂಶುಪಾವೃಕ್ಷವನ್ನೇರಿ ಪುಷ್ಪಿತವಾದ ಲತೆಗಳುಳ್ಳ ಕೊಂಬುಗಳ ಮರೆಯಲ್ಲಿ ಕುಳಿತುಕೊಂಡು ಸೀತಾದೇವಿಯನ್ನು ನಾನಾದಿಕ್ಕುಗಳಲ್ಲಿಯೂ ಇಣಿಕಿ ನೋಡುತಿದ್ದನು.

## ೧೫ನೇ ಅಧ್ಯಾಯ.

### ಹನುಮಂತನು ಸೀತಾದೇವಿಯನ್ನು ಕಂಡದ್ದು.

ಈ ಮರ್ಯಾದೆಯಲ್ಲಿ ಹನುಮಂತನು ಅಶೋಕವನದಲ್ಲಿ ಶಿಂಶುಪಾವೃಕ್ಷದಮೇಲೆ ಕುಳಿತುಕೊಂಡು ಎಲ್ಲಿನೋಡಿದರೂ ಕಲ್ಪಲತೆಗಳಿಂದ ಅತ್ಯಂತ ರಮಣೀಯವಾಗಿ ದಿವ್ಯಪರಿಮಳವುಳ್ಳದ್ದಾಗಿ ದೇವೇಂದ್ರನ ನಂದನವನದಂತೆಯೂ ಕುಬೇರನ ಉದ್ಯಾನವನವಾದ ಚೈತ್ರರಥದಂತೆಯೂ ಒಪ್ಪುತ ಹೊಂದಾವರೆ ಪುಷ್ಪಗಳಿಂದಲೂ ಸುವರ್ಣಮ

ಯುವಾದ ನೈದಿಲಪುಷ್ಪಗಳಿಂದಲೂ ಪರಿಪೂರ್ಣವಾಗ ವಕ್ಕರಣೆ ಭಾವಿಗಳುಳ್ಳದ್ದಾಗಿ ಅನೇಕ ಪರಿಮಳಯುಕ್ತವಾದ ಮದ್ಯ ತುಂಬಿದ ನೆಲಮಾಳಿಗೆಗಳುಳ್ಳಂಥಾದ್ದಾಗಿ ಎಲ್ಲಿ ನೋಡಿದರೂ ಘನಸಾರ ಗಂಧೋದಕ ಚಯಗಳುಳ್ಳಂಥಾದ್ದಾಗಿ ನಾನಾಋತುಗಳಲ್ಲಿಯೂ ಪುಷ್ಪಿಸುವ ವೃಕ್ಷಗಳಿಂದಲೂ ರಸವತ್ತಾದ ಫಲಗಳುಳ್ಳವಾಗಿ ಸೂರ್ಯಪ್ರಭೆಯಂತೆ ಪ್ರಕಾಶಮಾನವಾದ ಪುಷ್ಪಗಳುಳ್ಳ ಅಶೋಕ ವೃಕ್ಷಗಳಿಂದಲೂ ಮನೋಹರವಾಗಿ ಗಾನಮಾಡುವ ಕೋಗಿಲೆಗಳಿಂದ ರಮಣೀಯವಾಗಿ ವಿಚಿತ್ರವಾದ ಪುಷ್ಪಲತೆಗಳ ಭಾರಾತಿಶಯದಿಂದ ಬೊಗ್ಗಿ ನೆಲವನ್ನು ಮುಟ್ಟುತಿದ್ದ ಕೊಂಬುಗಳುಳ್ಳ ಅಶೋಕ ವೃಕ್ಷಗಳಿಂದಲೂ ಬಿಟ್ಟದಾವರೆ ಮರಗಳಿಂದಲೂ ಪುಷ್ಪಿತವಾದ ಮುಳ್ಳುಮುತ್ತುಗದ ಮರಗಳಿಂದಲೂ ಸುರಹೊನ್ನೇ ಮರಗಳಿಂಧಲೂ ಕರ್ಪೂರವಲ್ಲಿಗಳಿಂದಲೂ ಕಂಚುವಾಳದ ಮರಗಳಿಂದಲೂ ರಮಣೀಯವಾಗಿ ಸುವರ್ಣಕಾಂತಿಯಂತೆ ಕಾಂತಿಯುಳ್ಳಂಥಾವಾಗಿಯೂ ಪ್ರಜ್ವಲಿಸುತಿದ್ದ ಯಜ್ಞಪುರುಷನ ಕಾಂತಿಗೆ ಸಮಾನವಾದ ಕಾಂತಿಯುಳ್ಳಂಥಾವಾಗಿಯೂ ಮಶಿಯಂತೆ ಅತ್ಯಂತ ನೀಲವರ್ಣವುಳ್ಳಂಥಾವಾಗಿಯೂ ಇದ್ದ ವೃಕ್ಷಗಳಿಂದ ರಮಣೀಯವಾಗಿ ನಕ್ಷತ್ರಪರಿಪೂರ್ಣವಾದ ಆಕಾಶದಂತೆ ಒಪ್ಪುತ ಇಂದ್ರ ಯಮ ವರುಣ ಕುಬೇರರ ನಾಲ್ಕು ಪಟ್ಟಣಗಳ ಮಧ್ಯದಲ್ಲಿ ಐದನೆ ಪಟ್ಟಣದಂತೆ ಒಪ್ಪುತ ಸಮಸ್ತ ಋತುಗಳಲ್ಲಿಯೂ ಪರಿಪೂರ್ಣವಾಗಿರುವ ವೃಕ್ಷಗಳ ಪುಷ್ಪಗಳನ್ನಾಸ್ವಾದಿಸಿ ಸ್ವರಗೈಯುತಿದ್ದ ನಾನಾ ಪಕ್ಷಿಗಳ ಧ್ವನಿಯಿಂದಲೂ ಪುಷ್ಪ ಗಂಧಗಳಿಂದಲೂ ರಮಣೀಯವಾಗಿ ಅನೇಕ ಚಂದನವೃಕ್ಷಗಳ ಪರಿಮಳಗಳಿಂದ ಘಮಘಮಿಸುತ ಎರಡನೆ ಮಂದರಪರ್ವತದಂತೆ ಒಪ್ಪುತಿದ್ದ ಆ ವನದ ಚೌಕ ಮಧ್ಯದಲ್ಲಿ ಒಂದು ಉಪ್ಪರಿಗೆಯನ್ನು ಕಂಡು ಸಾವಿರ ಕಂಭಗಳಿಂದ ನಿರ್ಮಿಸಲ್ಪಟ್ಟ ಕೈಲಾಸ ಪರ್ವತದಂತೆ ಅತಿಬಿಳುಪಾಗಿ ಹವಳದ ಮಣಿಗಳಿಂದ ನಿರ್ಮಿಸಿದ ಸೋಪಾನವುಳ್ಳದ್ದಾಗಿ ಸುವರ್ಣಮಯವಾದ ಜಗಲಿಗಳ ತಳವಿನಿಂದ ನೋಡುವದಕ್ಕೆ ಶಕ್ಯವಲ್ಲದೆ ಸಾಕ್ಷಾತ್ ಮಹಾಲಕ್ಷ್ಮಿಯ ನಿಲಯದಂತೆ ಕಂಗೊಳಿಸುತ ಅತ್ಯಂತ ನಿರ್ಮಲವಾಗಿ ಆಕಾಶವನ್ನು ಕುಡುಕುತಿದ್ದ ಮೇಲುಪ್ಪರಿಗೆವುಳ್ಳದ್ದಾಗಿ ಅತ್ಯಂತ ಉನ್ನತವಾದ ಕೋಟೆಯುಳ್ಳಂಥಾ ಆ ಉಪ್ಪರಿಗೆಯನ್ನೂ ಸೀತಾದೇವಿಯನ್ನೂ ಕಂಡನು! ಆ ದೇವಿಯು ಉಪವಾಸಗಳಿಂದ ಕೃಶವಾಗಿ ದೈನ್ಯದಿಂದ ಅಡಿಗಡಿಗೆ ನಿಟ್ಟುಸುರುಬಿಡುತ ಶುಕ್ಲಪಕ್ಷದಲ್ಲಿ ದೀವಿಗೆಯಲ್ಲಿ ಕಾಣಿಸುವ ಚಂದ್ರಕಲೆಯಂತೆಯೂ ಹೊಗೆಯಿಂದ ಸುತ್ತುವರಿಯಲ್ಪಟ್ಟ ಅಗ್ನಿಜ್ವಾಲೆಯಂತೆಯೂ ಅಲ್ಪವಾದ ತನುಕಾಂತಿಯುಳ್ಳದ್ದಾಗಿ ಮಾಸಿದ ಒಂಟಿ ಹೊಂಬಟ್ಟೆಯ ಸೀರೆಯನ್ನುಟ್ಟುಕೊಂಡು ಶರೀರವು ಕೆಂಧೂಳಿ ಮುಸಗಿ ಅಲಂಕಾರವಿಲ್ಲದೆ ತಾವರೆ ಕಮಲ ಹೊರತಾದ ಕೊಳದಂತೆ ದುಃಖಾತಿಶಯದಿಂದ ಮುಖಕಾಂತಿ ಗುಂದಿ ತಪೋವೇಷವನ್ನು ಧರಿಸಿಕೊಂಡು ಮಂಗಳನಿಂದ ವತ್ತರಿಸಲ್ಪಟ್ಟ ರೋಹಿಣೀ ನಕ್ಷತ್ರದಂತೆ ತನುಕಾಂತಿಯುಳ್ಳವಳಾಗಿ ಕಣ್ಣೀರು ಬಿಡುತ ತನ್ನ ಪ್ರಾಣಕಾಂತನಾದ ಶ್ರೀರಾಮನ ದರ್ಶನವಿಲ್ಲದೆ ಶೋಕಾತಿಶಯದಿಂದ ಆತನನ್ನು ಧ್ಯಾನಮಾಡುತ ಮೃಗಸಮೂಹವನ್ನು ಬಿಟ್ಟು ತೊಲಗಿ ಶ್ವಾನಗಳ ಸಮೂಹದಿಂದ ಸುತ್ತಲ್ಪಟ್ಟ ಹೆಣ್ಣುಹುಲ್ಲೆಯಂತೆ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಶೋಕಮಾಡುತ ಶರತ್ಕಾಲದಲ್ಲಿ ನೀಲವರ್ಣವಾದ ವನ ಸಮೂಹದಿಂದ ಒಪ್ಪುತಿದ್ದ ಭೂದೇವತೆಯನ್ನು ಒಪ್ಪುತ ಕೃಷ್ಣಸರ್ಪದ ಮರ್ಯಾದೆಯಲ್ಲಿ ಅತ್ಯಂತ ನೀಟವಾದ ಒಂಟಿ ಜಡೆಯುಳ್ಳವಳಾಗಿದ್ದಳು, ಒಂದು ದಿವಸವಾದರೂ ದುಃಖವಿಲ್ಲದಿದ್ದವಳಾದರೂ ದುಷ್ಟನಾದ ರಾವಣನು ಹಿಡಿತಂದದ್ದರಿಂದ ಶ್ರೀರಾಮನ ವಿರಹ ದುಃಖದಿಂದ ಕೃಶಾಂಗಿಯಾಗಿದ್ದಳು, ಪೂರ್ಣಚಂದ್ರನಂತೆ ಮುಖವುಳ್ಳವಳಾಗಿ ಮನೋಹರವಾದ ಸ್ತನಮಂಡಲವುಳ್ಳವಳಾಗಿ ತನ್ನ ತನುಕಾಂತಿಯಿಂದ ಸಮಸ್ತ ದಿಕ್ಕುಗಳನ್ನೂ ಬೆಳಗಿಸುತ ನೀಲವರ್ಣವಾದ ಕುರುಳು ಕೂದಲುಳ್ಳವಳಾಗಿ ತೊಂಡೇಹಣ್ಣನ್ನು ಹೋಲುವ ತುಟಿಯುಳ್ಳವಳಾಗಿ ತಾವರೇ ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳುಳ್ಳಂಥಾವಳಾಗಿ ಮನ್ಮಥನ ಸ್ತ್ರೀಯಾದ ರತಿದೇವಿಯಂತೆ ತನುಸೊಬಗುಳ್ಳವಳಾಗಿ ಸಮಸ್ತ ಜಗತ್ತನ್ನು ಬೆಳಗಿಸುವ ಪೂರ್ಣಚಂದ್ರನ ಪ್ರಭೆಯೋಪಾದಿಯಲ್ಲಿ ಮೆರೆಯುತ ತಪಸ್ಸು ಮಾಡಬೇಕೆಂದು ಸ್ವರ್ಗದಿಂದ ಭೂಲೋಕಕ್ಕೆ ಬಂದು ಆಹಾರನಿಯಮವನ್ನು ಮಾಡಿಕೊಂಡು ತಪಸ್ಸು ಮಾಡುತಿದ್ದ ದೇವಸ್ತ್ರೀಯಂತೆ ಬೆಳಗುತ ಮಹಾಶೇಷನ ಸ್ತ್ರೀಯಾದ ನಾಗಾಂಗನೆಯನ್ನು ಒಪ್ಪುತಿದ್ದ ಆ ದೇವಿಯು ಸಂದಿಗ್ಧವಾದ ಧರ್ಮಶಾಸ್ತ್ರವನ್ನು ಹೇಳುವಂತೆ ಚಿಂತಾಕ್ರಾಂತೆಯಾಗಿ ಪರರ ನಿಷ್ಠೂರ ನುಡಿಗಳಿಂದ ಮುಖಕಾಂತಿಗುಂದಿ ಮಾನವತಿ

ಯಾದ ಸ್ತ್ರೀಯಂತೆ ಚಿಂತೆಮಾಡುತ ವಿಪತ್ತು ಸಹಿತವಾದ ಸಂಪತ್ತಿನಂತೆಯೂ ಕಳಂಕದೊಡನೆ ಕೂಡಿದ ಸದ್ಬುದ್ಧಿಯಂತೆಯೂ ಅಪವಾದದೊಡನೆ ಕೂಡಿದ ಕೀರ್ತಿಯಂತೆಯೂ ಶ್ರೀರಾಮನನ್ನು ಕಾಣದೆ ಮನೋವ್ಯಥೆಯಿಂದ ಕೃಶಾಂಗಿಯಾಗಿದ್ದಳು ! ಕಣ್ಣೀರು ತುಂಬಿರುವದರಿಂದ ವಾರೆದೃಷ್ಟಿಯುಳ್ಳವಳಾಗಿ ನಾನಾ ದಿಕ್ಕುಗಳನ್ನು ನೋಡುತ ಅಲಂಕಾರಕ್ಕೆ ಯೋಗ್ಯವಾದವಳಾದರೂ ಭೂಷಣಾದ್ಯಲಂಕಾರಗಳನ್ನು ಬಿಟ್ಟು ಕಾರ್ಮುಗಿಲಿಂದ ಸುತ್ತುವರಿಯಲ್ಪಟ್ಟ ಚಂದ್ರಮಂಡಲದಂತೆ ಒಪ್ಪುತಿದ್ದಳು

ಈ ಪ್ರಕಾರದಿಂದ ಹನುಮಂತನು ಸೀತಾದೇವಿಯನ್ನು ಕಂಡು ತನ್ನ ಮನಸ್ಸಿನಲ್ಲಿ ಆಕೆಯು ಸೀತಾದೇವಿಯಹುದೋ ಅಲ್ಲವೋ ಎಂದು ಸಂಶಯಪಟ್ಟು ಕೆಲವುಹೊತ್ತು ಚಿಂತಿಸಿ ಅಲಂಕಾರವಿಹೀನಳಾಗಿದ್ದದ್ದರಿಂದ ಸೀತಾದೇವಿಯೆಂದು ಊಹಿಸಿ ಶ್ರೀರಾಮನು ತನ್ನನ್ನು ಕಳುಹಿಸಿದಾಗ ಹೇಳಿದ ಕುರುಹುಗಳನ್ನು ಜ್ಞಾಪಕಕ್ಕೆ ತಂದುಕೊಂಡು ಆತನು ಹೇಳಿದ ಆಭರಣಗಳು ಆಕೆಯು ಕುಳಿತಿದ್ದ ಮರದ ಕೊಂಬುಗಳಲ್ಲಿರುವದನ್ನು ನೋಡಿ ತನ್ನ ಮನಸ್ಸಿನಲ್ಲಿ “ ರತ್ನಖಚಿತವಾದ ಈ ಹಸ್ತಾಭರಣಗಳು ಶ್ರೀರಾಮನು ಹೇಳಿದ ಕುರುಹಿನ ಆಭರಣಗಳಾಗಿರಬೇಕು , ಈ ದೇವಿಯು ಮಾರ್ಗಮಧ್ಯದಲ್ಲಿ ಸಡಲಿಸಿ ಹಾಕಿದ ಆಭರಣಗಳಿಂದ ತಿಳಿಯಕೂಡದಾದರೂ ಈ ಕುರುಹಿನ ಆಭರಣಗಳಿಂದ ತಿಳಿಯಬೇಕು ; ಹೊಂಬಟ್ಟೆಯ ಮೇಲುಹೊದಿಕೆ ವಸ್ತ್ರದ ಶರಗನ್ನು ಹರಿದು ಕಟ್ಟಿಹಾಕಿದ ಚಂದ್ರಾಭರಣ ಒಡ್ಯಾಣ ಚಿಂತಾಕ ಮೊದಲಾದ ಆಭರಣಗಳ ಗಂಟು ಮರದಮೇಲಿದ್ದದ್ದನ್ನು ಅಲ್ಲಿ ಸಂಚರಿಸುತಿದ್ದ ಪಂಚವಾನರರು ಕಂಡು ತೆಗೆದುಕೊಂಡು ಶ್ರೀರಾಮನ ವಶಕ್ಕೆ ಒಪ್ಪಿಸಿದರು , ಈ ಹೊಂಬಟ್ಟೆಯ ವಸ್ತ್ರವು ಉಟ್ಟು ಬಹಳದಿವಸವಾದ್ದರಿಂದ ಮಾಸಿದೆ ; ಇಂಥಾ ಹೊಂಬಟ್ಟೆಯ ಸೀರೆಯು ಮತ್ತೊಂದು ಸ್ಥಳದಲ್ಲಿರಲಾರದು , ಪುಟವಿಕ್ಕಿದ ಚಿನ್ನದ ಕಾಂತಿಯಂತೆ ತನುಕಾಂತಿಯುಳ್ಳ ಸೀತಾದೇವಿಯು ಕಾಣಲ್ಪಡದೆ ದೂರದಲ್ಲಿದ್ದರೂ ಶ್ರೀರಾಮನ ಮನಸ್ಸಿನಲ್ಲೇ ಇಥಾಳೆ ; ಈಕೆಯ ನಿಮಿತ್ತವಾಗಿ ರಾಮಲಕ್ಷ್ಮಣರು ವ್ಯಥೆಪಡುತಿದ್ದಾರೆ ; ಶ್ರೀರಾಮನು ದುಃಖದಿಂದ ಸೀತಾದೇವಿ ಏನಾದಳೋಯೆಂದು ವ್ಯಥೆಪಡುವವಮಾತ್ರವಲ್ಲದೆ ಪರಮಪತಿವ್ರತೆಯಾಗಿ ಸಾಕ್ಷಾತ್ ಮಹಾಲಕ್ಷ್ಮಿಯ ಅಂಶಾವತಾರವಾದ ಈ ದೇವಿಗೆ ಎಂದಿಗೂ ಕೇಡಿಲ್ಲ , ಶ್ರೀರಾಮನ ರೂಪುಸೌಂದರ್ಯಾದಿಗಳಿಗೂ ವಿನಯಾದಿ ಗುಣಗಳಿಗೂ ಸಮಾನವಾದ ರೂಪುಲಾವಣ್ಯ ಸೌಂದರ್ಯ ದಾಕ್ಷಿಣ್ಯಾದಿ ಗುಣಸಂಪತ್ತುಳ್ಳ ಈ ದೇವಿಯ ಮನಸ್ಸು ಶ್ರೀರಾಮನಲ್ಲಿಯೂ ಆ ಮಹಾತ್ಮನ ಮನಸ್ಸು ಈಕೆಯಲ್ಲಿಯೂ ಏಕವಾಗಿವೆ , ಇವರು ಒಬ್ಬರನ್ನು ಬಿಟ್ಟು ಒಬ್ಬರು ಜೀವಿಸಲಾರರು ; ರಾಮನು ಈ ದೇವಿಯನ್ನು ವನಾಂತರದಲ್ಲಿ ಬಿಟ್ಟು ಹೋದವನಾದರೂ ಈಕೆಯ ವಿರಹಶೋಕಾತಿಶಯದಿಂದ ಶರೀರವಿಡಿದು ನಿಲ್ಲಲಾರನು , ಈ ದೇವಿಯು ಆತನನ್ನು ಕಾಣದಿದ್ದರೆ ಶರೀರವಿಡಿದು ನಿಲ್ಲಲಾರಳು ” ಎಂದು ನಿಶ್ಚಯಿಸಿ ಪರಮಪುರುಷನಾದ ಶ್ರೀರಾಮನ ಗುಣಕಥನಗಳನ್ನೂ ಸೀತಾದೇವಿಯ ಗುಣಕಥನಗಳನ್ನೂ ಕೊಂಡಾಡುತಿದ್ದನು.

---

## ೧೬ ನೇ ಅಧ್ಯಾಯ

### ಹನುಮಂತನು ಸೀತಾದೇವಿಗಾಗಿ ಪ್ರಲಾಪಿಸಿದ್ದು .

ಆ ಬಳಿಕ ಹನುಮಂತನು ಚಿಂತಾಕ್ರಾಂತನಾಗಿ ಸೀತಾದೇವಿಯ ದೈನ್ಯಭಾವವನ್ನು ಕಂಡು ಹಂಬಲಿಸುತ “ ಕಟಕಟಾ ! ಸೀತಾದೇವಿಯು ಉತ್ತಮಕುಲದಲ್ಲಿ ಅವತರಿಸಿ ಲೋಕನಾಯಕನಾದ ಶ್ರೀರಾಮನ ಪಟ್ಟದರಾಣಿಯಾಗಿ ಸಮಸ್ತ ಲೋಕಗಳಲ್ಲಿಯೂ ಪೂಜ್ಯಳಾಗಿ ವಿನಯಾದಿ ಗುಣಸಂಪನ್ನನಾದ ಲಕ್ಷ್ಮಣನಲ್ಲಿ ಅಧಿಕ ವಾತ್ಸಲ್ಯವುಳ್ಳವಳಾಗಿ ಶ್ರೀರಾಮನ ಪಾದಾರವಿಂದದಲ್ಲಿ ಧ್ಯಾನವುಳ್ಳವಳಾಗಿರುವಳು ; ಇಂಥಾ ದೇವಿಗೆ ದುಃಖಬಂದು ಸಂಭವಿಸಿದಮೇಲೆ ಕಾಲದ ಮಹಿಮೆಯನ್ನು ಏನೆಂದು ಹೇಳಬೇಕು ! ರಾಮಲಕ್ಷ್ಮಣರ ಇಂಗಿತವನ್ನು ತಿಳಿದು ನಡೆಯುತ ವರ್ಷಾಕಾಲದ ಗಂಗಾಪ್ರವಾಹದಂತೆ ಅತ್ಯಂತ ಗಾಂಭೀರ್ಯಗುಣವುಳ್ಳ ಈ ದೇವಿಯ ಗುಣಶೀಲಾದಿಗಳಿಗೆ ಶ್ರೀರಾಮನೇ ಸಲ್ಲುವ

ನು, ಆತನ ಗುಣಶೀಲಾದಿಗಳಿಗೆ ಈಕೆಯೇ ಸಲ್ಲುವಳು!” ಎಂದು ಮನಸ್ಸಿನಲ್ಲಿ ಯೋಚಿಸಿ ಲೋಕನಾಯಕಿಯಾಗಿ ಸಾಕ್ಷಾತ್ ಮಹಾಲಕ್ಷ್ಮಿಯಾದ ಆ ದೇವಿಯನ್ನು ಕಂಡು ಶ್ರೀರಾಮನನ್ನು ಧ್ಯಾನಮಾಡುತ “ಸೀತಾದೇವಿಯ ನಿಮಿತ್ತವಾಗಿಯೇ ಮಹಾ ಬಲವಂತನಾದ ವಾಲಿಯು ಮಡಿದನು, ಅದಲ್ಲದೆ ಈ ದೇವಿಯ ನಿಮಿತ್ತವಾಗಿ ರಾವಣನ ಭುಜಬಲ ಪರಾಕ್ರಮಕ್ಕೆ ಸಮಾನನಾದ ಕಬಂಧನೆಂಬ ರಾಕ್ಷಸನು ಹತನಾದನು, ಮತ್ತು ಮಹಾ ತೇಜಸ್ವಿಯಾದ ದೂಷಣನು ಪಂಚತ್ವವನ್ನೈದಿಸಿದನು! ಈ ದೇವಿಯ ನಿಮಿತ್ತವಾಗಿಯೇ ಸುಗ್ರೀವನಿಗೆ ಸಮಸ್ತ ವಾನರ ರಾಜ್ಯಾಧಿಪತ್ಯವು ಬಂತು, ನಾನು ಈಕೆಯ ನಿಮಿತ್ತವಾಗಿಯೇ ಸಮಸ್ತ ನದಿಗಳಿಗೆ ಪತಿಯಾದ ಸಮುದ್ರವನ್ನು ದಾಟಿ ದುರ್ಘಟವಾದ ಲಂಕಾಪಟ್ಟಣವನ್ನು ಹೊಕ್ಕು ನೋಡಿದೆನು, ಇನ್ನು ನಾನೂ ಶ್ರೀರಾಮನೂ ರಾವಣನನ್ನು ಜಯಿಸಿ ಅಯೋಧ್ಯಾಪಟ್ಟಣಕ್ಕೆ ಹೋದರೆ ಆತನಿಗೆ ರಾಜ್ಯಾಧಿಪತ್ಯವು ದೊರೆಯುವದು ಸೀತಾದೇವಿಯ ನಿಮಿತ್ತದಿಂದಲ್ಲದೆ ಮತ್ತೊಂದಲ್ಲವೆಂದು ತೋರುತಲಿದೆ, ಶ್ರೀರಾಮನಿಗೆ ಸೀತಾದೇವಿಯಿಲ್ಲದ ಪಕ್ಷದಲ್ಲಿ ತ್ರೈಲೋಕಾಧಿಪತ್ಯವಿದ್ದರೂ ಇಲ್ಲವೆಂದೇ ನಿಶ್ಚಯಿಸಬೇಕು; ಅದೆಂತೆನೆ. ಈ ತ್ರೈಲೋಕಾಧಿಪತ್ಯವೆಲ್ಲಾ ಕೂಡಿದರೂ ಸೀತಾದೇವಿಯ ಲಾಭದ ಬಂದು ಕಲಾಮಾತ್ರಕ್ಕೆ ಸರಿಬಾರದು, ಈಕೆಯು ಧರ್ಮಶೀಲನಾದ ಜನಕ ಮಹಾರಾಯನ ಕುಮಾರತಿಯು, ಲೋಕನಾಯಕನಾದ ಶ್ರೀರಾಮನ ಪಟ್ಟದ ರಾಣಿಯು, ಶ್ರೀರಾಮನು ಅವತರಿಸುವಕಾಲದಲ್ಲಿ ಜನಕಚಕ್ರೇಶ್ವರನ ದೇಶದಲ್ಲಿ ಗದ್ದೆಯನ್ನುಳುವಾಗ ಕಮಲ ಮಧ್ಯದಲ್ಲಿದ್ದ ಪುಷ್ಪಪರಾಗಕ್ಕೆ ಸಮಾನವಾದ ವರ್ಣವುಳ್ಳವಳಾಗಿ ಕೆಂಧೂಳು ಮುಸಗಿದ ಶರೀರವುಳ್ಳವಳಾಗಿ ನೇಗಿಲ ಸಾಲಿನಲ್ಲಿ ಅವತರಿಸಿದವಳು, ಯುದ್ಧರಂಗದಲ್ಲಿ ಹಿಮ್ಮೆಟ್ಟದೆ ಸಮಸ್ತ ಶತ್ರುಗಳನ್ನೂ ಜಯಿಸುವಂಥಾ ಮಹಾ ಬಲವಂತನಾದ ದಶರಥೇಶ್ವರನ ಸೊಸೆಯು, ಮಾಡಿದ ಉಪಕಾರವನ್ನು ಮರೆಯದ ಸತ್ಯಸಂಧನಾಗಿ ಧರ್ಮರಹಸ್ಯವನ್ನು ಬಲ್ಲ ಮಹಾತ್ಮನಾದ ಶ್ರೀರಾಮನ ಪಟ್ಟದ ರಾಣಿಯಾದ ಈ ದೇವಿಯು ರಾಕ್ಷಸ ಸ್ತ್ರೀಯರ ಕಾವಲಿಗೆ ಒಳಗಾದಳು! ತನ್ನ ಪತಿಯ ಪಾದಾರವಿಂದಧ್ಯಾನ ಬಲದಿಂದ ಸಮಸ್ತ ಭೋಗಗಳನ್ನೂ ಬಿಟ್ಟು ವನದಲ್ಲಿ ಸಂಚರಿಸುತ ಕಾಲುನಡೆ ದುಃಖವನ್ನು ಲೆಕ್ಕಿಸದೆ ಕಂದಮೂಲ ಫಲಾಹಾರಗಳಿಂದ ಸಂತುಷ್ಟ ಚಿತ್ತಳಾಗಿ ಪತಿಸೇವೆಯನ್ನು ಮಾಡಿಕೊಂಡು ತನ್ನ ಮನೆಯಲ್ಲಿ ಸುಖಿಸಿಕೊಂಡಿದ್ದಂತೆ ಪತಿಯೊಡನೆ ವನವಾಸವನ್ನು ಮಾಡಿಕೊಂಡಿದ್ದ ಈ ದೇವಿಗೆ ಇಂಥಾ ಅವಸ್ಥೆಯು ಬಂತು! ಪುಟವಿಕ್ಕಿದ ಚಿನ್ನದ ಕಾಂತಿಯಂತೆ ತನುಕಾಂತಿಯುಳ್ಳವಳಾಗಿ ಮುಗುಳು ನಗೆಯೊಡನೆ ಕೂಡಿ ಪ್ರಿಯ ನುಡಿಯುಳ್ಳ ಸೀತಾದೇವಿಯು ಇಂಥಾ ಅನರ್ಥವಾದ ವೇದನೆಗೊಳಗಾಗಬಹುದೇ! ಶ್ರೀರಾಮನು ಶೀಲವತಿಯಾದ ಈ ದೇವಿಯನ್ನು ನೋಡಬೇಕೆಂದು ಮನಸ್ಸಿನಲ್ಲಿ ಚಿಂತೆಯನ್ನು ಮಾಡುತಿದ್ದನು, ರಾವಣನು ಮೋಸಮಾಡಿ ಅಪಹರಿಸಿಕೊಂಡು ಬಂದ ಈ ದೇವಿಯನ್ನು ತಿರಿಗೂ ಕಂಡನಾದರೆ ರಾಜ್ಯಭ್ರಷ್ಟನಾದ ರಾಯನು ತಿರಿಗಿಬಂದು ರಾಜ್ಯವನ್ನು ಪಡೆದಂತೆ ಅತ್ಯಂತ ಸಂತೋಷಪಡುವನು! ಈ ದೇವಿಯು ಶ್ರೀರಾಮನನ್ನು ಕಾಣಬೇಕೆಂದು ಶರೀರಪಿಡಿದಿದ್ದಾಳೆಯೇ ಅಲ್ಲದೆ ಮತ್ತೇನಾದರೂ ಬಂಧುಗಳನ್ನು ನೋಡಬೇಕು—ಭೋಗಗಳನ್ನನುಭವಿಸಬೇಕು—ಎಂದಿರುವವಳಲ್ಲ! ತನ್ನ ಏಕಾಗ್ರಚಿತ್ತದಲ್ಲಿ ಶ್ರೀರಾಮನನ್ನು ಧ್ಯಾನಮಾಡಿಕೊಂಡಿಧಾಳೆಯೇ ಅಲ್ಲದೆ ತನ್ನ ಸಮೀಪದಲ್ಲಿ ತನಗೆ ಕಾವಲಾಗಿರುವ ರಾಕ್ಷಸ ಸ್ತ್ರೀಯರನ್ನು ನೋಡುವದಿಲ್ಲ! ಲೋಕದಲ್ಲಿ ಪತಿವ್ರತಾ ಸ್ತ್ರೀಯರಿಗೆ ಭೂಷಣಗಳಿಲ್ಲಕ್ಕೂ ಪುರುಷನೇ ಪ್ರಧಾನವಾದ ಭೂಷಣವು! ಆದ್ದರಿಂದ ಅನೇಕ ತನುಕಾಂತಿಯುಳ್ಳವಳಾದ ಈ ದೇವಿಯು ಶ್ರೀರಾಮನನ್ನು ಹೊರ್ತಾಗಿ ಮತ್ತೊಬ್ಬನನ್ನು ಒಪ್ಪುವದಿಲ್ಲ! ಇಂಥಾ ದೇವಿಯನ್ನು ತೊರೆದು ಅಧಿಕವಾದ ದುಃಖಪಡುವದಕ್ಕೆ ಶ್ರೀರಾಮನು ಜನ್ಮಾಂತರದಲ್ಲಿ ಏನು ಪಾಪಮಾಡಿದನೊ ಅರಿಯಲಾಗದು, ತಾವರೇಪುಷ್ಪದ ಎಸಳಂತೆ ವಿಶಾಲವಾದ ಕಣ್ಣುಗಳುಳ್ಳ ಭೃಂಗಕುಂತಳೆಯಾದ ಸೀತಾದೇವಿಯು ದೈನ್ಯಪಡುವದನ್ನು ಕಂಡು ನನ್ನ ಮನಸ್ಸಿಗೆ ಬಹಳವಾಗಿ ವ್ಯಥೆಯಾಗುತ್ತಿದೆ; ಶ್ರೀರಾಮಲಕ್ಷ್ಮಣರ ರಕ್ಷಣಹೊರ್ತಾಗಿ ಘೋರರೂಪರಾದ ರಾಕ್ಷಸ ಸ್ತ್ರೀಯರ ಕಾವಲಿಗೊಳಗಾಗಿ ಇಬ್ಬನಿಯಿಂದ ಘಾತುಗೆಟ್ಟ ಕಮಲದಂತೆ ಮುಖಕಾಂತಿ ಗುಂದಿ ದುಃಖಪರಂಪರೆಯಿಂದ ನೊಂದು ಕಂಗೆಟ್ಟು ಮರದಡಿಯನ್ನಾಶ್ರಯಿಸಿ ಗಂಡು ಚಕ್ರವಾಕಪಕ್ಷಿಯಿಲ್ಲದ ಹೆಣ್ಣು ಚಕ್ರವಾಕಪಕ್ಷಿಯಂತೆ ಹಂಬಲಿಸುತ

ಲಿಥಾಳೆ, ಈ ಸಮಯದಲ್ಲಿ ಸಮಸ್ತ ಪ್ರಾಣಿಗಳ ಶೋಕಗಳನ್ನೂ ಪರಿಹರಿಸುವ ಪುಷ್ಪಗಳಿಂದ ಪರಿಪೂರ್ಣವಾದ ಈ ಅಶೋಕ ವೃಕ್ಷಗಳು ಈಕೆಯ ಮನಸ್ಸಿಗೆ ವ್ಯಥೆಯನ್ನುಂಟುಮಾಡುವವಲ್ಲದೆ ಸುಖವನ್ನುಂಟುಮಾಡಲಾರವು" ಎಂದು ಸೀತಾದೇವಿಯನ್ನು ಕುರಿತು ಬಹಳವಾಗಿ ವ್ಯಥೆಪಡುತಿದ್ದನು.

## ೧೭ನೇ ಅಧ್ಯಾಯ

## ಸೀತಾದೇವಿಯು ರಾಕ್ಷಸಸ್ತ್ರೀಯರ ಕಾವಲಲ್ಲಿದ್ದದ್ದು.

ಆ ಸಮಯದಲ್ಲಿ ವಿಕಸಿತವಾದ ನೈದಿಲು ತಾವರೆಗಳಿಂದ ಕೂಡಿ ನಿರ್ಮಲೋದಕವುಳ್ಳ ಸರಸ್ಸಿಗೆ ನಿರ್ಮಲವಾದ ಗರಿಗಳುಳ್ಳ ಹಂಸಪಕ್ಷಿಯು ಬರುವಂತೆ ನಿರ್ಮಲವಾದ ಕಾಂತಿಯುಳ್ಳ ಚಂದ್ರನು ಹನುಮಂತನಿಗೆ ಸಹಾಯವಾಗಿ ಬಂದನೋ ಎಂಬಂತೆ ಉದಯ ಪರ್ವತವಲ್ಲಿ ಕಾಣಿಸಿಕೊಂಡು ತನ್ನ ಕಿರಣಗಳಿಂದ ಹನುಮಂತನ ಬಳಲಿಕೆಯನ್ನು ಪರಿಹರಿಸಿ ಸಂತೋಷಪಡಿಸಿದನು ! ಆಗ ಹನುಮಂತನು ಚಂದ್ರಪ್ರಭೆಯಿಂದ ಪ್ರಕಾಶಮಾನವಾಗಿ ದುಃಖಾಕಾರದಿಂದ ವ್ಯಥೆಪಡುತಿದ್ದ ಚಂದ್ರಮುಖಿಯಾದ ಸೀತಾದೇವಿಗೆ ಕಾವಲಾಗಿದ್ದ ರಾಕ್ಷಸ ಸ್ತ್ರೀಯರನ್ನು ಕಂಡನು , ಒಂದು ಕಣ್ಣುಳ್ಳವಳೂ ಒಂದು ಕಿವಿಯವಳೂ ಮುಖದಮೇಲೆ ಕವುಚಿದ ಕಿವಿಯುಳ್ಳವಳೂ ಕಿವಿಗಳಿಲ್ಲದವಳೂ ದಶಿಯಂತೆ ಕಿವಿಗಳುಳ್ಳವಳೂ ಎದೆಯಮೇಲೆ ತಲೆಯುಳ್ಳವಳೂ ಅತಿ ಉದ್ದವಾದ ಕೊರಳುಳ್ಳವಳೂ ಬೋಳಾದ ಮಂಡೆಯುಳ್ಳವಳೂ ಹಣೆಯಲ್ಲಿ ಕಿವಿಗಳುಳ್ಳವಳೂ ಉದ್ದವಾದ ತುಟಿಗಳೂ ಕುಚಾಗ್ರಗಳೂ ಉಳ್ಳವಳೂ ಜೋಲುವ ತುಟಿಯುಳ್ಳವಳೂ ಗಡ್ಡದಲ್ಲಿ ತುಟಿಯುಳ್ಳವಳೂ ಉದ್ದವಾದ ಮುಖವುಳ್ಳವಳೂ ನೇಲುತಿದ್ದ ಮೊಳಕಾಲು ಚಿಪ್ಪಗಳುಳ್ಳವಳೂ ಅತಿ ಕೃಶಾಂಗಿಯಾದವಳೂ ಅತ್ಯಂತ ಉದ್ದವಾದವಳೂ ಅತ್ಯಂತ ಗಿಡ್ಡಾದವಳೂ ಡೊಂಕಾದ ಶರೀರವುಳ್ಳವಳೂ ಅತಿ ಭಯಂಕರವಾದವಳೂ ಹಿಂಭಾಗದಲ್ಲಿ ಮುಖವುಳ್ಳವಳೂ ಕೆಂಪಾದ ಕಣ್ಣುಗಳುಳ್ಳವಳೂ ವಿಕಟ ಮುಖವುಳ್ಳವಳೂ ಅತ್ಯಂತ ಕೆಂಪಾದವಳೂ ಅತ್ಯಂತ ಕಪ್ಪಾದವಳೂ ಅತ್ಯಂತ ಕೋಪಿಯಾದವಳೂ ಯಾವಾಗಲೂ ಕಂಹವರಕೂಡೆ ಕಲಹಮಾಡುವವಳೂ ತ್ರಿಶೂಲ ಇಡುಗಡ್ಡಿಗೆ ದೊಣ್ಣೆಗಳನ್ನು ಧರಿಸಿದ್ದವರೂ ಹಂದಿಮುಖ ಸಿಂಹಮುಖ ಹುಲಿಮುಖ ಕೋಣನಮುಖ ನರಿಮುಖ ಆನೆಯಮುಖ ಒಂಟೆಯಮುಖ ಕುದುರೆಯ ಮುಖವುಳ್ಳವರೂ ಪಾದಗಳಲ್ಲಿ ಮುಖಗಳುಳ್ಳವರೂ ಒಂದುಕೈ ಒಂದುಕಾಲುಳ್ಳವರೂ ಕತ್ತೆಕಿವಿ ಕುದುರೆಕಿವಿ ಗೋವುಕಿವಿ ಆನೆಯಕಿವಿ ಸಿಂಹದಕಿವಿಯುಳ್ಳವರೂ ಮೂಗಿಲ್ಲದವರೂ ಅತಿ ಉದ್ದವಾದ ಮೂಗುಳ್ಳವರೂ ಅಡ್ಡಲಾದ ಮೂಗುಳ್ಳವರೂ ಆನೆಯ ಸೊಂಡಿಲಂತೆ ಮೂಗುಳ್ಳವರೂ ಹಣೆಯಲ್ಲಿ ಮೂಗುಳ್ಳವರೂ ಆನೆಯ ಕಾಲಂತೆ ಕಾಲುಳ್ಳವರೂ ಅತಿ ಉದ್ದವಾದ ಕಾಲುಳ್ಳವರೂ ಗೋವುಗಳ ಕಾಲಂತೆ ಕಾಲುಳ್ಳವರೂ ಪಾದಗಳಲ್ಲಿ ಹೆಗ್ಗಳವಾದ ರೋಮವುಳ್ಳವರೂ ದೀರ್ಘವಾದ ನಾಲಿಗೆಯುಳ್ಳವರೂ ಧೂಮ್ರವರ್ಣವಾದ ಮಂಡೆಯುಳ್ಳವರೂ ಮಾಂಸದಿಂದಲೂ ರಕ್ತದಿಂದಲೂ ಲೇಪಿಸಲ್ಪಟ್ಟ ಶರೀರವುಳ್ಳವರೂ ಆಗಿ ಯಾವಾಗಲೂ ಮಾಂಸ ರಕ್ತ ಮಧುಗಳನ್ನೇ ಆಹಾರ ಮಾಡಿಕೊಂಡಿದ್ದ ಆ ರಾಕ್ಷಸ ಸ್ತ್ರೀಯರು ಸೀತಾದೇವಿಯಿದ್ದ ವೃಕ್ಷದಮೇಲೆ ಕುಳಿತುಕೊಂಡಿದ್ದರು ! ಅವರನ್ನು ಕಂಡು ಮಹಾತ್ಮನಾದ ಹನುಮಂತನು ಮನಸ್ಸಿನಲ್ಲಿ ಅತ್ಯಂತ ದುಃಖಪಟ್ಟನು ಸೀತಾದೇವಿಯು ಶ್ರೀರಾಮನ ವಿರಹ ಶೋಕಾಗ್ನಿಯಿಂದ ಬೆಂದು ಮುಖಕಾಂತಿಗುಂದಿ ಮಂಡೆಯಲ್ಲಿ ಧೂಳುಮುಸಗಿ ಭೋಗಕ್ಷಯವಾದ ಮೇಲೆ ನಕ್ಷತ್ರ ಮಂಡಲದಿಂದ ಬೀಳುವ ನಕ್ಷತ್ರದಂತೆ ಕಾಂತಿಗುಂದಿ ತನ್ನ ಸದ್ವರ್ತನದಿಂದ ಶ್ರೀರಾಮನನ್ನೇ ಧ್ಯಾನಮಾಡುತ ಸಮಸ್ತ ಭೂಷಣಗಳನ್ನೂ ಸಡಲಿಸಿ ಬಂಧುಗಳನ್ನು ಕಾಣದೆ ಹಿಂಡಿನಿಂದ ತೊಲಗಿ ಮಹಾ ಬಲವುಳ್ಳ ಸಿಂಹಗಳಿಂದ ಸುತ್ತಲ್ಪಟ್ಟ ಹೆಣ್ಣಾನೆಯಂತೆ ರಾವಣನಿಗೆ ಸೆರೆಸಿಕ್ಕಿ ಅತಿಭಯಂಕರವಾದ ರಾಕ್ಷಸ ಸ್ತ್ರೀಯರ ಕಾವಲಿಗೊಳಗಾಗಿ ಮೇಘಮುಚ್ಚಿದ ಚಂದ್ರಕಳೆಯಂತೆ ಕಾಂತಿಗುಂದಿ ಕೃಶಾಂಗಿಯಾಗಿ ತಂತಿಹರಿದ ವೀಣೆಯಂತೆ ನೋಡುವದಕ್ಕೆ ಅಸಹ್ಯವಾಗಿ ರಾಕ್ಷಸ ಸ್ತ್ರೀಯರ ಮಧ್ಯದಲ್ಲಿ ಸಿಕ್ಕಿ ಶೋಕ ಸಮುದ್ರದಲ್ಲಿ ಮುಳುಗಿ ಮಂಗಳ ಮೊದಲಾದ ಪಾಪ ಗ್ರಹಗಳಿಂದ

ಬತ್ತರಿಸಲ್ಪಟ್ಟ ರೋಹಿಣೀ ನಕ್ಷತ್ರದಂತೆಯೂ ಪುಷ್ಪವಿಲ್ಲದ ಲತೆಯಂತೆಯೂ ಧೂಳು ಮುಸುಗಿದ ಶರೀರವುಳ್ಳವಾಗಿ ತನುಕಾಂತಿಯುಳ್ಳವಳಾದರೂ ಕೆಸರು ಹತ್ತಿದ ತಾವರೆಯಂತೆ ಮಲಿನವಾದ ವಸ್ತ್ರವನ್ನುಟ್ಟು ಶ್ರೀರಾಮನನ್ನು ನೋಡಬೇಕೆಂಬ ಅಭಿಲಾಷೆಯಿಂದಲೂ ಶೀಲವನ್ನು ಬಿಡಬಾರದೆಂಬ ಬುದ್ಧಿಯಿಂದಲೂ ಧೈರ್ಯವಿಡಿದು ಬೇಟೆಗಾರನಿಗೆ ಬೆದರುತಿದ್ದ ಹುಲ್ಲೆಯಂತೆ ನಡುಗುತ ತಳಿರು ಪುಷ್ಪಗಳುಳ್ಳ ವೃಕ್ಷಗಳನ್ನು ತನ್ನ ನಿಶ್ವಾಸಮಾರುತನಿಂದ ವಹಿಸಿದಳೋ ಎಂಬಂತೆ ಸಿಟ್ಟುಸುರುಬಿಡುತ ಶೋಕಗಳ ರಾಶಿಯೋ ಎಂಬಂತೆಯೂ ದುಃಖಗಳೆಂಬ ತೆರೆಯ ಸಮೂಹವೋ ಎಂಬಂತೆಯೂ ಹೇಳುವದಕ್ಕೆ ಅಶಕ್ಯವಾದ ಅವಸ್ಥೆಯುಳ್ಳವಳಾಗಿದ್ದಳು ಹನುಮಂತನು ಆ ದೇವಿಯನ್ನು ಕಂಡು ಅತಿಹರ್ಷಪಟ್ಟು ಆನಂದಾಶ್ರುಗಳನ್ನು ತುಂಬಿಕೊಂಡು ಲಕ್ಷ್ಮಣ ಸಮೇತನಾದ ಶ್ರೀರಾಮನನ್ನು ಮನಸ್ಸಿನಲ್ಲಿ ಅಭಿವಂದಿಸಿ ಆಕೆಯ ಸಮೀಪಕ್ಕೆ ಹೋಗಬೇಕೆಂದು ಸನ್ನಾಹವಮಾಡುತಿದ್ದನು.

## ೧೮ ನೇ ಅಧ್ಯಾಯ.

### ರಾವಣನು ಸೀತಾದೇವಿಯ ಬಳಿಗೆ ಬಂದದ್ದು.

ಈ ಮರ್ಯಾದೆಯಲ್ಲಿ ಪುಷ್ಪಿತವಾದ ವೃಕ್ಷಗಳುಳ್ಳ ಅಶೋಕವನದಲ್ಲಿ ಹನುಮಂತನು ಸೀತಾದೇವಿಯನ್ನು ನೋಡುತಿದ್ದ ಸಮಯದಲ್ಲಿ ಆ ರಾತ್ರಿಯು ಕಳೆದು ಪ್ರಾತಃಕಾಲವಾಗುತಿತ್ತು; ಆಗ ವೇದವೇದಾಂಗಪಾರಂಗತರಾಗಿ ಯಜ್ಞವಿದ್ಯಾವಿಚಕ್ಷಣರಾಗಿ ದೀಕ್ಷಿತರಾದ ರಾಕ್ಷಸರು ಅಪರರಾತ್ರಿಯಲ್ಲೆದ್ದು ಹೇಳುವ ವೇದಪಾರಾಯಣ ಧ್ವನಿಯನ್ನು ಕೇಳುತಲೂ ಕಿವಿಗಿಂಪಾದ ಮಂಗಳವಾದ್ಯಧ್ವನಿಯನ್ನು ಕೇಳುತಲೂ ಪ್ರತಾಪಶಾಲಿಯಾಗಿ ರಾಕ್ಷಸೇಶ್ವರನಾದ ರಾವಣನು ರಾತ್ರಿಯಲ್ಲಿ ಮುಡಿದ ಹೂವ್ವಿನ ಸರಗಳನ್ನು ಪರಿಹರಿಸಿ ಸೀತಾದೇವಿಯನ್ನು ನೆನೆದು ಮದನಬಾಣಕ್ಕೊಳಗಾಗಿ ಮನ್ಮಥೋದ್ರೇಕವನ್ನು ತಾಳಲಾರದೆ ಸರ್ವಾಭರಣಭೂಷಿತನಾಗಿ ಕಾಲೋಚಿತವಾದ ವಸ್ತ್ರಾಭರಣಗಳನ್ನು ಧರಿಸಿ ಗಂಧಾನುಲೇಪನ ಮಾಡಿಕೊಂಡು ನಾನಾಪುಷ್ಪ ವೃಕ್ಷಗಳಿಂದ ಸುತ್ತುವರಿಯಲ್ಪಟ್ಟ ಕೊಳಗಳುಳ್ಳದ್ದಾಗಿ ಮದಿಸಿದ ಕ್ರೀಡಾಮೃಗಗಳಿಂದ ಇಟ್ಟಣಿಸಿದ್ದಾಗಿ ಮನೋಹರವಾದ ಚಿನ್ನದ ಕಿರುಘಂಟೆಗಳಿಂದ ಅಲಂಕರಿಸಲ್ಪಟ್ಟ ತೋರಣಗಳುಳ್ಳ ಅಶೋಕವನಕ್ಕೆ ಬರುತಿದ್ದನು, ದೇವಸ್ತ್ರೀಯರಿಂದ ಸುತ್ತಲ್ಪಟ್ಟ ದೇವೇಂದ್ರನಂತೆ ಅನೇಕ ಸ್ತ್ರೀಯರಿಂದ ಸುತ್ತಲ್ಪಟ್ಟಿರಲು; ಕೆಲವರು ಆತನ ಮುಂದೆ ಚಿನ್ನದ ದೀವಟಿಗೆಗಳನ್ನು ಹಿಡಿದುಕೊಂಡು ಬರುತಿದ್ದರು, ಕೆಲವರು ಚಾಮರಗಳನ್ನು ಬೀಸುತಿದ್ದರು; ಕೆಲವರು ಆಲವಟ್ಟಿಗೆ ಕಾಳಂಜಿ ಗಿಂಡಿಗೆಗಳನ್ನು ಹಿಡಿದುಕೊಂಡಿದ್ದರು, ಕೆಲವರು ಹಿಂದುಗಡೆಯಲ್ಲಿ ಚಕ್ರ ಖಡ್ಗಾದಿ ಆಯುಧಗಳನ್ನು ಹಿಡಿದುಕೊಂಡಿದ್ದರು; ಕೆಲವರು ಮದ್ಯತುಂಬಿದ ರತ್ನಕೊಡಗಳನ್ನೂ ಕೆಲವರು ರತ್ನಖಚಿತಗಳಾದ ಸುವರ್ಣಪಾತ್ರೆಗಳನ್ನೂ ಕೆಲವರು ಚಿನ್ನದ ಕಾವಿನ ಬೆಳ್ಳಿಯ ಸತ್ತಿಗೆಯನ್ನೂ ಕೆಲವರು ಬೆಳ್ಳಿಯಕಾವಿನ ಚಿನ್ನದ ಸತ್ತಿಗೆಯನ್ನು ಹಿಡಿದುಕೊಂಡಿದ್ದರು; ಕೆಲವರು ನಿದ್ರೆಯು ಸೊಕ್ಕಿ ತಪ್ಪುಹೆಜ್ಜೆಯನ್ನಿಕ್ಕುತ ಮಿಂಚುಗಳು ಕಾರ್ಮುಗಿಲ ಬೆನ್ನಿಡಿದು ಬರುವಂತೆ ಆತನ ಹಿಂದೆ ನಡೆಯುತಿದ್ದರು; ಮತ್ತು ಕೆಲವರು ತೋಳಬಳೆಗಳಲ್ಲಿ ಸಂಬಂಧಿಸಿದ ಮುತ್ತಿನ ಸರಗಳುಳ್ಳವರಾಗಿ ಬೆವರಿನಿಂದ ಕರಗಿದ ಕಸ್ತೂರಿ ತಿಲಕವುಳ್ಳವರಾಗಿ ಸಡಲಿದ ಮುಡಿಗಂಟುಳ್ಳವರಾಗಿ ಬೆವರಿದ ಮುಖವುಳ್ಳವರಾಗಿ ನಿದ್ರಾತಿಶಯದಿಂದ ಕಣ್ಣಿನ ಕಿರಿಹಾಲೆಗಳನ್ನು ತಿರಿಗಿಸುತ ಮುಡಿದ ಮುಡಿಸರ ಸಡಲುವದನ್ನರಿಯದೆ ರಾವಣನಿಂದ ಲಾಲಿಸಲ್ಪಡುತ ನಡೆಯುತಿದ್ದರು! ಅಷ್ಟುಮಂದಿ ಸ್ತ್ರೀಯರಿಗೂ ಪತಿಯಾದ ರಾವಣನು ಕಾಮವಶನಾಗಿ ಸೀತಾದೇವಿಯನ್ನು ನೆನೆಸುತ ಕಾಮಾಂಧಕಾರದಿಂದ ಮೆಲ್ಲಗೆ ಹೆಜ್ಜೆಯನ್ನಿಡುತ ತನ್ನ ಹಿಂದೆ ಬರುತಿದ್ದ ಸ್ತ್ರೀಯರ ಕಾಂಚೀಧಾಮ ಕಾಲಂದಿಗೆ ಘಂಟೆ ಸರಪಣಿ ಬಾಹುಪುರಿ ಮೊದಲಾದ ಭೂಷಣಗಳ ಝುಣಝುಣಾರವಗಳನ್ನು ಕೇಳುತ ಆನಂದದಿಂದ ಅಶೋಕವನದ ಬಾಗಿಲಿಗೆ ಬಂದನು; ಹಾಗೆ ಗಂಧತೈಲದಿಂದ ನೆನೆಸಲ್ಪಟ್ಟು ಮುಂದುಗಡೆಯ

ಲ್ಲಿ ಹಿಡಿಯಲ್ಪಟ್ಟ ಅನೇಕ ದೀವಟಿಗೆಗಳ ಬೆಳಕಿನಿಂದ ಕಾಮಮದಯುಕ್ತನಾಗಿ ಪುಷ್ಪಬಾಣಗಳನ್ನಿಡಿದ ಸಾಕ್ಷಾತ್ ಮನ್ಮಥನೋ ಎಂಬಂತೆ ಲಾವಣ್ಯಾತಿಶಯವುಳ್ಳವನಾಗಿ ಕಡೆಯಲ್ಪಟ್ಟ ಅಮೃತದ ನೊರೆಯಂತೆ ಅತಿಬಿಳುಪಾದ ವಸ್ತ್ರವನ್ನು ಧರಿಸಿಕೊಂಡು ಸಮೀಪಕ್ಕೆ ಬರುತಿದ್ದ ರಾವಣನನ್ನು ನೋಡಿ ಹನುಮಂತನು ತಳಿರುಪುಷ್ಪಗಳಿಂದ ಫಲಿತವಾದ ಕೊಂಬುಗಳ ಮಧ್ಯದಲ್ಲಿ ತನ್ನ ಶರೀರವನ್ನು ಮರಸಿಕೊಂಡು ರೂಪ ಲಾವಣ್ಯ ಸೌಂದರ್ಯವುಳ್ಳ ಸ್ತ್ರೀಯರೊಡನೆ ಕೂಡಿ ಮದಸೊಕ್ಕಿದ ಮೃಗಪಕ್ಷಿಗಳಿಂದ ಇಟ್ಟಣಿಸಿದ ಅಶೋಕವನದಲ್ಲಿ ನಕ್ಷತ್ರಗಳಿಂದ ಸುತ್ತುವರಿಯಲ್ಪಟ್ಟ ಚಂದ್ರನಂತೆ ತನುಸೊಬಗುಳ್ಳ ಅನೇಕ ಸ್ತ್ರೀಯರ ಮಧ್ಯದಲ್ಲಿ ಬರುತಿದ್ದ ಆ ರಾಕ್ಷಸೇಶ್ವರನ ತೇಜಸ್ಸಿನಿಂದ ಮರಿಸಲ್ಪಟ್ಟ ಶರೀರವುಳ್ಳವನಾಗಿ ಆ ಮರದಿಂದಿಳಿದು ಮತ್ತೊಂದು ಮರದ ಶಾಖೆಯಲ್ಲಿ ಮರೆಯಾಗಿದ್ದುಕೊಂಡು ಉನ್ನತವಾಗಿ ಏಕವಾಗಿ ಕಠಿಣವಾಗಿ ಬಂದರಿಂದ ಬಂದು ಬತ್ತರಿಸಲ್ಪಟ್ಟ ಸ್ತನಗಳುಳ್ಳವಳಾಗಿ ಘನಗಾತ್ರವಾದ ಪೂರವಾರವುಳ್ಳವಳಾಗಿ ಭೃಂಗಕುಂತಳೆಯಾಗಿ ತನುಸೊಬಗುಳ್ಳವಳಾದ ಸೀತಾದೇವಿಯನ್ನು ನೋಡಬೇಕೆಂಬ ಇಚ್ಛೆಯಿಂದ ಬರುತಿದ್ದ ಆ ರಾಕ್ಷಸೇಶ್ವರನನ್ನು ನೋಡುತಿದ್ದನು.

---

## ೧೮ ನೇ ಅಧ್ಯಾಯ.

## ಸೀತಾದೇವಿಯ ಅವಸ್ಥೆಯು.

ಆ ಸಮಯದಲ್ಲಿ ಸೀತಾದೇವಿಯು ರೂಪುಯವ್ವನ ಸಂಪನ್ನನಾಗಿ ಸರ್ವಾಭರಣ ಭೂಷಿತನಾಗಿ ಬರುತಿದ್ದ ರಾವಣನನ್ನು ಕಂಡು ಬಿರುಗಾಳಿಯು ಹೊಯಿಲಿಗೆ ಕಂಗೆಟ್ಟ ಬಾಳೆ ಕಂಭದಂತೆ ನಡಗುತ್ತ ತನ್ನ ತೊಡೆಗಳಿಂದ ಹೊಟ್ಟೆಯನ್ನು ಮರಸಿಕೊಂಡು ತನ್ನ ತೋಳುಗಳಿಂದ ಸ್ತನಗಳನ್ನು ಮರಸಿಕೊಂಡು ರೋದನಮಾಡುತ ರಾಕ್ಷಸಸ್ತ್ರೀಯರ ಕಾವಲಿಗೊಳಗಾಗಿ ಅತಿ ಭಾರದಿಂದ ಸಮುದ್ರಮಧ್ಯದಲ್ಲಿ ತಲ್ಲಣಿಸುತಿದ್ದ ಒಡೆಯುಮರ್ಯಾದೆಯುಲ್ಲಿಯೂ ತರಿದುಬಿದ್ದ ಮರದ ಕೊಂಬಿನಂತೆಯೂ ಭೂಮಿಯಮೇಲೆ ಕುಳಿತುಕೊಂಡು ಭೂಷಣಗಳಿಗೆ ಯೋಗ್ಯವಾದಂಥಾವಳಾದರೂ ಭೂಷಣಗಳೇನೂ ಇಲ್ಲದೆ ಶರೀರವೆಲ್ಲವು ಧೂಳುಮುಸಗಿ ಕೆಸರು ಹತ್ತಿದ ತಾವರೇ ಕಮಲದಂತೆ ರಾಜಶಿರೋಮಣಿಯಾದ ಶ್ರೀರಾಮನನ್ನು ನೋಡಬಹುದೆಂಬ ಉತ್ಸಾಹ ಮನೋರಥದಿಂದ ಶರೀರಮಾತ್ರವನ್ನುಳಿಸಿಕೊಂಡು ಆತನನ್ನು ಧ್ಯಾನಮಾಡುತ ನಾಗಾಂಗನೆಯಂತೆ ಹೊರಳುತ ನಿಟ್ಟುಸುರನ್ನು ಬಿಡುತ ಧೂಮಕೇತುವಿನಿಂದ ಬತ್ತರಿಸಲ್ಪಟ್ಟ ರೋಹಿಣೀ ನಕ್ಷತ್ರದಂತೆ ತನುಕಾಂತಿಗುಂದಿದವಳಾಗಿದ್ದಳು, ಸದ್ವರ್ತನ ವಿನಯ ಧರ್ಮಾದಿಗುಣಗಳುಳ್ಳ ಜನಕರಾಯನ ವಂಶದಲ್ಲಿ ಹುಟ್ಟಿದವಳಾದರೂ ದೈನ್ಯಾವಸ್ಥೆಯಿಂದ ನೋಡುವ ಜನಕ್ಕೆ ಅತ್ಯಂತ ದುಃಖವನ್ನುಂಟುಮಾಡುತ ಅಪಕೀರ್ತಿಗೆ ಸಿಕ್ಕಿದ ಕೀರ್ತಿಯಂತೆಯೂ ಮನ್ನಣೆತಪ್ಪಿದ ವಿಶ್ವಾಸದಂತೆಯೂ ಮರವೆಯೊಡನೆ ಕೂಡಿದ ಬುದ್ಧಿಯಂತೆಯೂ ಮರೆಗೆ ತಪ್ಪಿದ ಆಸೆಯಂತೆಯೂ ಕೆಡಲ್ಪಟ್ಟ ಕಾಂತಿಯಂತೆಯೂ ಭಂಗವನ್ನೈದಿದ ಅಗ್ನಿಯಂತೆಯೂ ಕೆಂಧೂಳುಮುಸಗಿದ ದಿಕ್ಕಿನಂತೆಯೂ ಪರಿಹರಿಸಿದ ಪೂಜಾಲಂಕಾರದಂತೆಯೂ ಕಲಕಿದ ತಾವರೇಕೊಳದಂತೆಯೂ ಘಾಯಪಡೆದ ಸೇನೆಯಂತೆಯೂ ಗಾಡಾಂಧಕಾರವಿಡಿದ ಸೂರ್ಯನಂತೆಯೂ ಬತ್ತಿದ ನದಿಯಂತೆಯೂ ಈಡಿರಿಯಲ್ಪಟ್ಟ ಜಗತಿಯಂತೆಯೂ ಕೆಡಲ್ಪಟ್ಟ ಅಗ್ನಿಜ್ವಾಲೆಯಂತೆಯೂ ರಾಹುತುಡುಕಿದ ಚಂದ್ರಮಂಡಲವುಳ್ಳ ಪೌರ್ಣಮೀರಾತ್ರಿಯಂತೆಯೂ ಕೀಳಲ್ಪಟ್ಟ ಕಮಲಗಳುಳ್ಳ ಸರೋವರದಂತೆಯೂ ಬೆದರಿ ಓಡುವ ಪಕ್ಷಿಗಳುಳ್ಳ ವೃಕ್ಷದಂತೆಯೂ ಮದ್ದಾನೆಯು ಕಲಕಿದ ಉದಕವುಳ್ಳ ಕೊಳದಂತೆಯೂ ಕಾಂತಿಯಿಲ್ಲದ ಕೃಷ್ಣಪಕ್ಷದ ರಾತ್ರಿಯಂತೆಯೂ ತನ್ನ ಸ್ಥಾನದಿಂದ ತೊಲಗಿದ ಎಳದಾವರೆಯಂತೆಯೂ ಹಿಂಡಿನಿಂದ ತೊಲಗಿಸಿ ಹಿಡಿಯಲ್ಪಟ್ಟ ಹೆಣ್ಣಾನೆಯಂತೆಯೂ ತಲ್ಲಣಿಸುತ ಶೋಕದಿಂದಲೂ ಭಯದಿಂದಲೂ ಉಪವಾಸದಿಂದಲೂ ಧ್ಯಾನದಿಂದಲೂ ಕೃಶಾಂಗಿಯಾಗಿ ರಾವಣನು ಮಾಡಿದ ಉಪದ್ರವವನ್ನು ಅಡಿಗಡಿಗೆ ನೆನೆಯುತ ದುಃಖಾತಿಶಯದಿಂದ ಹಂಬಲಿಸಿ ರೋದನವನ್ನು ಮಾಡುತ ಕೈಮುಗಿದು ದೇವತಾಪ್ರಾರ್ಥನೆಯನ್ನು ಮಾಡುತಿದ್ದಳು.

## ೨೦ನೇ ಅಧ್ಯಾಯ.

### ರಾವಣನು ಸೀತಾದೇವಿಯನ್ನು ತನ್ನ ಸ್ತ್ರೀಯಾಗಲು ಪ್ರಾರ್ಥಿಸಿದ್ದು.

ಆ ಬಳಿಕ ರಾವಣನು ತಪಸ್ವಿನಿಯಾಗಿ ಶೋಕಪಡುತಿದ್ದ ಸೀತಾದೇವಿಯನ್ನು ನೋಡಿ ಮಧುರವಚನಗಳಿಂದ ಸಂತವಿಸುತ "ಆನೆಯ ಸುಂಡಿಲಂತೆ ಕ್ರಮ ವರ್ತುಳವಾಗಿ ಕೋಮಲವಾದ ತನುಸೊಬಗುಳ್ಳ ತೊಡೆಗಳುಳ್ಳ ಸೀತಾದೇವಿಯೆ ಕೇಳು. ನೀನು ನನ್ನನ್ನು ಕಂಡು ಭಯಪಟ್ಟು ಶರೀರವನ್ನು ಕೊಂಕಿಸಿಕೊಂಡು ಸಂಕೋಚಪಡುತಿದ್ದೀ; ಭಯ ಸಂಕೋಚಗಳನ್ನು ಬಿಡು, ನಿನ್ನ ಮನಸ್ಸಿನಲ್ಲಿ ನನ್ನನ್ನು ಸಾಮಾನ್ಯನೆಂದೆಣಿಸಬೇಡ, ನೀನು ಸರ್ವಗುಣಸಂಪನ್ನೆಯು, ಸರ್ವಜನ ಮನೋಹರೆಯು, ನೀನು ನನಿಗೆ ಭಯಪಡಬೇಡ, ನನ್ನ ಸಮೀಪದಲ್ಲಿರುವ ರಾಕ್ಷಸರು ಮನುಷ್ಯರನ್ನು ಭಕ್ಷಿಸುವ ಕಾಮರೂಪಿಗಳೆಂದು ಭಯಪಡಬೇಡ; ಇವರೆಲ್ಲರು ಹೊರಟುಹೋಗಲಿ, ರಾಕ್ಷಸರಾದ ನಮಿಗೆ ಪರರನ್ನು ಕೊಂದು ಅವರ ಸ್ತ್ರೀಯರನ್ನಪಹರಿಸಿಕೊಂಡು ಬರುವದು ಜಾತಿ ಧರ್ಮವಲ್ಲದೆ ಮತ್ತೊಂದಲ್ಲ; ನೀನು ನನ್ನಲ್ಲಿ ಅನುಕೂಲವಾಗಿರಲು ಮನ್ಮಥನು ನನ್ನ ಶರೀರದಲ್ಲಿ ತನ್ನ ಮನಸ್ಸು ಬಂದಂತೆ ಕ್ರೀಡಿಸಿಕೊಂಡಿರಲಿ! ನನ್ನಿಂದಾ ನಿನಗೆ ಭಯವಿಲ್ಲ; ನೀನು ಶ್ರೀರಾಮನಲ್ಲಿ ವಿರಹ ಶೋಕದಿಂದ ನೊಂದು ಕಂಗೆಟ್ಟು ಒಂಟಿ ಜಡೆಯುಳ್ಳವಳಾಗಿ ಭೂಶಯನಮಾಡುತ ಮಲಿನ ವಸ್ತ್ರವನ್ನು ಧರಿಸಿ ಚಿಂತಾಕ್ರಾಂತೆಯಾಗಿ ಉಪವಾಸದಿಂದಿರುವದು ಕಾರ್ಯವಲ್ಲ, ನಾನಾ ವಿಚಿತ್ರವಾದ ವಸ್ತ್ರಗಳನ್ನುಟ್ಟು ದಿವ್ಯಾಭರಣ ಭೂಷಿತೆಯಾಗಿ ದಿವ್ಯ ಗಂಧಾನು ಲೇಪನಗಳನ್ನು ಮಾಡಿಕೊಂಡು ದಿವ್ಯಪುಷ್ಪಗಳನ್ನು ತೆಗೆದುಕೊಂಡು ರತ್ನಮಯವಾದ ಪಲ್ಲಕ್ಕಿಯಮೇಲೆ ಸಂಚರಿಸಿಕೊಂಡು ಮಂಚ ಸುಪ್ಪತ್ತಿಗೆಯಮೇಲೆ ಮಲಗಿಕೊಂಡು ವೀಣೆ ಸ್ವರ ಮದ್ದಳ ಗೀತಾದಿ ಧ್ವನಿಗಳನ್ನು ಕೇಳುತ ಆನಂದವಾಗಿ ಸನ್ಮಾನದಲ್ಲಿರುವ ಸ್ತ್ರೀರತ್ನವಾಗಿರದೇ ಹೀಗೆ ಕಾರ್ಪಣ್ಯದಿಂದಿರಬಹುದೇ! ಈ ಬುದ್ಧಿಯನ್ನು ಬಿಡು, ನನ್ನ ಸಮೀಪಕ್ಕೆ ಬಂದಬಳಿಕ ಹೀಗೆ ಅಪ್ರಕಾಶವಾಗಿರುವದು ಕಾರ್ಯವಲ್ಲ; ನದಿಯಲ್ಲಿ ಹರಿದುಹೋದ ನೀರು ತಿರುಗಿ ಬಾರದಂತೆ ನಿನ್ನ ಯವ್ವನವು ಕಳೆದರೆ ಬರಲಾರದು; ಪೂರ್ವದಲ್ಲಿ ಬ್ರಹ್ಮದೇವರು ರೂಪವತೀಯರಾದ ಸ್ತ್ರೀಯರನ್ನು ನಿರ್ಮಿಸಿ ಬೇಸತ್ತು ಕಡೆಗೆ ನಿನ್ನ ಸ್ವರೂಪವನ್ನು ನಿರ್ಮಿಸಿ ಸಂತೋಷಪಟ್ಟು 'ಇನ್ನು ಈ ಸ್ತ್ರೀಗಿಂತಲೂ ಅಧಿಕವಾದ ರೂಪವತಿಯಾದ ಸ್ತ್ರೀಯನ್ನು ನಿರ್ಮಿಸುವದಕ್ಕೆ ಸಾಧ್ಯವಲ್ಲಾ!' ಎಂದು ಸ್ತ್ರೀರತ್ನಗಳನ್ನು ನಿರ್ಮಿಸುವದನ್ನು ಸಾಕುಮಾಡಿದನು! ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳಲ್ಲಿಯೂ ನಿನಗೆ ಸಮಾನವಾದ ಸ್ತ್ರೀಯಿಲ್ಲ! ರೂಪು ಯವ್ವನ ಸೌಂದರ್ಯಾತಿಶಯಗಳಿಂದ ತನುಸೊಬಗುಳ್ಳ ನಿನ್ನನ್ನು ಕಂಡು ಸಾಕ್ಷಾತ್ ಬ್ರಹ್ಮದೇವನಾದರೂ ಬಿಡಲಾರನು! ಓ ಇಂದುಮುಖಿಯಾದ ಸೀತಾದೇವಿಯೆ, ನಿನ್ನ ಚರಣಾದಿ ಅವಯಗಳಲ್ಲಿ ನನ್ನ ದೃಷ್ಟಿಯೂ ಮನಸ್ಸೂ ಎರಕವಾಗಿವೆಯಲ್ಲದೆ ಅವನ್ನು ಬಿಟ್ಟು ತೊಲಗುವದಿಲ್ಲ! ಆದಕಾರಣ ನಿನ್ನ ಅಜ್ಞಾನವನ್ನು ಬಿಟ್ಟು ನನ್ನನ್ನು ವರಿಸಿ ನನಿಗೆ ಸ್ತ್ರೀಯಾಗಿ ನನ್ನ ಸ್ತ್ರೀಯರೆಲ್ಲರಲ್ಲಿಯೂ ನೀನೇ ಪಟ್ಟದ ರಾಣಿಯಾಗು! ನಾನು ನಾನಾದಿಕ್ಕುಗಳನ್ನು ಜಯಿಸಿ ತಂದ ರತ್ನರಾಸಿಗಳನ್ನೂ ಸಮಸ್ತ ವಸ್ತುಗಳನ್ನೂ ನಿನಗೆ ಕೊಡುವೆನು, ನಿನ್ನ ತಂದೆಯಾದ ಜನಕರಾಯನಿಗೆ ಅನೇಕ ರಾಜ್ಯ ವಸ್ತುವಾಹನಗಳನ್ನು ಕೊಡುವೆನು! ಲೋಕದಲ್ಲಿ ನನಿಗೆ ಸಮಾನನಾದ ಬಲವಂತನಿಲ್ಲ; ನನ್ನ ಸಾಮರ್ಥ್ಯವನ್ನು ಕೇಳು: ಯುದ್ಧರಂಗಕ್ಕೆ ಹೋದೆನಾದರೆ ನನಿಗೆ ಇದಿರಾಗಿ ನಿಂತು ಯುದ್ಧವನ್ನು ಮಾಡುವವನೇ ಇಲ್ಲ, ಇಂದ್ರಾದಿ ದೇವತೆಗಳಕೂಡೆ ಯುದ್ಧವನ್ನು ಮಾಡಿ ಶತ್ರುಸೇನೆಯೆಲ್ಲವನ್ನೂ ಮುರಿದೆನು! ನಿನಗೆ ಬೇಕಾದ ಭೂಷಣಗಳನ್ನು ಬೇಡಿಕೊ; ಏನನ್ನು ಬೇಡಿದರೂ ಕೊಡುವೆನು; ನನ್ನಿಂದ ಲಾಲಿಸಲ್ಪಟ್ಟಂಥಾ ನಿನ್ನ ಸಮಸ್ತ ಬಂಧುಗಳೂ ಸತ್ಕಾರವನ್ನು ಪಡೆಯಲಿ! ನನ್ನ ಪದವಿಯನ್ನೂ ನನ್ನ ಐಶ್ವರ್ಯವನ್ನೂ ನನ್ನ ಕೀರ್ತಿಯನ್ನೂ ನೋಡು! ಅಲ್ಪದಿನ ಬದುಕುವ ರಾಮನಿಂದ ನಿನಗಾಗುವ ಪ್ರಯೋಜನವೇನು! ಆತನ ಪರಾಕ್ರಮವು ಕುಂದಿತು; ಐಶ್ವರ್ಯವು ತೊಲಗಿ ವನವಾಸಿಯಾಗಿ ಭೂಶಯನಮಾಡಿಕೊಂ

ಡಿರುವ ರಾಮನು ಜೀವವಂತನಾಗಿದ್ದಾನೋ ಇಲ್ಲವೋ! ನೀನು ಆತನನ್ನು ಕಾಣುವದಕ್ಕಿಲ್ಲ, ಮೇಘಗಳಿಂದ ಮರೆಸಲ್ಪಟ್ಟ ಬೆಳದಿಂಗಳಂತೆ ನಿನಗಿನ್ನು ರಾಮದರ್ಶನವು ದುರ್ಘಟವು, ಷಂಡನಾದವನಿಗೆ ದೇವೇಂದ್ರನ ಪದವಿ ಅಘಟನೆಯಾದಂತೆ ರಾಮದರ್ಶನವು ನಿನಗೆ ಒದಗಲರಿಯದು; ಮನೋಹರವಾದ ಮುಗುಳುನಗೆಯೂ ಶೋಭನವಾದ ದಂತಗಳೂ ರಮಣೀಯವಾದ ಕಣ್ಣುಗಳೂ ಉಳ್ಳ ಸೀತಾದೇವಿಯೆ, ಗರುಡನು ಸರ್ಪವನ್ನು ಕಬಳವಾಗಿ ನುಂಗುವಂತೆ ನಿನ್ನ ನೋಟವು ನನ್ನ ಮನಸ್ಸನ್ನು ಕಬಳವಾಗಿ ನುಂಗುತಿದೆ! ಮಲಿನವಾದ ಬಟ್ಟೆಯನ್ನುಟ್ಟು ಅಲಂಕಾರವಿಲ್ಲದಿರುವ ನಿನ್ನನ್ನು ನೋಡಿದಮೇಲೆ ನನ್ನ ಸ್ತ್ರೀಯರಲ್ಲಿ ನನಗೆ ಇಚ್ಛೆ ಹುಟ್ಟಲಿಲ್ಲ, ನನ್ನ ಅಂತಃಪುರದಲ್ಲಿರುವ ಸ್ತ್ರೀಯರೆಲ್ಲರು ನೀನು ಹೇಳಿದಹಾಗೆ ಕೇಳಿಕೊಂಡಿರುವರು! ಲೋಕತ್ರಯವನ್ನೂ ನಿನ್ನ ವಶವಾಗಿ ಮಾಡುವೆನು! ಕುಬೇರನನ್ನು ಜಯಿಸಿತಂದ ಉತ್ತಮ ರತ್ನಗಳನ್ನು ನಿನಗೆ ಕೊಡುವೆನು! ರಾಮನು ತಪಸ್ಸಿನಿಂದಲಾದರೂ ಬಲದಿಂದಲಾದರೂ ಪರಾಕ್ರಮದಿಂದಲಾದರೂ ತೇಜಸ್ಸಿನಿಂದಲಾದರೂ ಕೀರ್ತಿಯಿಂದಲಾದರೂ ನನಗೆ ಸಮಾನವಾದವನಲ್ಲ! ಆದಕಾರಣ ನೀನು ನನ್ನಿಂದ ಸನ್ಮಾನವನ್ನು ಪಡೆದು ನಿನ್ನ ಬಂಧುಗಳನ್ನು ಸನ್ಮಾನಮಾಡು! ಪುಷ್ಪಿತವಾದ ಮರಗಳೂ ಮನೋಹರವಾದ ಲತೆಗಳೂ ಉಂಟಾಗಿರುವ ಈ ವನದಲ್ಲಿ ಸರ್ವಾಭರಣ ಭೂಷಿತೆಯಾಗಿ ನನ್ನೊಡನೆ ರಮಿಸಿಕೊಂಡು ಸುಖದಲ್ಲಿರು'' ಎಂದು ಒಡಂಬಡಿಕೆಯನ್ನು ಹೇಳುತಿದ್ದನು.

---

## ೨೧ ನೇ ಅಧ್ಯಾಯ.

## ಸೀತಾದೇವಿಯು ರಾವಣನನ್ನು ತಿರಸ್ಕರಿಸಿದ್ದು.

ಈಪ್ರಕಾರದಲ್ಲಿ ರಾವಣನು ಮದನಬಾಣಕ್ಕೊಳಗಾಗಿ ಸೀತಾದೇವಿಯನ್ನೊಡಂಬಡಿಸುತ್ತಿರಲು ಕ್ರೂರಕರ್ಮಿಯಾದ ಆತನ ಮಾತನ್ನು ಕೇಳಿ ಸೀತಾದೇವಿಯು ಅಧಿಕವಾಗಿ ಕಂಗೆಟ್ಟು ತನ್ನ ಪತಿಯಾದ ಶ್ರೀರಾಮನನ್ನು ಧ್ಯಾನಮಾಡುತ ಪತಿವ್ರತೆಯಾದವಳು ಪರಪುರುಷನಕೂಡೆ ಮಾತನಾಡುವಲ್ಲಿ ಒಂದು ತೃಣವನ್ನು ಕೈಯಲ್ಲಿ ತೆಗೆದುಕೊಂಡು ಆ ತೃಣದಕೂಡೆ ಮಾತನಾಡುವ ಭಾವನೆಯಿಂದ ಮಾತನಾಡಬೇಕಲ್ಲದೆ ಪರಪುರುಷನಿಗೆದಿರಾಗಿ ಮುಖಕೊಟ್ಟು ಪ್ರತ್ಯಕ್ಷವಾಗಿ ಮಾತನಾಡಬಾರದೆಂಬ ಧರ್ಮಶಾಸ್ತ್ರವನ್ನು ಬಲ್ಲವಳಾದ್ದರಿಂದ ಕೈಯಲ್ಲಿ ಒಂದು ತೃಣವನ್ನು ಹಿಡಿದುಕೊಂಡು ರಾವಣನಿಗೆ ಹಿಂದು ಮುಂದಾಗಿ ದೈನ್ಯಭಾವದಿಂದ ಮೆಲ್ಲನೆ ''ಎಲೇ ರಾಕ್ಷಸತೃಣವೆ, ನೀನು ನನ್ನಲ್ಲಿ ಮನಸ್ಸಿಡಬೇಡ, ನಿನ್ನ ಸ್ತ್ರೀಯರಲ್ಲಿ ಅನುಕೂಲವಾಗಿರು, ಪಾಪಾತ್ಮನಾದವನು ಪುಣ್ಯಲೋಕವನ್ನು ಬಯಸುವಂತೆ ನನ್ನನ್ನು ಬಯಸುವದು ಕಾರ್ಯವಲ್ಲ, ನಾನು ಸತ್ಕುಲದಲ್ಲಿ ಜನಿಸಿದವಳು, ಸತ್ಕುಲದಲ್ಲಿ ಜನಿಸಿದ ಶ್ರೀರಾಮನ ಪಟ್ಟದ ರಾಣಿಯು, ಅಂಥಾ ನಾನು ಲೋಕನಿಂದಿತವಾದ ಕಾರ್ಯಕ್ಕೊಳಗಾಗಿ ನಿನಗೆ ಅನುಕೂಲವಾಗುವವಳಲ್ಲ, ನೀನು ಸನ್ಮಾರ್ಗವನ್ನು ವಿಚಾರಿಸಿ ಸತ್ಪುರುಷರ ಮಾರ್ಗದಲ್ಲಿ ನಡೆಯಬೇಕಲ್ಲದೆ ದುರಾಚಾರವನ್ನು ಮಾಡುವದು ಉಚಿತವಲ್ಲ, ನೀನು ವಿವೇಕಿಯಾದರೆ ನಿನ್ನ ಮಾನವನ್ನು ರಕ್ಷಿಸುವ ಮರ್ಯಾದೆಯಲ್ಲಿ ಪರರ ವಧುಗಳನ್ನು ಹಾನಿಬಾರದಂತೆ ರಕ್ಷಿಸಬೇಕೆಂಬುದನ್ನು ವಿಚಾರಿಸಿ ನಿನ್ನ ಸ್ತ್ರೀಯರಲ್ಲಿ ಸಂತುಷ್ಟನಾಗಿರು! ಪರಸ್ತ್ರೀಯರಲ್ಲಿ ಆಸಕ್ತಿಯುಳ್ಳವರು ಲೋಕದಲ್ಲಿ ನಿಂದೆಯನ್ನು ಪಡೆದು ಯಶಸ್ಸನ್ನು ಕಳಕೊಳ್ಳುವರು! ಲೋಕದಲ್ಲಿ ಸತ್ಪುರುಷರಿಲ್ಲವೇ! ಅವರನ್ನು ನೋಡಿಯಾದರೂ ಕೇಳಿಯಾದರೂ ಸದಾಚಾರದಲ್ಲಿ ನಡೆಯಬೇಕು, ಮಹಾತ್ಮರಾದ ಹಿರಿಯರ ಹಿತವಚನಗಳನ್ನು ಕೇಳು, ವೃಥಾ ಯಾತಕ್ಕೆ ಸಮಸ್ತ ರಾಕ್ಷಸರಿಗೂ ವಿಪತ್ತು ಬರುವಂತೆ ಯತ್ನ ಮಾಡುತಿದ್ದೀ! ಅರಸನು ದುರ್ನೀತಿಯಲ್ಲಿ ನಡೆದರೆ ಸಮಸ್ತ ಐಶ್ವರ್ಯಗಳಿಂದ ಪರಿಪೂರ್ಣವಾದ ಪಟ್ಟಣ ದುರ್ಗಸಹಿತವಾದ ರಾಜ್ಯವು ಲಯವನ್ನೈದುವದು, ನಿನ್ನ ದುರ್ನೀತಿಯಿಂದ ಸಮಸ್ತ ಧನಧಾನ್ಯಗಳಿಂದ ಪರಿಪೂರ್ಣವಾದ ನಿನ್ನ ಐಶ್ವರ್ಯವು ಕೆಡುವುದು; ಲೋಕದಲ್ಲಿ ದುರ್ಜನನಾದವನು ಕೆಟ್ಟರೆ ಸಮಸ್ತ ಪ್ರಾಣಿಗಳೂ ತನ್ನ

ದುರ್ನೀತಿಯಿಂದ ತಾನೇ ಕೆಟ್ಟನೆಂದು ಸಂತೋಷಪಡುವರು, ನೀನು ಈ ದುರ್ನೀತಿಯಿಂದ ಕೆಟ್ಟೆಯಾದರೆ ಸಮಸ್ತ ಪ್ರಾಣಿಗಳೂ 'ದುರ್ನೀತಿಯಲ್ಲಿ ನಡೆದ ರಾವಣನು ತನ್ನ ಕೃತ್ಯದಿಂದ ತಾನೇ ಕೆಟ್ಟನು' ಎಂದು ಸಂತೋಷಪಡುವರು ! ನೀನು ವಸ್ತ್ರಾಭರಣ ರತ್ನಾದಿ ವಸ್ತುಗಳನ್ನು ಕೊಟ್ಟು ನನ್ನನ್ನು ವಶಮಾಡಿಕೊಳ್ಳಕೂಡುವದೆಂದೆಣಿಸಬೇಡ ; ಸೂರ್ಯಪ್ರಭೆಯು ಸೂರ್ಯನನ್ನು ಬಿಟ್ಟಿರದಂತೆ ನಾನು ಶ್ರೀರಾಮನನ್ನು ಬಿಟ್ಟಿರುವವಳಲ್ಲ ! ನಾನು ಆತನಿಗೆ ಐಕ್ಯವಾದವಳು ; ಮತ್ತೊಬ್ಬರಿಗೆ ಐಕ್ಯವಾಗೆನು ! ನಾನು ಸಮಸ್ತ ಭೂಮಂಡಲಾಧಿಪತಿಯಾದ ಶ್ರೀರಾಮನ ಪಟ್ಟದ ರಾಣಿಯಲ್ಲದೆ ಮತ್ತೊಬ್ಬಳಲ್ಲ ! ಮಹಾತ್ಮನಾದ ಆತನ ಪರಾಕ್ರಮವನ್ನು ನೀನು ಬಲ್ಲೆ ; ವನಾಂತರದಲ್ಲಿ ಮದ್ದಾನೆಯನ್ನು ಕೂಡಿದ ಹೆಣ್ಣಾನೆಯನ್ನು ಮೋಸದಿಂದಿಡಿಯುವಹಾಗೆ ನನ್ನನ್ನು ಹಿಡಿತಂದೆ ; ನೀನು ನಿನ್ನ ಪ್ರಾಣಗಳನ್ನು ರಕ್ಷಿಸಿಕೊಳ್ಳಬೇಕಾದ ಪಕ್ಷದಲ್ಲಿ ಶರಣಾಗತರಕ್ಷಕನಾಗಿ ಧರ್ಮಜ್ಞನಾಗಿ ಸತ್ಯಸಂಧನಾದ ಶ್ರೀರಾಮನಕೂಡೆ ಸ್ನೇಹವನ್ನು ಮಾಡುವದಕ್ಕೆ ತಕ್ಕ ಯತ್ನವನ್ನು ಹುಡುಕಿ ನನ್ನನ್ನು ಆತನ ವಶಕ್ಕೆ ಕಳುಹಿಸುವ ಯೋಚನೆಯನ್ನು ಮಾಡು, ಹಾಗೆ ಮಾಡುವ ಪಕ್ಷದಲ್ಲಿ ಮುಂದೆ ನಿನಗೆ ಲೇಸಾಗುವದು, ಅಲ್ಲದಿದ್ದರೆ ನಿನಗೆ ವ್ಯಥೆ ತಪ್ಪದು ! ದೇವೇಂದ್ರನ ವಜ್ರಾಯುಧವನ್ನಾದರೂ ತಪ್ಪಿಸಿಕೊಳ್ಳಬಹುದು ; ಕಾಲಯಮನನ್ನಾದರೂ ತಡೆಯಬಹುದು ; ಶ್ರೀರಾಮನು ಕೋಪಿಸಿದರೆ ಆತನಿಂದ ತಪ್ಪಿಸಿಕೊಳ್ಳುವದಕ್ಕೆ ಶಕ್ಯವಲ್ಲ ! ದೇವೇಂದ್ರನಿಂದ ಬಿಡಲ್ಪಟ್ಟ ಅತಿಭಯಂಕರವಾದ ಸಿಡಿಲ ಧ್ವನಿಯಂತೆ ಅತಿಘೋರವಾದ ಕೋದಂಡ ಧ್ವನಿಯನ್ನು ಕೇಳುವೆ ; ಶ್ರೀರಾಮಲಕ್ಷ್ಮಣರ ನಾಮಾಂಕಿತವುಳ್ಳ ಅಂಬುಗಳು ನಿನ್ನ ಮೇಲೆ ಬೀಳುವವಲ್ಲದೆ ತಪ್ಪಿಹೋಗವು ; ಶ್ರೀರಾಮನ ಬಾಣಗಳು ಗಿರಿ ಸಮೇತವಾದ ನಿನ್ನ ಈ ಲಂಕಾಪಟ್ಟಣದಲ್ಲಿರುವ ಸಮಸ್ತ ರಾಕ್ಷಸರನ್ನೂ ಕೊಲ್ಲದೇ ಬಿಡವು, ಆತನು ವಾಮನಾವತಾರದಲ್ಲಿ ಅವತರಿಸಿದ ಆದಿಪುರುಷನಾದ ನಾರಾಯಣನು ಬಲಿಚಕ್ರವರ್ತಿಯನ್ನು ಜಯಿಸಿ ಆತನ ರಾಜ್ಯಲಕ್ಷ್ಮಿಯನ್ನಪಹರಿಸಿದಂತೆ ನಿನ್ನನ್ನು ಜಯಿಸಿ ಸಮಸ್ತ ರಾಕ್ಷಸರ ಐಶ್ವರ್ಯವನ್ನೂ ಅಪಹರಿಸಲುಳ್ಳವನು ; ಜನಸ್ಥಾನದಲ್ಲಿ ಸಮಸ್ತ ರಾಕ್ಷಸಬಲವೂ ಆತನಿಂದ ಹತವಾದುದನ್ನು ಕಂಡು ಆತನ ಕೂಡಿ ಪ್ರತಿಕರಿಸಿ ಯುದ್ಧವನ್ನು ಮಾಡುವದಕ್ಕೆ ಶಕ್ತನಲ್ಲದೆ ಇಂಥಾ ಕೃತ್ಯವನ್ನು ಮಾಡಿದೆ ; ಪುರುಷೋತ್ತಮರಾದ ಶ್ರೀರಾಮಲಕ್ಷ್ಮಣರಿಲ್ಲದ ಸಮಯದಲ್ಲಿ ಮೋಸಮಾಡಿ ನನ್ನನ್ನೆತ್ತಿಕ್ಕೊಂಡುಬಂದೆ ! ಎಲೇ ರಾಕ್ಷಸಾಧಮನೆ, ಹುಲಿಗಳಮುಂದೆ ಚತುಷ್ಪಾದಿಗಳು ನಿಲ್ಲಲಾರವು ; ನೀನು ಶ್ರೀರಾಮಲಕ್ಷ್ಮಣರ ಗಂಧಗಾಳಿಗಾದರೂ ನಿಲ್ಲಲಾರೆ ; ನಿನಗೆ ಅವರೊಡನೆ ಯುದ್ಧವು ಬಂದಲ್ಲಿ ದೇವೇಂದ್ರನಕೂಡೆ ಸೆಣೆಸಿದ ವೃತ್ರಾಸುರನ ಜಯದಂತೆ ಘಟಿಸುವದು, ನನ್ನ ಒಡೆಯನಾದ ಶ್ರೀರಾಮನು ಲಕ್ಷ್ಮಣ ಸಮೇತನಾಗಿ ಅಲ್ಪೋದಕವುಳ್ಳ ನದಿಗಳನ್ನು ಕಿರಣಗಳಿಂದ ಹೀರಿ ಒಣಗಿಸುವ ಸೂರ್ಯನಂತೆ ತನ್ನ ಶರಗಳಿಂದ ನಿನ್ನ ಪ್ರಾಣಗಳನ್ನಪಹರಿಸುವನು ; ನೀನು ಕುಬೇರನ ಗಂಧಮಾದನ ಪರ್ವತದಲ್ಲಿದ್ದರೂ ಸಮುದ್ರವನ್ನು ಹೊಕ್ಕರೂ ಸಿಡಿಲುಹೊಡೆದ ಮರದಂತೆ ಶ್ರೀರಾಮನ ಶರಹತಿಯನ್ನು ತಾಳಲಾರೆ ! ಆದಕಾರಣ ನನ್ನನ್ನು ಆತನ ವಶಕ್ಕೆ ಒಪ್ಪಿಸಿ ಆತನ ಶರಣು ಹೊಕ್ಕುವದು ನಿನಗೆ ಕಾರ್ಯವು" ಅಂದಳು.

---

## ೨೨ನೇ ಅಧ್ಯಾಯ.

### ರಾವಣನು ಸೀತೆಯನ್ನು ಹೆದರಿಸಿ ಹೋದದ್ದು.

ಆ ಬಳಿಕ ರಾವಣನು ಸೀತಾದೇವಿಯನ್ನು ನೋಡಿ "ಕಟಕಟಾ ! ಸ್ತ್ರೀಯರ ಸಾಹಸವನ್ನು ಏನೆಂದು ಹೇಳಲಿ ! ನಾನೆಷ್ಟು ಶಾಂತವಾಗಿ ಪ್ರಿಯವಚನಗಳನ್ನು ನುಡಿದರು ಅಷ್ಟು ಮೆಗ್ಗಳವಾಗಿ ನನ್ನನ್ನೇ ಜರಿದು ನುಡಿಯುತ್ತಿದ್ದೀ ; ನಿನ್ನ ನಿಮಿತ್ತವಾಗಿ ಹುಟ್ಟಿದ ಕಾಮಬುದ್ಧಿಯೆಂಬುದು ಓಡುತ್ತಿರುವ ಕುದುರೆಗಳನ್ನು ಸಾರಥಿಯು ತಡೆಯುವಂತೆ ನನ್ನ ಕೋಪವನ್ನು ತಡೆಯುತಲಿದೆ ; ಕಾಮನ ಚಾರಿತ್ರವ್ಯಾಮೋಹವು ಕುಟಿಲವು ; ಪುರುಷನು ಯಾವ ಸ್ತ್ರೀ

ಯಲ್ಲಿ ಮನಸಿಟ್ಟರೂ ಆ ಸ್ತ್ರೀಯಲ್ಲಿ ಮತ್ತು ಮತ್ತೂ ಕಾಮವು ಹೆಚ್ಚಿ ದಿನದಿನಕ್ಕೆ ಪ್ರೀತಿಯು ಹೆಚ್ಚುವದಲ್ಲದೆ ತಗ್ಗುವದಿಲ್ಲ, ಅದಕಾರಣ ನಾನು ನಿನ್ನನ್ನು ಕೊಲ್ಲದೆ ಇದ್ದೇನೆ ಕಪಟವ್ರತವುಳ್ಳವಳಾಗಿ ನನ್ನ ಕೂಡೆ ಆಡಬಾರದ ನಿಷ್ಠುರವಚನಗಳನ್ನು ನುಡಿಯುತಿದ್ದಿ, ನೀನಾಡುವ ಒಂದೊಂದು ನಿಷ್ಠುರವಚನಕ್ಕೂ ನಿನಗೆ ತಕ್ಕ ಆಜ್ಞೆಯನ್ನು ಮಾಡಬೇಕು, ನೀನು ಅತಿ ನಿಷ್ಠುರವಾದ ಕೊಲೆಗೆ ಯೋಗ್ಯವಾದವಳಲ್ಲ, ಮನ್ನಣೆಗೂ ಯೋಗ್ಯವಾದವಳಲ್ಲ!" ಎಂದು ನುಡಿದು ಅತ್ಯಂತ ಕೋಪಾಟೋಪದಿಂದ "ಮೊದಲು ನೀನು ವ್ರತವನ್ನು ಧರಿಸಿರುವದಾಗಿ ನುಡಿದದ್ದರಿಂದ ಇನ್ನು ಎರಡು ತಿಂಗಳ ಗಡುವು ಕೊಟ್ಟೆನು, ಆ ಎರಡು ತಿಂಗಳೊಳಗಾಗಿ ನನಿಗೆ ಅನುಕೂಲಳಾಗದಿದ್ದ ಪಕ್ಷದಲ್ಲಿ ಎರಡು ತಿಂಗಳು ತುಂಬಿದ ಮಾರನೇದಿನ ಪ್ರಾತಃಕಾಲದಲ್ಲಿ ನನ್ನ ಆಹಾರಾರ್ಥವಾಗಿ ನನ್ನ ಅರಮನಯ ಪಾಕಶಾಲೆಯಲ್ಲಿರುವ ಬಾಣಸಿಗಳ ಕೈಗೊಳಗಾಗುವೆ!" ಎಂದು ನುಡಿದನು.

ಆಗ ಸೀತಾದೇವಿಯು ಅತ್ಯಂತವಾಗಿ ಭಯಪಡಲು ರಾವಣನಕೂಡ ಬಂದ ಗಂಧರ್ವಸ್ತ್ರೀಯರು ಕಣ್ಣುಸನ್ನೆಗಳಿಂದಲೂ ಶಿರಃಕಂಪನಗಳಿಂದಲೂ ಕೈಸನ್ನೆಗಳಿಂದಲೂ ತುಟಿಗಳನ್ನು ಕಚ್ಚಿಕೊಂಡೂ ಆತನ ಕೂಡೆ ಎದುರು ಮಾತಾಡಬಾರದೆಂದು ಸಂತವಿಟ್ಟರು, ಪತಿವ್ರತಾಶಿರೋಮಣಿಯಾದ ಸೀತಾದೇವಿಯು ಸದ್ವರ್ತನದಿಂದ ರಾವಣನನ್ನು ಕುರಿತು "ನಿನ್ನ ಸಮೀಪದಲ್ಲಿ ನಿನ್ನ ಶ್ರೇಯಸ್ಸನ್ನು ಬಯಸಿ ಇಂಥಾ ದುರ್ಬುದ್ಧಿಹುಟ್ಟದಹಾಗೆ ಬೋಧಿಸುವಂಥಾವರ್‍ಯಾರೂಯಿಲ್ಲವೆ! ಇದ್ದಪಕ್ಷದಲ್ಲಿ ದೇವೇಂದ್ರನ ಪಟ್ಟದರಾಣಿಯಾದ ಶಚೀದೇವಿಯನ್ನು ಬಯಸುವಂತೆ ಸಾಕ್ಷಾತ್‌ಪರಮಪುರುಷನಾಗಿ ಧರ್ಮಾತ್ಮನಾದ ಶ್ರೀರಾಮನ ಪಟ್ಟದ ರಾಣಿಯಾದ ನನ್ನನ್ನು ಬಯಸುವೆಯೇ! ಸ್ವರ್ಗಮರ್ತ್ಯ ಪಾತಾಳಗಳಲ್ಲಿಯೂ ಮಹಾತ್ಮನಾದ ಆತನ ಸ್ತ್ರೀಯನ್ನು ನೀನು ಹೊರ್ತಾಗಿ ಮತ್ಯಾವ ಪುರುಷನೂ ಬಯಸನು; ನೀನು ಎಲ್ಲಿಗೆಹೋಗಿ ಈ ಪಾಪವನ್ನು ಕಳೆದುಕೊಳ್ಳುವೇ! ಶ್ರೀರಾಮನೆ ಅಂತರವೆತ್ತಣದು—ನಿನ್ನ ಅಂತರವೆತ್ತಣದು! ವನದಲ್ಲಿರುವ ಮದ್ದಾನೆಗೂ ಕ್ಷುದ್ರ ಮೃಗವಾದ ಮೊಲಕ್ಕೂ ತಾರತಮ್ಯವುಂಟಾಗಿರುವದು; ಮೊಲಕ್ಕೆ ಸಮಾನನಾದ ನೀನು ಮದ್ದಾನೆಗೆ ಸಮಾನನಾದ ಇಕ್ಷ್ವಾಕುನಾಥನಕೂಡೆ ವಿರೋಧವನ್ನು ಮಾಡುವದರಿಂದ ಲಜ್ಜೆಯನ್ನು ಬಿಟ್ಟದ್ದೀ; ನನ್ನನ್ನು ದೃಷ್ಟಿಯಿಟ್ಟು ನೋಡುವ ಕ್ರೂರವಾದ ಕಣ್ಣುಗಳುಳ್ಳ ನೀನು ಶ್ರೀರಾಮನ ದೃಷ್ಟಿಗೋಚರನಾದೆಯಾದರೆ ತಕ್ಷಣದಲ್ಲೇ ಭೂಮಿಯಮೇಲೆ ದೀರ್ಘನಿದ್ರೆಯನ್ನು ಮಾಡುವೆ! ಧರ್ಮಾತ್ಮನಾದ ದಶರಥರಾಯನ ಸೊಸೆಯಾಗಿ ಶ್ರೀರಾಮನ ಸ್ತ್ರೀಯಾದ ನನ್ನ ಕೂಡೆ ಸಂಭಾಷಣೆಮಾಡುವ ನಿನ್ನ ನಾಲಿಗೆ ಯಾಕೆ ಬೀಳಲಿಲ್ಲ! ಶ್ರೀರಾಮನ ಅಪ್ಪಣೆಯಿಲ್ಲದ್ದರಿಂದಲೂ ನನ್ನ ತಪಸ್ಸು ಕ್ಷಯವಾಗುವದೆಂಬ ಬುದ್ಧಿಯಿಂದಲೂ ನಿನ್ನನ್ನು ಮನ್ನಿಸಿದ್ದೇನೆ; ಅಲ್ಲದಪಕ್ಷದಲ್ಲಿ ನನ್ನ ದೃಷ್ಟಿಯಿಂದಲೇ ನಿನ್ನನ್ನು ಭಸ್ಮಮಾಡುವೆನು, ನೀನು ವನಾಂತರದಿಂದ ನನ್ನನ್ನು ಅಪಹರಿಸಿಕ್ಕೊಂಡು ಬಂದಾಗಲೆ ಬ್ರಹ್ಮದೇವರನ್ನು ನಿನ್ನ ಕೊಲೆಗಾಗಿ ಶ್ರೀರಾಮನನ್ನು ನಿರ್ಮಿಸಿದನೆಂದು ತಿಳಿಯಬಂತು; ಹಾಗಲ್ಲದಪಕ್ಷದಲ್ಲಿ ನಿನಗೆ ಈ ಬುದ್ಧಿ ಹುಟ್ಟಲಾರದು" ಎಂದು ನುಡಿದಳು.

ಆ ಮಾತನ್ನು ಕೇಳಿ ರಾವಣನು ಅತ್ಯಂತ ಕೋಪಾಟೋಪದಿಂದ ಕಣ್ಣುಗಳನ್ನು ತಿರುಗಿಸುತ ನಾಲಿಗೆಗಳನ್ನು ನೀಡುತ ಸಮುದ್ರಮಥನ ಮಾಡಿದಾಗ ವಿಷಗಳನ್ನು ಕಾರುತಿದ್ದ ಸರ್ಪರಾಜನಾದ ವಾಸುಕಿಯಂತೆ ನಿಟ್ಟುಸುರು ಬಿಡುತ ಸೀತಾದೇವಿಯನ್ನು ಕುರಿತು "ದುರ್ನೀತಿಸಂಪನ್ನೆಯಾದ ಸೀತಾದೇವಿಯೇ, ವಿನೀತನಲ್ಲದೆ ಅರ್ಥಹೀನನಾದ ರಾಮನನ್ನು ಕೊಂಡಾಡುತ ನನ್ನನ್ನು ಜರಿದು ನುಡಿಯುತಿದ್ದೀ, ಆದರೇನಾಯಿತು! ಸೂರ್ಯನು ತನ್ನ ಪ್ರಭೆಯಿಂದ ಅಂಧಕಾರವನ್ನು ನಾಶಮಾಡುವಂತೆ ನಾನು ನಿನ್ನನ್ನು ನಾಶಮಾಡುವೆನು" ಎಂದು ನುಡಿದು ಸೀತಾದೇವಿಗೆ ಕಾವಲಾಗಿದ್ದ ರಾಕ್ಷಸಸ್ತ್ರೀಯರನ್ನು ಕರೆದು "ಈಕೆಯು ಯಾವಪ್ರಕಾರದಲ್ಲಿ ನನಿಗೆ ಅನುಕೂಲವಾಗಿ ನನ್ನ ವಶವಾಗುವಳೋ ಆಪ್ರಕಾರದಲ್ಲಿ ಸಾಮ ದಾನ ಭೇದ ದಂಡಗಳೆಂಬ ಚತುರೋಪಾಯಗಳಿಂದಲೂ ಯತ್ನಮಾಡೀ" ಎಂದು ಆಜ್ಞಾಪಿಸಿದನು.

ಈ ಪ್ರಕಾರವಾಗಿ ರಾವಣನು ಒಂದು ಕಣ್ಣುಳ್ಳವಳು ಒಂದು ಕಿವಿಯುಳ್ಳವಳು ಕಿವಿಯನ್ನೇ ಮುಸುಕಿಟ್ಟು ಕೊಂಡವಳು ಗೋವಿನ ಕಿವಿಯಂತೆ ಕಿವಿಯುಳ್ಳವಳು ಆನೆಯ ಕಿವಿಯಂತೆ ಕಿವಿಯುಳ್ಳವಳು ಚಲಿಸುವ ಕಿವಿಗಳುಳ್ಳವಳು ಆನೆಯ ಕಾಲುಗಳಂತೆ ಕಾಲುಗಳುಳ್ಳವಳು ಕುದುರೆಯೋಪಾದಿಯಲ್ಲಿ ಕಾಲುಗಳುಳ್ಳವಳು ಹಸುವಿನ ಕಾಲಂತೆ ಕಾಲುಳ್ಳವಳು ಮೊನಚೆಯಾದ ಕಾಲುಳ್ಳವಳು ಅತ್ಯಂತ ಘನಗಾತ್ರವಾದ ಕಾಲುಳ್ಳವಳು ಕಾಲಿಲ್ಲದವಳು ಅತಿಗಾತ್ರವಾದ ಕೊರಳುಳ್ಳವಳು ಹೊಟ್ಟೆಯು ಗಾತ್ರವಾಗಿಯೂ ಸ್ತನಗಳು ಗಾತ್ರವಾಗಿಯೂ ಬಲವಾದ ಶರೀರವುಳ್ಳವಳು ಉದ್ದವಾದ ಮುಖವೂ ನಾಲಿಗೆಯೂ ಉಳ್ಳವಳು ಮೂಗಿಲ್ಲದವಳು ಸಿಂಹದ ಮುಖದಂತೆ ಮುಖವುಳ್ಳವಳು ಹಂದಿ ಮುಖವುಳ್ಳವಳು ಮೊದಲಾದ ಆ ರಾಕ್ಷಸ ಸ್ತ್ರೀಯರಿಗೆ ಸೀತಾದೇವಿಯನ್ನು ಬೆದರಿಸಲು ಆಜ್ಞಾಪಿಸಿ ತಾನೂ ಬಹಳವಾಗಿ ಬೆದರಿಸಿ ಆ ರಾಕ್ಷಸ ಸ್ತ್ರೀಯರು ನಾನಾಪ್ರಕಾರವಾದ ವಿಕಾರಚೇಷ್ಟೆಗಳಿಂದ ಹೆದರಿಸುವದನ್ನು ನೋಡಿ ಧಾನ್ಯಮಾಲಿನೀ ಎಂಬ ರಾಕ್ಷಸ ಸ್ತ್ರೀಯು ನುಡಿದ ಮಾತನ್ನು ಕೇಳಿ ಮುಗುಳು ನಗೆಯಿಂದ ಆ ರಾಕ್ಷಸ ಸ್ತ್ರೀಯನ್ನು ಕೂಡಹಿಕೊಂಡು ಅಲ್ಲಿಂದ ತಿರುಗಿ ಕೋಪಾಟೋಪದಿಂದ ಭೂಮಿಯನ್ನು ನಡುಗಿಸುತ ತನ್ನ ಅಂತಃಪುರದ ಸ್ತ್ರೀಯರನ್ನು ಕೂಡಿ ಸೂರ್ಯಪ್ರಭೆಯಂತೆ ಪ್ರಕಾಶಿಸುತಿದ್ದ ತನ್ನ ಅರಮನೆಯನ್ನು ಪ್ರವೇಶಿಸಿದನು.

## ೨೩ನೇ ಅಧ್ಯಾಯ.

### ರಾಕ್ಷಸ ಸ್ತ್ರೀಯರು ಸೀತಾದೇವಿಗೆ ಬಡಂಬಡಿಕೆ ಹೇಳಿದ್ದು.

ಆ ಬಳಿಕ ರಾಕ್ಷಸ ಸ್ತ್ರೀಯರು ಸೀತಾದೇವಿಯ ಸಮೀಪಕ್ಕೆ ಬಂದು ಹೆದರಿಸಿ ಅತಿಕೋಪದಿಂದ ನಿಷ್ಠುರವಚನಗಳನ್ನು ನುಡಿಯುತಿದ್ದರು—ಅದೆಂತೆನೆ: ಆ ರಾಕ್ಷಸ ಸ್ತ್ರೀಯರಲ್ಲಿ ಏಕಜಡೆಯೆಂಬ ರಾಕ್ಷಸ ಸ್ತ್ರೀಯು ಸೀತಾದೇವಿಯನ್ನು ಕರೆದು ಅತ್ಯಂತವಾಗಿ ಕೋಪಿಸಿಕೊಂಡು "ಎಲೈ ಸೀತಾದೇವಿಯೆ, ರಾವಣನು ನಾಡಾಡಿಯ ಪುರುಷನೆಂದು ತಿಳಿಯಬೇಡ; ಆತನು ಮಹಾತ್ಮನು; ಹಿರಣ್ಯಗರ್ಭಾದಿ ಆರುಮಂದಿ ಬ್ರಹ್ಮರಲ್ಲಿ ಪುಲಸ್ತ್ಯಬ್ರಹ್ಮನೆಂಬವನು ನಾಲ್ಕನೇಯವನು; ಪುಲಸ್ತ್ಯಬ್ರಹ್ಮನ ಮಾನಸಪುತ್ರನು ವಿಶ್ರವಸುವೆಂಬ ಋಷೀಶ್ವರನು, ವಿಶ್ರವಸುವಿನ ಮಗನು ರಾವಣಾಸುರನು; ಅಂಥಾವನಿಗೆ ಅನುಕೂಲವಾಗದೆ ಏನುಕಾರಣ ಭ್ರಮೆಪಟ್ಟು ಕೆಡುತಿದ್ದೀ! ರಾವಣಾಸುರನಿಗೆ ಸ್ತ್ರೀಯಾಗು, ನನ್ನ ಮಾತನ್ನು ಲ್ಲಂಘಿಸಬೇಡ" ಎಂದು ನುಡಿದಳು.

ಆಮೇಲೆ ಹರಿಜಡೆಯೆಂಬ ರಾಕ್ಷಸಿಯು ಅತ್ಯಂತ ಕೋಪಾತಿಶಯದಿಂದ ಬೆಕ್ಕಿನ ಕಣ್ಣುಗಳಹಾಗಿದ್ದ ತನ್ನ ಕಣ್ಣುಗಳನ್ನು ತಿರುಗಿಸುತ "ಎಲೈ ಸೀತಾದೇವಿಯೆ, ರಾವಣನ ಮಹಿಮೆಯನ್ನು ನೀನರಿತವಳಲ್ಲ; ಈತನೊಬ್ಬನೇ ಮೂವತ್ತುಮೂರುಕೋಟಿ ದೇವತೆಗಳನ್ನೂ ದೇವೇಂದ್ರನನ್ನೂ ಜಯಿಸಿದನು; ನಾಗ ಗಂಧರ್ವಾದಿಗಳೊಬ್ಬರೂ ಈತನ ಕೂಡೆ ಯುದ್ಧಕ್ಕೆ ನಿಲ್ಲಲಾರರು; ರಣರಂಗದಲ್ಲಿ ಶತ್ರುಗಳಿಗೆ ಬೆನ್ನನ್ನು ತೋರಿಸಿದವನಲ್ಲ; ಅಂಥಾವನು ತನ್ನ ಅಂತಃಪುರದಲ್ಲಿರುವ ಸಮಸ್ತ ಸ್ತ್ರೀಯರನ್ನೂ ಬಿಟ್ಟು ನಿನ್ನ ಸಮೀಪಕ್ಕೆ ಬಂದಮೇಲೆ ಆತನ ಮಾತನ್ನು ಮೀರದೆ ಆತನಿಗೆ ಸ್ತ್ರೀಯಾದರೆ ನೀನು ಸಮಸ್ತ ಸ್ತ್ರೀಯರನ್ನೂ ಆಳುವವಳಾಗಿ ಸಮಸ್ತ ಭೋಗಗಳನ್ನೂ ಅನುಭವಿಸಿಕೊಂಡು ಅನೇಕ ದಿವ್ಯಾಂಬರಾನುಲೇಪನಗಳಿಂದ ದೇಹಾಲಂಕಾರವನ್ನು ಮಾಡಿಕೊಂಡು ದಿವ್ಯಸುಖವನ್ನನುಭವಿಸಬಹುದು; ತ್ರಿಕೂಟಾಚಲದಲ್ಲಿರುವ ವೃಕ್ಷಗಳು ಈತನಮೇಲೆ ನಿತ್ಯದಲ್ಲೂ ಪುಷ್ಪವೃಷ್ಟಿಯನ್ನು ಕರೆಯುವವು; ಈತನು ಇಚ್ಛೈಸಿದಾಗ ಮೇಘಗಳು ಮಳೆಯನ್ನು ಸುರಿಯುವವು; ಇಂಥಾ ಸಮಸ್ತ ಭೋಗೈಶ್ವರ್ಯಸಂಪನ್ನನಾದ ರಾವಣನಿಗೆ ನೀನು ಏನುಕಾರಣದಿಂದ ಸ್ತ್ರೀಯಾಗಲೊಲ್ಲೆ! ಇನ್ನು ಶ್ರೀರಾಮನನ್ನು ಕುರಿತು ಹಂಬಲಿಸುವದನ್ನು ಬಿಡು; ನಿನಗಿನ್ನು ಆತನ ಸಂಬಂಧವಾಗಲಾರದು; ನನ್ನ ಮಾತನ್ನು ಹಿತವೆಂದು ಕೇಳಿ ನಿನ್ನ ಮನಸ್ಸನ್ನು ಸ್ವಸ್ತಮಾಡಿಕೊ" ಎಂದು ಬೋಧಿಸಿದಳು.

೨೪ ನೇ ಅಧ್ಯಾಯ

ರಾಕ್ಷಸಸ್ತ್ರೀಯರು ಸೀತಾದೇವಿಯನ್ನು ಭಕ್ಷಿಸಲು ಪಕ್ರಮಿಸಿದ್ದು.

ಮತ್ತು ಅತ್ಯಂತ ಭಯಂಕರವಾದ ಮುಖವುಳ್ಳ ರಾಕ್ಷಸ ಸ್ತ್ರೀಯರು ಅತ್ಯಂತ ನಿಷ್ಠುರವಾದ ವಚನಗಳಿಂದ " ಎಲೈ ಸೀತಾದೇವಿಯೆ, ರಾವಣನ ಅಂತಃಪುರದಲ್ಲಿ ಸರ್ವಾಭರಣಭೂಷಿತೆಯಾಗಿ ಸಮಸ್ತ ಭೋಗಗಳನ್ನನುಭವಿಸಿಕೊಂಡಿರುವದಕ್ಕೆ ಯಾಕೆ ಮನಸ್ಸು ಬಾರದು! ನೀನು ಮನುಷ್ಯಸ್ತ್ರೀಯಾದರೂ ಮನುಷ್ಯನಿಗೆ ಮಾತ್ರವೇ ಸ್ತ್ರೀಯಾಗಿರಬೇಕೆಂಬುವದೇನು! ಸಮಸ್ತ ಐಶ್ವರ್ಯಸಂಪನ್ನನಾದ ರಾವಣನಿಗೆ ಸ್ತ್ರೀಯಾಗು! ಶ್ರೀರಾಮನ ಜ್ಞಾಪಕವನ್ನು ಬಿಡು; ಇನ್ನು ನಿನಗೆ ಆತನ ದರ್ಶನವಾಗುವದೆಂಬ ಆಶೆಯು ಬೇಡ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಲೋಕತ್ರಯಗಳಲ್ಲಿಯೂ ಇರುವ ಐಶ್ವರ್ಯವನ್ನು ಅನುಭವಿಸುವ ರಾವಣನನ್ನು ಅಂಗೀಕರಿಸಿ ಸುಖದಲ್ಲಿರು; ರಾಜ್ಯಭ್ರಷ್ಟನಾಗಿ ಕಂಗೆಟ್ಟು ದಾರಿದ್ರ್ಯಾವಸ್ಥೆಯಲ್ಲಿರುವ ಶ್ರೀರಾಮನಿಂದ ನಿನಗೇನು ಕಾರ್ಯವು" ಎಂದು ನುಡಿದರು.

ಆ ಮಾತುಗಳನ್ನು ಕೇಳಿ ಸೀತಾದೇವಿಯು ದುಃಖಾತಿಶಯದಿಂದ ಕಣ್ಣುಗಳು ನೀರುತುಂಬಲು ಅವರನ್ನು ಕುರಿತು " ಎಲೈ ರಾಕ್ಷಸ ಸ್ತ್ರೀಯರುಗಳಿರಾ, ನೀವೆಲ್ಲರು ಕೂಡಿ ಇಂಥಾ ಲೋಕವಿರುದ್ಧವಾದ ಮಾತನ್ನಾಡಬಹುದೇ! ನೀವು ಆಡುವ ಮಾತುಗಳು ನನ್ನ ಮನಸ್ಸಿಗೆ ಸಮ್ಮತವಲ್ಲ; ಮನುಷ್ಯಸ್ತ್ರೀಯಾದವಳು ರಾಕ್ಷಸನಿಗೆ ಹ್ಯಾಗೆ ಸ್ತ್ರೀಯಾದಾಳು! ಅದು ಕೂಡದು; ಬೇಕಾದರೆ ನೀವೆಲ್ಲರು ನನ್ನನ್ನು ಭಕ್ಷಣ ಮಾಡಿಕೊಳ್ಳಿ; ಲೋಕದಲ್ಲಿ ಸ್ತ್ರೀಯರಿಗೆ ಪುರುಷನು ರಾಜ್ಯಭ್ರಷ್ಟನಾದರೂ ದೀನನಾದರೂ ಹೀನನಾದರೂ ಆತನು ದೇವತಾಸ್ವರೂಪವಲ್ಲದೆ ಮತ್ತೊಂದಲ್ಲ; ಸೂರ್ಯಪ್ರಭೆಯು ಸೂರ್ಯನಲ್ಲಿಯೇ ಏಕವಾಗಿರುವಂತೆ ನಾನು ಶ್ರೀರಾಮನಲ್ಲಿಯೇ ಧ್ಯಾನಾವಧಾನವುಳ್ಳವಳಲ್ಲದೆ ಮತ್ತೊಂದು ವಸ್ತುವಿನಲ್ಲಿ ಮನಸ್ಸುಳ್ಳವಳಲ್ಲ; ಶಚೀದೇವಿಯು ದೇವೇಂದ್ರನಲ್ಲಿ ಅನುಕೂಲವಾಗಿರುವಂತೆಯೂ ಅರುಂಧತಿಯು ವಶಿಷ್ಠ ಮುನೀಶ್ವರನಲ್ಲಿ ಅನುಕೂಲವಾಗಿರುವಂತೆಯೂ ರೋಹಿಣೀದೇವಿಯು ಚಂದ್ರನಲ್ಲಿಯೂ ಲೋಪಾಮುದ್ರೆಯು ಅಗಸ್ತ್ಯ ಮುನಿಯಲ್ಲಿಯೂ ಸಾವಿತ್ರಿಯೆಂಬ ಪತಿವ್ರತೆಯು ತನ್ನ ಪತಿಯಾದ ಸತ್ಯವಂತನಲ್ಲಿಯೂ ಶ್ರೀಮತಿಯು ಕಪಿಲ ಮಹಾಮುನಿಯಲ್ಲಿಯೂ ಮದಯಂತಿಯು ಸೌದಾಸನಲ್ಲಿಯೂ ದಮಯಂತಿಯು ನಿಷಧದೇಶದ ರಾಯನಾದ ನಳಚಕ್ರವರ್ತಿಯಲ್ಲಿಯೂ ಅನುಕೂಲವಾಗಿದ್ದಂತೆ ನಾನು ಪರಮಪುರುಷನಾದ ಶ್ರೀರಾಮನಲ್ಲಿಯೇ ಅನುಕೂಲವಾಗಿರುವ ಪತಿವ್ರತೆಯಲ್ಲದೆ ಮತ್ತೊಬ್ಬಳಲ್ಲ" ಎಂದು ನುಡಿದಳು

ಆ ಮಾತನ್ನು ಕೇಳಿ ಆ ರಾಕ್ಷಸ ಸ್ತ್ರೀಯರು ಸೀತಾದೇವಿಯನ್ನು ಹೆದರಿಸಿ ನಿಷ್ಠುರ ವಚನಗಳನ್ನು ನುಡಿಯುತಿದ್ದರು. ಆ ಸಮಯದಲ್ಲಿ ಶಿಂಶುಪ ವೃಕ್ಷವನ್ನೇರಿ ಕೊಂಬುಗಳ ಮಧ್ಯದಲ್ಲಿ ಮರೆಯಾಗಿದ್ದ ಹನುಮಂತನು ಸೀತಾದೇವಿಯ ಕೂಡೆ ನಿಷ್ಠುರ ವಚನಗಳನ್ನು ನುಡಿಯುತಿದ್ದ ಆ ರಾಕ್ಷಸ ಸ್ತ್ರೀಯರನ್ನು ನೋಡುತಿದ್ದನು. ಅವರು ತಮ್ಮ ಲಂಬಾಯಮಾನವಾದ ತುಟಿಗಳನ್ನು ಉದ್ದವಾದ ನಾಲಿಗೆಗಳಿಂದ ನೆಕ್ಕಿಕೊಳ್ಳುತ್ತ ಪರಶು ಕೊಡಲಿಗಳನ್ನು ಮೇಲಕ್ಕೆತ್ತಿ ಹೆದರಿಸುತ " ನಾವೆಷ್ಟು ಹೆದರಿಸಿದರೂ ಈಕೆಯು ರಾವಣನಿಗೆ ಅನುಕೂಲವಾಗುವವಳಲ್ಲ" ಎಂದು ನುಡಿಯುತ ಬಹು ನಿಷ್ಠುರದಿಂದ ಸೀತಾದೇವಿಯನ್ನು ಸುತ್ತಿಕೊಂಡು ಅತ್ಯಂತ ದುಃಖಾಕ್ರಾಂತೆಯಾಗಿ ತಮ್ಮ ಮಧ್ಯದಲ್ಲಿ ಹನುಮಂತನಿದ್ದ ಶಿಂಶುಪ ವೃಕ್ಷದಡಿಯಲ್ಲಿ ಮಲಿನಾಂಬರವನ್ನುಟ್ಟು ಮುಖಕಾಂತಿಗುಂದಿ ಹಂಬಲಿಸುತಿದ್ದ ಆ ದೇವಿಯನ್ನು ಹೆದರಿಸುತಿದ್ದರು. ಆ ಸಮಯದಲ್ಲಿ ವಿನತೆಯೆಂಬ ಭಯಂಕರವಾದ ಒಬ್ಬ ರಾಕ್ಷಸ ಸ್ತ್ರೀಯು ಸೀತಾದೇವಿಯನ್ನು ನೋಡಿ " ಎಲೈ ಸೀತಾದೇವಿಯೇ ಕೇಳು; ನೀನು ನಿನ್ನ ಪತಿಯಾದ ಶ್ರೀರಾಮನಲ್ಲಿ ಭಕ್ತಿಯುಂಟೆಂಬುದನ್ನು ತೋರಿಸಿದೆ; ಆ ಭಕ್ತಿಯನ್ನು ಸಾಕುಮಾಡು; ಲೋಕದಲ್ಲಿ ಅತಿ

ಸ್ನೇಹವೆಂಬುದು ದುಃಖಸಾಧನವಾಗುವುದು, ನೀನು ಹೇಳಿದ ಪತಿವ್ರತಾ ಧರ್ಮವು ಮನುಷ್ಯರಿಗೆ ಧರ್ಮವಲ್ಲದೆ ಉಳಿದವರಿಗೆ ಧರ್ಮವಲ್ಲ, ನೀನು ಹೇಳಿದ ಮಾತುಗಳಿಂದ ನಮಗೆ ಮಹಾಸಂತೋಷವಾಯಿತು; ಆ ಮಾತು ಹಾಗಿರಲಿ! ಎಲೈ ಸೀತಾದೇವಿಯೆ, ನಿನಗೊಂದು ಹಿತವಾದ ಮಾತನ್ನು ಹೇಳುತ್ತೇನೆ ಕೇಳು: ದೇವೇಂದ್ರನು ಸಮಸ್ತ ದೇವತೆಗಳಿಗೂ ಒಡೆಯನಾಗಿರುವಂತೆ ರಾವಣನು ಸಮಸ್ತ ರಾಕ್ಷಸರಿಗೂ ಒಡೆಯನು; ಮಹಾ ಬಲವಂತನು; ದಕ್ಷಿಣ ನಾಯಕನು, ಮಹಾ ತ್ಯಾಗಶೀಲನು; ಸರ್ವಜನರಲ್ಲಿಯೂ ಪ್ರಿಯವಾಗಿ ನುಡಿಯುವವನು; ಅಂಥಾ ರಾವಣನನ್ನು ವರಿಸು; ಮನುಷ್ಯನಾಗಿ ಕೃಪಣನಾದ ರಾಮನನ್ನು ಬಿಡು, ಇಂದು ಮೊದಲಾಗಿ ದಿವ್ಯಾಂಬರವನ್ನುಟ್ಟು ದಿವ್ಯಾಭರಣ ಭೂಷಿತೆಯಾಗಿ ದಿವ್ಯ ಗಂಧಾನುಲೇಪನ ಮಾಡಿಕೊಂಡು ದಿವ್ಯ ಪುಷ್ಪಗಳನ್ನು ಮುಡಿದುಕೊಂಡು ರಾವಣನಿಗೆ ಅನುಕೂಲವಾಗಿ ಸಮಸ್ತ ಲೋಕಗಳಿಗೂ ಒಡತಿಯಾಗು; ಯಜ್ಞಪುರುಷನ ಸ್ತ್ರೀಯಾದ ಸ್ವಾಹಾದೇವಿಯಂತೆಯೂ ದೇವೇಂದ್ರನ ಸ್ತ್ರೀಯಾದ ಶಚೀದೇವಿಯಂತೆಯೂ ಸುಖವಾಗಿರು; ಅಲ್ಪಾಯುಸ್ಸುಳ್ಳ ರಾಮನಿಂದ ಏನು ಪ್ರಯೋಜನವು! ನನ್ನ ಮಾತನ್ನು ಹಿತವೆಂದು ಕೇಳು; ಕೇಳದಿದ್ದೆಯಾದರೆ ನಾವೆಲ್ಲರೂ ಕೂಡಿ ಒಂದು ಕ್ಷಣಮಾತ್ರದಲ್ಲಿ ನಿನ್ನನ್ನು ನುಂಗಿಬಿಡುವೆವು!'' ಎಂದು ನುಡಿದಳು.

ಆ ಮೇಲೆ ಲಂಬಾಯಮಾನವಾದ ಸ್ತನಗಳುಳ್ಳವಳಾಗಿ ಅತ್ಯಂತ ಗಾತ್ರವಾದ ಹೊಟ್ಟೆಯುಳ್ಳ ವಿಕಟೆಯೆಂಬ ರಾಕ್ಷಸಿಯು ಅತ್ಯಂತ ಕೋಪಾತಿಶಯದಿಂದ ಜಡೆಗಟ್ಟಿ ಮುಷ್ಟಿಗೊಂಡು ಕೈಯನ್ನು ಮೇಲಕ್ಕೆತ್ತಿ ಹೆದರಿಸುತ ಘರ್ಜಿಸುತ "ಎಲೈ ಸೀತಾದೇವಿಯೆ, ನೀನು ಮಹಾ ಅಜ್ಞಾನಿಯು; ರಾವಣನ ಮನಸ್ಸಿಗೆ ಕೋಪವುಂಟು ಮಾಡುವ ಅನೇಕ ದುರ್ವಾಕ್ಯಗಳನ್ನು ನುಡಿದೆ; ನಾವು ಮೃದುವಾಗಿರುವದರಿಂದಲೂ ನಿನ್ನ ಮೇಲಣ ದಯೆಯಿಂದಲೂ ಸಹಿಸಿದೆವಲ್ಲದೆ ಮತ್ತೊಂದಲ್ಲ; ರಾವಣನು ಅತ್ಯಂತ ಪ್ರಯಾಸದಿಂದ ಸಮುದ್ರವನ್ನು ದಾಟಿಹೋಗಿ ನಿನ್ನನ್ನು ಕೊಂಡುಬಂದು ಅಂತಃಪುರದಲ್ಲಿ ಇರಿಸಿಕೊಂಡಮೇಲೆ ಆತನ ಮಾತನ್ನು ಕೇಳದ್ದರಿಂದ ಇಲ್ಲಿಗೆ ತಂದು ಕಾವಲಿಗೊಳಗುಮಾಡಿದನು; ನಾವು ನಿನ್ನನ್ನು ಹೆದರಿಸಿ ಭಯಪಡಿಸುತ್ತಿದ್ದೇವೆ; ಈ ಪ್ರಕಾರದಲ್ಲಿ ನಮ್ಮ ಕಾವಲಿಗೊಳಗಾಗಿ ಬಾಧೆಪಡುವದು ಕಾರ್ಯವಲ್ಲ, ನನ್ನ ಮಾತನ್ನು ಹಿತವೆಂದು ಕೇಳು; ಅನರ್ಥಸಾಧನವಾದ ಶೋಕವನ್ನೂ ಕಣ್ಣೀರು ಬಿಡುವದನ್ನೂ ಬಿಟ್ಟು ಮನಸ್ಸಿನಲ್ಲಿ ಹರ್ಷವನ್ನು ತಾಳಿ ರಾವಣನಲ್ಲಿ ಪ್ರೀತಿಯುಳ್ಳವಳಾಗಿ ನಿನ್ನ ಮನಸ್ಸು ಬಂದಂತೆ ಕ್ರೀಡಿಸಿಕೊಂಡಿರು; ಸ್ತ್ರೀಯರಿಗೆ ಯವ್ವನವೆಂಬುದು ಸ್ಥಿರವಲ್ಲ; ನಿನ್ನ ಯವ್ವನವು ಕಳೆಯುವದಕ್ಕೆ ಮೊದಲೇ ಶರೀರ ಸುಖವನ್ನುಂಟುಮಾಡಿಕೊ; ಲಂಕಾಪಟ್ಟಣದಲ್ಲಿ ಮನೋಹರವಾದ ಉಪವನ ಉದ್ಯಾನವನಗಳು ಕ್ರೀಡಾಪರ್ವತಗಳು ಕ್ರೀಡಾ ಕೊಳಗಳು ಮೊದಲಾದ ಭೋಗಯೋಗ್ಯವಾದ ವಸ್ತುಗಳು ಅನೇಕವಾಗಿವೆ; ನೀನು ರಾವಣನನ್ನು ವರಿಸಿ ಆ ಭೋಗಗಳನ್ನು ಅನುಭವಿಸು; ನಿನಗೆ ಏಳುಸಾವಿರಮಂದಿ ಕೆಳದಿಯರನ್ನು ಕೊಡಿಸುವೆನು; ಸಮಸ್ತ ರಾಕ್ಷಸನಾಯಕನಾದ ರಾವಣನನ್ನು ಪತಿಯಾಗಿ ವರಿಸು; ನನ್ನ ಮಾತನ್ನು ಕೇಳದಿದ್ದೆಯಾದರೆ ನಿನ್ನ ಎದೆಯನ್ನು ಸೀಳಿ ರಕ್ತಪಾನವನ್ನು ಮಾಡುವೆನು'' ಎಂದು ನುಡಿದಳು.

ಆಮೇಲೆ ಅತ್ಯಂತ ಭಯಂಕರವಾದ ಧ್ವನಿಯುಳ್ಳ ಚಂಡೋದರಿಯೆಂಬ ರಾಕ್ಷಸಿಯೂ ಪ್ರಘಸೆಯೆಂಬ ರಾಕ್ಷಸಿಯೂ ಮಿಕ್ಕವರನ್ನು ಕುರಿತು "ಈ ಸೀತಾದೇವಿಯು ರಾವಣನಿಗೆ ಅನುಕೂಲವಾಗದಿದ್ದಮೇಲೆ ಇವಳಿದ್ದು ಫಲವೇನು; ಮನುಷ್ಯ ಸ್ತ್ರೀಯಾದ ಈ ದೇವಿಯು ಮೃತವಾದಳೆಂದು ರಾವಣನಿಗೆ ಹೇಳಿದರೆ ಆತನು ಇವಳನ್ನು ಭಕ್ಷಣಮಾಡುವದಕ್ಕೆ ಅಪ್ಪಣೆ ಕೊಡುವನು; ಈ ಅರ್ಥದಲ್ಲಿ ಸಂಶಯವಿಲ್ಲ'' ಎಂದು ನುಡಿದರು.

ಆಮೇಲೆ ಅಜಾಮುಖಿಯೆಂಬ ರಾಕ್ಷಸಿಯು "ಇವಳನ್ನು ಮಾತನಾಡಿಸುವದೇನು! ಇವಳ ಸರ್ವಾಂಗ ಸಂದುಗಳನ್ನೂ ಕತ್ತರಿಸಿ ಮಾಂಸಖಂಡಗಳನ್ನು ತೆಗೆದು ಭಾಗವಮಾಡಿಕೊಂಡು ಭಕ್ಷಣವಮಾಡೋಣ; ಶೀಘ್ರದಲ್ಲಿ ಮದ್ಯವನ್ನು ತಕ್ಕೊಂಡು ಬನ್ನಿ; ನಾನಾಪ್ರಕಾರವಾದ ಪುಷ್ಪಗಳನ್ನು ತಕ್ಕೊಂಡು ಬನ್ನಿ'' ಎಂದು ನುಡಿದಳು!

ಆಮೇಲೆ ಶೂರ್ಪನಖಿಯೆಂಬ ರಾಕ್ಷಸಿಯು “ ಅಜಾಮುಖಿಯು ಹೇಳಿದ ಮಾತು ಸತ್ಯವು, ಈ ಮಾತು ನಮಿಗೆಲ್ಲರಿಗೂ ಸಮ್ಮತವು; ಶೀಘ್ರದಲ್ಲಿ ಆನಂದಕರವಾದ ಮದ್ಯವನ್ನು ತಕ್ಕೊಂಡುಬನ್ನಿ, ಮನುಷ್ಯ ಮಾಂಸವನ್ನು ಆಸ್ವಾದಿಸಿ ಮದ್ಯಪಾನಮಾಡಿ ಆನಂದದಿಂದ ನರ್ತನವನ್ನು ಮಾಡೋಣ ” ಎಂದು ನುಡಿದಳು ಈ ಮರ್ಯಾದೆಯಲ್ಲಿ ಅತಿ ಭಯಂಕರವಾದ ರಾಕ್ಷಸ ಸ್ತ್ರೀಯರಿಂದ ಹೆದರಿಸಲ್ಪಟ್ಟ ಸೀತಾದೇವಿಯು ಧೈರ್ಯಗುಂದಿ ರೋದನ ಮಾಡುತಿದ್ದಳು.

## ೨೫ನೇ ಅಧ್ಯಾಯ.

### ಸೀತಾದೇವಿಯು ಪ್ರಲಾಪಿಸಿದ್ದು.

ಆ ಬಳಿಕ ಸೀತಾದೇವಿಯು ಕಣ್ಣೀರು ಬಿಡುತ ರೋದನಮಾಡುತ ಆ ರಾಕ್ಷಸ ಸ್ತ್ರೀಯರನ್ನು ಕುರಿತು “ ಎಲೈ ರಾಕ್ಷಸ ಸ್ತ್ರೀಯರೇ ಕೇಳೀ : ಲೋಕದಲ್ಲಿ ಮನುಷ್ಯಸ್ತ್ರೀಯಾದವಳು ರಾಕ್ಷಸನಿಗೆ ಸ್ತ್ರೀಯಾಗಲಾರಳು ; ನೀವೆಲ್ಲರು ನನ್ನನ್ನು ಕೊಂದರೂ ನಾನು ನಿಮ್ಮ ಮಾತನ್ನು ಕೇಳುವವಳಲ್ಲ , ಶ್ರೀರಾಮನನ್ನು ನೋಡುವ ಪುಣ್ಯಾತ್ಮರೇ ಧನ್ಯರು , ಆತನನ್ನು ಕಾಣದಿರುವ ನನಿಗೆ ವಿಷಪಾನಮಾಡುವದೇ ಯೋಗ್ಯವಲ್ಲದೆ ಜೀವದಿಂದಿರುವದು ಕಾರ್ಯವಲ್ಲ ; ನಾನು ಪೂರ್ವಜನ್ಮದಲ್ಲಿ ಏನು ಪಾಪಮಾಡಿದೆನೋ ! ಹಾಗಲ್ಲದಿದ್ದರೆ ಇಂಥಾ ಘೋರವಾದ ದುಃಖವು ಬರಲಾರದು ; ನನ್ನ ಎದೆಯು ಕಗ್ಗಲ್ಲಾಗಿರಬೇಕು , ಅಲ್ಲದಿದ್ದರೆ ಶ್ರೀರಾಮನನ್ನು ಕಾಣದೆ ಒಂದು ಕ್ಷಣದಲ್ಲಿ ಜರ್ಝರಿತವಾಗಿ ಒಡೆದುಹೋಗುವದು ! ನಾನು ನನ್ನ ಪ್ರಾಣಕಾಂತನನ್ನು ಕಾಣದೆ ರಾಕ್ಷಸಸ್ತ್ರೀಯರ ಕಾವಲಿಗೊಳಗಾಗಿ ಹಂಬಲಿಸುವದಕ್ಕಿಂತಲೂ ಜೀವವನ್ನು ತೊರದುಕೊಳ್ಳುವದೇ ಉತ್ತಮವು , ಲೋಕದಲ್ಲಿ ಮನುಷ್ಯಜನ್ಮವನ್ನು ಸುಡಬೇಕು ; ಮನುಷ್ಯಜನ್ಮದಲ್ಲಿಯೂ ಪರಾಧೀನವಾಗಿರುವ ಜನ್ಮವನ್ನೇನುಮಾಡಬೇಕು ! ಶರೀರವನ್ನು ಬಿಡಬೇಕೆಂದೂ ಬಿಡುವ ಸ್ವತಂತ್ರವಿಲ್ಲದ ಮನುಷ್ಯಜನ್ಮವನ್ನು ಸುಡಬೇಕು ! ” ಎಂದು ಹಂಬಲಿಸುತಿದ್ದಳು.

## ೨೬ನೇ ಅಧ್ಯಾಯ.

### ಸೀತಾದೇವಿಯು ಪ್ರಲಾಪಿಸಿದ್ದು .

ಈ ಮರ್ಯಾದೆಯಲ್ಲಿ ಸೀತಾದೇವಿಯು ಮುಖವಡೆಯಾಗಿ ಬಿದ್ದು ಹಂಬಲಿಸುತ ಚಿತ್ತವಿಕಳಿತವಾಗಿ ಭ್ರಮೆಗೊಂಡವಳಂತೆಯೂ ಧಾತುವಿಕಳಿತವಾದ ವೃಕ್ಷದಂತೆಯೂ ಬಲೆಗೆ ಶಿಕ್ಕಿದ ಹುಲ್ಲೆಯ ಮರಿಯಂತೆಯೂ ಭೂಮಿಯಲ್ಲಿ ಹೊರಳುತ “ ಕಟಕಟಾ ! ದುರುಳರಾವಣನು ನನ್ನ ಪ್ರಾಣಕಾಂತನಾದ ಶ್ರೀರಾಮನನ್ನು ಮೋಸಮಾಡಿ ನನ್ನನ್ನು ದುರಾಗತದಿಂದೆತ್ತಿಕ್ಕೊಂಡು ಬಂದು ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಶೆರೆಯಿಟ್ಟು ಇಂಥಾ ದುಃಖಕ್ಕೊಳಗುಮಾಡಿದಮೇಲೆ ನನಿಗೆ ಈ ಜನ್ಮದಿಂದ ಪ್ರಯೋಜನವೇನು ! ರಾಕ್ಷಸಿಯರ ಮಧ್ಯದಲ್ಲಿ ಶ್ರೀರಾಮನನ್ನು ಕಾಣದೇ ಹಂಬಲಿಸುತ ಜೀವವಿಡಿದಿರುವ ನನ್ನ ಹೀನಜನ್ಮವನ್ನು ಸುಡಬೇಕು ; ಸಮಸ್ತ ಭೂಮಂಡಲಾಧಿಪತಿಯಾದ ಶ್ರೀರಾಮನಿಲ್ಲದೆ ನನಿಗೆ ಈ ಜೀವನದಲ್ಲಿ ಒಂದು ಕ್ಷಣಮಾತ್ರವಾದರೂ ಇರುವದಕ್ಕೆ ಇಚ್ಛೆಯಿಲ್ಲ ; ಬಹುಕಾಲವಾಗಿ ಶ್ರೀರಾಮನನ್ನು ಬಿಟ್ಟಿರುವ ನನ್ನ ಎದೆಯು ಸಾವಿರ ಹೋಳಾಗಿ ಒಡೆದುಹೋಗಲೀ ! ನಾನು ನನ್ನ ಎಡದಕಾಲಿನಿಂದಲಾದರೂ ನೀಚ ರಾವಣನ ಶರೀರವನ್ನು ಮುಟ್ಟಲೊಲ್ಲೆನು ; ನಾನು ಒಂದು ದಿನವಾದರೂ ದುರ್ವಾರ್ತೆಗೊಳಗಾದವಳಲ್ಲ ; ನನ್ನ ವಂಶದಲ್ಲಿ ಒಬ್ಬರೂ ಒಂದು ಬೆರಳನ್ನಾದರೂ ಪರಪುರುಷರಿಗೆ ತೋರಿಸಿದವರಿಲ್ಲ ; ಅಂಥಾ ನನ್ನನ್ನು ಪಾಪಿಯಾದ ರಾವಣನು ಬಯಸುತ್ತಿದ್ದಾನೆ , ಇನ್ನು ಮೆಗ್ಗಳವಾಗಿ ಹಂಬಲಿಸಿ ಪ್ರಯೋಜನವೇನು ! ನನ್ನ ಶರೀರವನ್ನು ಛಿನ್ನಾಭಿನ್ನವಾಗಿ ಕಡಿದು ಛಿನ್ನಾಭಿನ್ನಮಾಡಿದರೂ ಪ್ರಜ್ವಲಿಸುವ ಯಜ್ಞಪುರುಷನಲ್ಲಿ ಕಟ್ಟಿ

ಹಾಕಿದರೂ ನಾನು ರಾವಣನಲ್ಲಿ ಮನಸ್ಸನ್ನಿಡುವವಳಲ್ಲ, ನನ್ನ ಪ್ರಾಣಕಾಂತನಾದ ಶ್ರೀರಾಮನು ಮಹಾ ಪ್ರಾಜ್ಞನು, ದಯಾಶೀಲನು; ಸತ್ಯಸಂಧನು, ಮಾಡಿದ ಉಪಕಾರವನ್ನು ಮರೆಯುವವನಲ್ಲ; ರಾವಣನನ್ನು ಕೊಲ್ಲುವದಕ್ಕೆ ಸಮರ್ಥನು, ದಂಡಕಾರಣ್ಯ ಸಮರಾಂಗಣದಲ್ಲಿ ವಿರಾಧನನ್ನು ಸಂಹರಿಸಿದನು, ಅಂಥಾ ರಘುನಾಥನು ನನ್ನನ್ನೇನುಕಾರಣದಿಂದ ನೆನೆಸದೆ ಇದ್ದಾನೆಯೋ!—ಸಮುದ್ರ ಮಧ್ಯದಲ್ಲಿರುವ ಲಂಕಾಪಟ್ಟಣಕ್ಕೆ ಈಶ್ವರನಾದ ರಾವಣನು ಮೋಸದಿಂದ ತರಲ್ಪಟ್ಟಂಥಾ ನನ್ನನ್ನೇನುಕಾರಣ ನೆನೆಯದೆ ಇದ್ದಾನೆಯೋ ಅರಿಯಬಾರದು! ರಾಮಲಕ್ಷ್ಮಣರು ಇಲ್ಲಿರುವಂಥಾ ನನ್ನನ್ನು ಅರಿತು ಉಪೇಕ್ಷೆಮಾಡಿಕೊಂಡಿಧಾರೆಯೋ! ಪುಣ್ಯಾತ್ಮನಾದ ಜಟಾಯುವು ನನ್ನನ್ನು ರಾವಣನು ಕೊಂಡುಹೋದನೆಂದು ಹೇಳಲಿಲ್ಲವೋ! ಪಕ್ಷಿರಾಜನಾದ ಜಟಾಯುವು ನನ್ನನ್ನು ಬಿಡಿಸಿಕೊಳ್ಳುವದಕ್ಕಾಗಿ ರಾವಣನಕೂಡೆ ಯುದ್ಧಮಾಡಿ ಶರೀರವನ್ನು ಬಿಟ್ಟನೊ! ಅಲ್ಲದಿದ್ದರೆ ನನ್ನ ವೃತ್ತಾಂತವನ್ನು ಹೇಳದಿರುವನೇ! ಆ ಪಕ್ಷಿರಾಜನು ಶರೀರವನ್ನಿಡಿದು ನನ್ನ ವರ್ತಮಾನವನ್ನು ಶ್ರೀರಾಮನಿಗೆ ತಿಳುಹಿಸಿದನಾದರೆ ಶ್ರೀರಾಮನು ಅತ್ಯಂತ ಕೋಪಯುಕ್ತನಾಗಿ ಲೋಕದಲ್ಲಿ ರಾಕ್ಷಸ ವಂಶವೆಲ್ಲವನ್ನೂ ನಿರ್ವಂಶವಾಗಿ ಮಾಡುವನು, ಸಮುದ್ರವೆಲ್ಲವನ್ನು ಬಣಗಿಸಿ ಈ ಲಂಕಾಪಟ್ಟಣವನ್ನು ಸುಟ್ಟು ನೀಚರಾವಣನ ಕೀರ್ತಿಯನ್ನು ನಾಶಮಾಡುವನು; ಈ ಪಟ್ಟಣದಲ್ಲಿ ವಿಧವೆಯರಾದ ರಾಕ್ಷಸ ಸ್ತ್ರೀಯರು ಎಲ್ಲಿ ನೋಡಿದರೂ ಗೋಳಿಟ್ಟು ಹಂಬಲಿಸಿ ರೋದನವನ್ನು ಮಾಡುವಂತೆ ಮಾಡುವನು! ಈ ಅರ್ಥದಲ್ಲಿ ಸಂಶಯವಿಲ್ಲ; ರಾಮಲಕ್ಷ್ಮಣರು ರಾವಣನನ್ನು ಕಂಡರೆ ದೃಷ್ಟಿಮಾತ್ರದಿಂದಲೇ ಸಂಹರಿಸಿ ಈ ಪಟ್ಟಣವು ಚಿತಾಧೂಮಗಳಿಂದ ಪೂರ್ಣವಾಗಿ ಹದ್ದುಗಳಿಂದ ಸುತ್ತುವರಿಯಲ್ಪಟ್ಟು ಅತಿ ಶೀಘ್ರವಾಗಿ ಸ್ಮಶಾನಕ್ಕೆ ಸಮಾನವಾಗುವದು, ಲಂಕಾಪಟ್ಟಣದಲ್ಲಿರುವ ರಾಕ್ಷಸ ಸ್ತ್ರೀಯರು ಅನಾಥೆಯರಾಗಿ ನನ್ನಂತೆ ರೋದನವನ್ನು ಮಾಡಿಕೊಂಡಿರುವಂತೆ ಮಾಡುವರು; ಈ ಮನೋರಥವನ್ನು ನಾನು ಎಂದಿಗೆ ಪಡೆದೇನು! ಈ ಪಟ್ಟಣವು ಮಹಾ ದುಷ್ಟಸ್ಥಾನವು, ಯಾವ ಪ್ರಕಾರದಲ್ಲಾದರೂ ಅತಿ ಶೀಘ್ರದಲ್ಲಿ ಕೇಡುಬರುವದೆಂದು ಈ ಪಟ್ಟಣದಲ್ಲಿ ಅಶುಭಗಳು ಆಗುತ್ತಿವೆ, ರಾವಣನು ಮಡಿದಮೇಲೆ ಸ್ತ್ರೀಯು ವಿಧವೆಯಾದಂತೆ ಈ ಪಟ್ಟಣವು ಅನಾಯಕವಾಗಲುಳ್ಳದ್ದು! ಅನೇಕ ಪುಣ್ಯೋತ್ಸವಗಳಿಂದ ಪರಿಪೂರ್ಣವಾದ ಲಂಕಾಪಟ್ಟಣವು ಮಾಂಗಲ್ಯವತಿಯಾಗಿ ಸರ್ವಾಭರಣ ಭೂಷಿತೆಯಾಗಿ ಕೋಮಲಾಂಗಿಯಹಾಗಿದ್ದು ವಿಧವೆಯಹಾಗಾಗಲುಳ್ಳದ್ದು! ಶ್ರೀರಾಮನ ಬಾಣಾಗ್ನಿಯಿಂದ ದಗ್ಧವಾಗಿ ಲಂಕಾಪಟ್ಟಣವು ಪ್ರಭೆಗುಂದಿ ಅಂಧಕಾರದಿಂದ ಕವಿಯಲ್ಪಡಲುಳ್ಳದ್ದು! ಈ ಪಟ್ಟಣದಲ್ಲಿರುವ ಸ್ತ್ರೀಯರ ರೋದನ ಧ್ವನಿಯನ್ನು ಅತಿ ಶೀಘ್ರದಲ್ಲಿ ಕೇಳುವೆನು! ಅತಿ ಪರಾಕ್ರಮಿಯಾದ ರಘುನಾಥನು ನಾನು ಇಲ್ಲಿರುವ ವರ್ತಮಾನವನ್ನು ಕೇಳಿ ಈ ರಾಕ್ಷಸ ಸ್ತ್ರೀಯರ ಕಾವಲಲ್ಲಿರುವ ನನ್ನನ್ನು ಕರದುಕೊಂಡು ಹೋಗುವ ಸಮಯವಾಯಿತು! ಈ ರಾಕ್ಷಸರು ಅತ್ಯಂತ ಪಾಪಬುದ್ಧಿಯಿಂದ ಮಾಡಬಾರದ ಕೃತ್ಯವನ್ನು ಮಾಡಬೇಕೆಂದಿಧಾರೆ; ಈ ಅಧರ್ಮದಿಂದ ಅವಶ್ಯವಾಗಿ ಲಂಕಾಪಟ್ಟಣದಲ್ಲಿ ಅನೇಕ ಉತ್ಪಾತಗಳಾಗುತಿವೆ; ಮಾಂಸಾಹಾರಿಗಳಾದ ರಾಕ್ಷಸರು ಧರ್ಮರಹಸ್ಯವನ್ನರಿಯದೆ ನಾಳೇ ಪ್ರಾತಃಕಾಲದಲ್ಲಿ ನನ್ನ ಶರೀರವನ್ನು ಆಹಾರ ಮಾಡಿಕೊಳ್ಳಲೆಣಿಸಿಧಾರೆ; ಶ್ರೀರಾಮನು ನನ್ನ ಸಮಾಪದಲ್ಲಿಲ್ಲದ್ದರಿಂದ ನಾನೇನುಮಾಡಲಿ! ಕೆಂದಾವರೇ ಪುಷ್ಪಗಳಂತೆ ಕಣ್ಣುಗಳುಳ್ಳ ಶ್ರೀರಾಮನನ್ನು ಕಾಣದೆ ದುಃಖಪಡುವ ನನಿಗೆ ಯಾವ ಪುಣ್ಯಾತ್ಮನಾದರೂ ವಿಷವನ್ನು ತಂದುಕೊಟ್ಟರೆ ಶ್ರೀರಾಮನನ್ನು ಮರತು ಯಮನ ದರ್ಶನೆ ಮಾಡುವೆನು; ಲಕ್ಷ್ಮಣಸಮೇತನಾದ ರಘುನಾಥನು ನಾನು ಜೀವದಿಂದಿರುವದನ್ನರಿಯನೊ! ಅರಿತರೂ ನನ್ನನ್ನು ಹುಡುಕದೆ ಇಧಾನೆಯೋ! ಹಾಗಿದ್ದಮೇಲೆ ನಾನು ರಾವಣನಿಗೆ ವಶವಾದೆನೆಂದು ನನ್ನ ವಿರಹ ದುಃಖವನ್ನು ತಾಳಲಾರದೆ ಲಕ್ಷ್ಮಣಸಮೇತನಾಗಿ ತನ್ನ ಶರೀರವನ್ನು ಬಿಟ್ಟು ದೇವಲೋಕ ಯಾತ್ರೆಮಾಡಿದನೊ! ದೇವಲೋಕದಲ್ಲಿ ದೇವ ಗಂಧರ್ವ ಸಿದ್ಧ ಸಾಧ್ಯಾದಿಗಳು ಆತನ ದರ್ಶನವನ್ನು ಮಾಡಿ ಕೃತಾರ್ಥರಾಗುವರು! ರಾಜರ್ಷಿಯಾಗಿ ಮಹಾತ್ಮನಾದ ಶ್ರೀರಾಮನಿಗೆ ನನ್ನಿಂದ ಕಾರ್ಯವೇನು! ಕೃತಘ್ನರಾದ ಪಾಪಿಗಳು ಆತನಿಗೆ ನನ್ನಲ್ಲಿ ಪ್ರೀತಿ ಕೆಡುವಂತೆ ಭೇದತಂತ್ರವನ್ನು ಮಾಡಿದರೋ! ಈಗ ನನ್ನಲ್ಲಿ ಭೋಗಾದೃಷ್ಟ ಸದ್ಗುಣವಿಲ್ಲವೊ! ನನ್ನ ಭೋಗಾದೃಷ್ಟವು ತೀರಿತೊ! ಅತ್ಯಂತ ಪರಾಕ್ರಮಶಾಲಿಯಾಗಿ ಸಮಸ್ತ ಶತ್ರು ಸಂಹಾರಕನಾಗಿ

ಶುದ್ಧಾಂತಃಕರಣನಾದ ಶ್ರೀರಾಮನನ್ನು ಕಾಣದೆ ಜೀವಿಸಿರುವದಕ್ಕಿಂತಲು ಮರಣವನ್ನೈದುವದೇ ಉತ್ತಮವು ; ಶ್ರೀರಾಮಲಕ್ಷ್ಮಣರು ನನ್ನನ್ನು ಹುಡುಕಿ ಕಾಣದೆ ದುಃಖಾತಿಶಯದಿಂದ ವಿರಕ್ತರಾಗಿ ವನಾಂತರದಲ್ಲಿ ಕಂದಮೂಲ ಫಲಾಹಾರಗಳನ್ನು ಮಾಡಿಕೊಂಡು ತಮ್ಮ ಮನಸ್ಸು ಬಂದಂತೆ ಸಂಚರಿಸಿಕೊಂಡಿದ್ದಾರೊ ! ಅಲ್ಲದಿದ್ದರೆ ರಾವಣನು ಯಾರಕೈಯಿಂದಲಾದರು ಅವರನ್ನು ಕೊಲ್ಲಿಸಿದನೊ ! ನಾನು ಇಂದು ಬಂದಾರೂ ನಾಳೇ ಬಂದಾರೂ ಎಂದು ಇದುಪರ್ಯಂತರ ನೋಡುತಿದ್ದೆನು , ಇನ್ನುಮೇಲೆ ಜೀವವಿಡಿದು ನಿಲ್ಲಲಾರೆನು ! ಇಂಥಾ ದುಃಖದಲ್ಲಿಯೂ ನನಿಗೆ ಮರಣವು ಸಂಭವಿಸಲಿಲ್ಲ , ಲೋಕದಲ್ಲಿ ಇಷ್ಟವಸ್ತುವಿನಲ್ಲಿ ಪ್ರಿಯವೂ ಅಪ್ರಿಯವಸ್ತುವಿನಲ್ಲಿ ದ್ವೇಷವೂ ಈ ವಸ್ತುವು ನನ್ನದು ಇವರು ನನ್ನವರು ಎಂಬ ಮಮತೆಯಿಲ್ಲದಿರುವ ಋಷಿಗಳೇ ಪುಣ್ಯಾತ್ಮರು, ಸುಖದಲ್ಲಿ ಹಿಗ್ಗದೇ ದುಃಖದಲ್ಲಿ ನೋಯದೆ ಇರುವ ಮಹಾತ್ಮರಿಗೆ ನಮಸ್ಕಾರವು ! ಶ್ರೀರಾಮನನ್ನು ಕಾಣದೆ ಈ ರಾಕ್ಷಸಿಯರ ವಶವಾಗಿರುವ ನಾನು ಅವಶ್ಯವಾಗಿ ಪ್ರಾಣತ್ಯಾಗವನ್ನು ಮಾಡಿಕೊಳ್ಳಬೇಕಲ್ಲದೆ ನಿಲ್ಲಬಾರದು." ಎಂದು ಹಂಬಲಿಸುತಿದ್ದಳು.

---

## ೨೭ನೇ ಅಧ್ಯಾಯ.

### ತ್ರಿಜಟೆಯು ರಾವಣನಿಗೆ ದುರ್ನಿಮಿತ್ತವಾದ ಕನಸು ಕಂಡದ್ದನ್ನು ಹೇಳಿದ್ದು.

ಈ ಮರ್ಯಾದೆಯಲ್ಲಿ ಸೀತಾದೇವಿಯಿಂದ ನಿಷ್ಠೂರವಾಗಿ ನುಡಿಯಲ್ಪಟ್ಟ ರಾಕ್ಷಸಸ್ತ್ರೀಯರು ಆ ದೇವಿಯನ್ನು ಕುರಿತು "ಎಲೈ ಸೀತಾದೇವಿಯೆ, ನೀನು ನಮ್ಮ ಮಾತನ್ನು ಕೇಳದಿದ್ದರೆ ಎಲ್ಲರೂ ಕೂಡಿ ನಮ್ಮ ಮನಸ್ಸು ಬಂದಂತೆ ನಿನ್ನ ಶರೀರವನ್ನು ಆಹಾರವಾಗಿ ಮಾಡಿಕೊಳ್ಳುವೆವು , ಇದಕ್ಕೆ ಸಂಶಯವಿಲ್ಲ " ಎಂದು ಹೆದರಿಸಿದರು.

ಆಗ ಆ ರಾಕ್ಷಸ ಸ್ತ್ರೀಯರಲ್ಲಿ ವೃದ್ಧೆಯಾದ ತ್ರಿಜಟೆಯೆಂಬವಳು ಸೀತಾದೇವಿಯನ್ನು ಹೆದರಿಸುತಿದ್ದ ಸ್ತ್ರೀಯರನ್ನು ನೋಡಿ "ಎಲೇ ದುಷ್ಟ ಸ್ತ್ರೀಯರಿರಾ, ನೀವು ನನ್ನನ್ನು ಭಕ್ಷಣವಂ ಮಾಡಿ ; ಸೀತಾದೇವಿಯನ್ನು ಮುಟ್ಟಬೇಡೀ ; ನೀವು ಈ ದೇವಿಯ ಸ್ವರೂಪವನ್ನು ತಿಳಿದವರಲ್ಲ , ಈ ದೇವಿಯು ಜನಕಮಹಾರಾಯನ ಮಗಳು ; ದಶರಥರಾಯನ ಸೊಸೆಯು , ಈ ರಾತ್ರಿ ನಾನು ಅತ್ಯದ್ಭುತವಾದ ಕನಸು ಕಂಡೆನು ; ರಾಕ್ಷಸರೆಲ್ಲರು ನಾಶವಾಗುವದನ್ನೂ ಈಕೆಯ ಪತಿಯಾದ ಶ್ರೀರಾಮನಿಗೆ ಜಯವಾಗುವ ವೃತ್ತಾಂತವನ್ನೂ ಕಂಡೆನು " ಎಂದು ನುಡಿದಳು

ಆ ಮಾತನ್ನು ಕೇಳಿ ಆ ರಾಕ್ಷಸ ಸ್ತ್ರೀಯರು ಅತ್ಯಂತ ಕೋಪಯುಕ್ತರಾಗಿ ಭೀತಿಯಿಂದ ತ್ರಿಜಟೆಯನ್ನು ನೋಡಿ "ಎಲೈ ತ್ರಿಜಟೆಯೆ, ರಾತ್ರಿಯಲ್ಲಿ ನೀನು ಕಂಡ ಕನಸ್ಸು ಎಂಥಾದ್ದು ?" ಎಂದು ಕೇಳಿದರು.

ತ್ರಿಜಟೆಯು "ಎಲೇ ರಾಕ್ಷಸಿಯರಿರಾ ಕೇಳಿ : ನನ್ನ ಕನಸಿನಲ್ಲಿ ರಘುನಾಥನು ಗಜದಂತಗಳಿಂದ ನಿರ್ಮಿಸಿ ಅತಿರಮ್ಯವಾದ ಪಲ್ಲಕ್ಕಿಯನ್ನೇರಿಕೊಂಡು ಬಿಳೀ ವಸ್ತ್ರವನ್ನುಹೊದ್ದು ದಿವ್ಯಾಭರಣ ಭೂಷಿತನಾಗಿ ಬಿಳೀ ಪುಷ್ಪಸರಗಳಿಂದ ತನ್ನ ದೇಹವನ್ನಲಂಕರಿಸಿಕೊಂಡು ಲಕ್ಷ್ಮಣಸಮೇತನಾಗಿ ಅನೇಕಮಂದಿ ರಾಜಕುಮಾರರನ್ನು ಕೂಡಿಕೊಂಡು ಅಂತರಿಕ್ಷಮಾರ್ಗದಲ್ಲಿ ಬರುವದನ್ನು ಕಂಡೆನು ; ಸೀತಾದೇವಿಯು ಸಮುದ್ರಮಧ್ಯದಲ್ಲಿ ಒಂದು ಪರ್ವತದಮೇಲೆ ದಿವ್ಯಾಭರಣಭೂಷಿತೆಯಾಗಿ ಸೂರ್ಯನೊಡನೆ ಕೂಡಿದ ಪ್ರಭೆಯಂತೆ ಶ್ರೀರಾಮನೊಡನೆ ಕೂಡಿದ್ದದ್ದನ್ನು ಕಂಡೆನು ; ರಘುನಾಥನು ನಾಲ್ಕುದಂತಗಳುಳ್ಳದ್ದಾಗಿ ಪರ್ವತಾಕಾರವಾದ ಬಿಳೀ ಆನೆಯನ್ನೇರಿಕೊಂಡು ಲಕ್ಷ್ಮಣಸಮೇತನಾಗಿದ್ದದ್ದನ್ನು ಕಂಡೆನು ; ಅವರಿಬ್ಬರೂ ದಿವ್ಯಾಭರಣ ಭೂಷಿತರಾಗಿ ಸೀತಾದೇವಿಯ ಸಮೀಪದಲ್ಲಿದ್ದದ್ದನ್ನು ಕಂಡೆನು ; ಆ ಪರ್ವತಾಗ್ರದಲ್ಲಿ ಅಂತರಿಕ್ಷಮಾರ್ಗದಲ್ಲಿದ್ದ ಒಂದು ಆನೆಯಮೇಲೆ ಸೀತಾದೇವಿಯು ಕುಳಿತಿರುವಹಾಗೆ ಕಂಡೆನು ; ಸೀತಾದೇವಿಯು ತನ್ನ ಕೈಗಳಿಂದ ಚಂದ್ರಸೂರ್ಯರನ್ನು ಹಿಡಿದು ಬಿಡುವಹಾಗೇ ಕಂಡೆನು ; ಆ ಆನೆಯಮೇಲೆ ಸೀತಾಲಕ್ಷ್ಮಣಸಮೇತನಾದ ರಘುನಾಥನು ಇರುವಹಾಗೆ ಕಂಡೆನು ; ಸೀತಾಲಕ್ಷ್ಮಣ ಸಮೇ

ಶ್ರೀರಾಮನು ಪುಷ್ಪಕದಲಿರುವಹಾಗೆ ಕಂಡೆನು, ಪುಷ್ಪಕದಮೇಲಿದ್ದ ರಘುನಾಥನು ಸೀತಾಲಕ್ಷ್ಮಣ ಸಮೇತನಾ ಬಡಗಣದಿಕ್ಕಿಗೆ ಹೋಗುತ್ತಿರುವಹಾಗೆ ಕಂಡೆನು; ಆ ಬಳಿಕ ಯುದ್ಧದಲ್ಲಿ ರಘುನಾಥನಿಗೆ ಜಯುವಾದಹಾಗೆ ಕಂಡೆನು! ಮತ್ತು ನನ್ನ ಸ್ವಪ್ನದಲ್ಲಿ ರಾವಣನು ಎಣ್ಣೆಯನ್ನು ಬತ್ತಿಕ್ಕೊಂಡು ಕೆಂಪು ವಸ್ತ್ರವನ್ನುಟ್ಟುಕೊಂಡು ಕೆಂಪಿನ ಕಣಿಗಲ ಪುಷ್ಪಸರಗಳನ್ನು ಹಾಕಿಕೊಂಡು ಸುರಾಪಾನಮಾಡುತ ಉನ್ಮತ್ತನಾಗಿ ಪುಷ್ಪಕದಿಂದ ಬೀಳುವಹಾಗೆ ಕಂಡೆನು; ಕಪ್ಪುವಸ್ತ್ರವನ್ನುಟ್ಟುಕೊಂಡು ಕಪ್ಪು ಗಂಧಾನುಲೇಪನಮಾಡಿಕೊಂಡು ನೀಲವಸ್ತ್ರವನ್ನುಟ್ಟಿ ಬಬ್ಬ ಸ್ತ್ರೀಯಿಂದ ಮುಂಗುರುಳಿಡಿದು ಸೆಳೆಯಲ್ಪಟ್ಟವನಾಗಿ ಗರ್ದಭಗಳಿಂದ ಎಳೆಯಲ್ಪಟ್ಟ ರಥವನ್ನೇರಿಕೊಂಡು ತೆಂಕಣದಿಕ್ಕಾಗಿ ಕೆಸರಮಡುವಿನಲ್ಲಿ ಬೀಳುವಹಾಗೆ ಕಂಡೆನು; ಆ ಬಳಿಕ ಒಬ್ಬ ಕಪ್ಪಾದ ಸ್ತ್ರೀಯು ನೀಲವಸ್ತ್ರವನ್ನುಟ್ಟು ರಾವಣನ ಕೊರಳಲ್ಲಿ ಹಗ್ಗವನ್ನು ಹಾಕಿ ಕಟ್ಟಿ ಶೆಳೆದುಕೊಂಡು ತೆಂಕಣದಿಕ್ಕಿಗೆ ಹೋಗುವದನ್ನು ಕಂಡೆನು, ರಾವಣನು ಹಂದಿಯನ್ನೇರಿಕೊಂಡೂ ಇಂದ್ರಜಿತ್ತು ನೀಗಳನ್ನೇರಿಕೊಂಡೂ ಕುಂಭಕರ್ಣನು ಒಂಟೆಯನ್ನೇರಿಕೊಂಡೂ ತೆಂಕಣದಿಕ್ಕಿಗೆ ಹೋಗುವಹಾಗೆ ಕಂಡೆನು! ನಮ್ಮವರಲ್ಲಿ ವಿಭೀಷಣನೊಬ್ಬನೇ ಶ್ವೇತಛತ್ರವನ್ನಿಡಿದುಕೊಂಡು ಅಂತರಿಕ್ಷಮಾರ್ಗದಲ್ಲಿ ಹೋಗುವಹಾಗೆ ಕಂಡೆನು, ವಿಭೀಷಣನು ಹೊರ್ತಾಗಿ ರಾಕ್ಷಸರೆಲ್ಲರು ಮದ್ಯಪಾನಮಾಡುತ ಕೆಂಪುಮುಡಿಹೂವನ್ನು ಮುಡಿದುಕೊಂಡು ಗೀತವಾದ್ಯಾದಿ ಧ್ವನಿಗಳಿಂದ ತೆಂಕಣದಿಕ್ಕಾಗಿ ನಡೆಯುವಹಾಗೆ ಕಂಡೆನು, ಆನೆ ಕುದುರೆಗಳಿಂದ ಇಟ್ಟಣಿಸಿರುವ ಲಂಕಾಪಟ್ಟಣದ ಉಪ್ಪರಿಗೆ ಗೋಪುರಗಳೆಲ್ಲವೂ ಮುರಿದು ಬಿದ್ದು ಸಮುದ್ರದಲ್ಲಿ ಮುಳುಗಿಹೋಗುವಹಾಗೆ ಕಂಡೆನು, ಈ ಪಟ್ಟಣದಲ್ಲಿರುವ ಸಮಸ್ತ ರಾಕ್ಷಸಸ್ತ್ರೀಯರೂ ತೈಲಪಾನಮಾಡುತಲೂ ಮರಳುಗೊಂಡಂತೆ ನಗುತಲೂ ಬೊಬ್ಬಿಡುತಲೂ ಪಟ್ಟಣಮಧ್ಯದಲ್ಲಿ ಬಿಸಿಯಾದ ಭಸ್ಮರಾಸಿಯಲ್ಲಿ ಹೊರಳುತ್ತಿರುವಹಾಗೆ ಕಂಡೆನು; ಕುಂಭಕರ್ಣಾದಿ ಸಮಸ್ತ ರಾಕ್ಷಸ ಸೇನಾನಾಯಕರೂ ಕೆಂಪುವಸ್ತ್ರಗಳನ್ನುಟ್ಟು ಗೋಮಯದ ಕೆಸರನ್ನು ಉಣ್ಣುವಹಾಗೆ ಕಂಡೆನು! ಆದ್ದರಿಂದ ನಾವೆಲ್ಲರು ಇಲ್ಲಿಂದ ತೊಲಗಿ ನಾಶವನ್ನೈದಲು ರಘುನಾಯಕನು ಸೀತಾದೇವಿಯನ್ನು ಪಡೆದು ಸಮಸ್ತ ರಾಕ್ಷಸಸೇನೆಗಳನ್ನೂ ಕೊಲ್ಲದೆ ಬಿಡನು; ತನ್ನ ಕೂಡೆ ವನವಾಸಕ್ಕೆ ಬಂದ ತನ್ನ ಪ್ರಿಯಳಾದ ಸೀತಾದೇವಿಯನ್ನು ನೀವೆಷ್ಟು ಬೆದರಿಸಿ ಕಂಗೆಡಿಸಿದರೂ ಬಿಡಲಾರನು; ನೀವಿನ್ನು ಕಠಿಣ ವಚನಗಳನ್ನು ಬಿಟ್ಟು ಸಂತವಿಡೀ, ಈಕೆಯಲ್ಲಿ ನಿಷ್ಠುರವಾಗಿ ನುಡಿಯುವದು ನನ್ನ ಮನಸ್ಸಿಗೆ ಒಪ್ಪದು; ಈಕೆಗೆ ಇಂಥಾ ದುಃಖಬಂದು ಪ್ರಾಪ್ತವಾದ ಸಮಯದಲ್ಲಿಯೂ ಶುಭಸೂಚಕವಾದ ಇಂಥಾ ಕನಸು ಕಾಣಬಂದದ್ದರಿಂದ ಸೀತಾದೇವಿಗೆ ಉತ್ತಮವಾದ ಶ್ರೇಯಸ್ಸಾಗಲುಳ್ಳದ್ದು! ಇಷ್ಟುದಿವಸಗಳು ಬೆದರಿಸಿದ್ದೆಲ್ಲಾ ಹೋಗಲಿ, ಇನ್ನಾದರೂ ಪ್ರಿಯವಚನಗಳಿಂದ ಸಂತವಿಡೀ! ರಘುನಾಥನಿಂದ ರಾಕ್ಷಸರಿಗೆ ಭಯವುಂಟಾಗುವದು; ಸೀತಾದೇವಿಗೆ ನಮಸ್ಕಾರಪೂರ್ವಕವಾಗಿ ಮನ್ನಣೆಮಾಡಿದರೆ ಪ್ರಸನ್ನಳಾಗುವಳು! ಎಲೇ ರಾಕ್ಷಸ ಸ್ತ್ರೀಯರಿರಾ, ನೀವಿನ್ನು ಈ ದೇವಿಯನ್ನು ಕಡೆಗಣಿಸಿ ಕಾಣಬೇಡೀ, ಈ ದೇವಿಯ ಸರ್ವಾಂಗಗಳಲ್ಲಿ ಒಂದು ಅಂಗದಲ್ಲಿಯಾದರೂ ಕಿಂಚಿನ್ಮಾತ್ರ ಅವಗುಣವಿಲ್ಲ, ಲೇಶಮಾತ್ರವಾದರು ದುರ್ಲಕ್ಷಣವಿಲ್ಲದ ಈ ದೇವಿಗೆ ಇಂಥಾ ದುಃಖವು ಬಂದ ಕಾರಣವು ತಿಳಿಯಲಿಲ್ಲ; ಸೀತಾದೇವಿಯು ಇಂಥಾ ದುಃಖಕ್ಕೆ ಯೋಗ್ಯಳಲ್ಲ. ಹಾಗಾದರೂ ಈಕೆಗೆ ಕಾರ್ಯಸಿದ್ಧಿಯು ಸಮೀಪಕ್ಕೆ ಬಂತು; ರಾಕ್ಷಸೇಶ್ವರನಾದ ರಾವಣನ ಅಪಜಯವನ್ನೂ ರಘುನಾಥನ ಜಯವನ್ನೂ ಸೂಚಿಸುವ ಕೆಲವು ನಿಮಿತ್ತಗಳು ಸೀತಾದೇವಿಯಲ್ಲಿ ಕಾಣಿಸುತ್ತಿವೆ: ತಾವರೆಯಸಳಿನಂತೆ ವಿಶಾಲವಾಗಿರುವ ಎಡಗಣ್ಣು ಹಾರುತ್ತಿದೆ; ಆಕಸ್ಮಿಕವಾಗಿ ಎಡದೋಳು ಹಾರುತ್ತಿಧೆ; ಆನೆಯಸುಂಡಿಲಂತೆ ಉದ್ದವಾಗಿ ಕೋಮಲವಾದ ವಾಮಭಾಗದ ತೊಡೆಯು ರಘುನಾಥನು ಸಮೀಪಕ್ಕೆ ಶೇರಿದ್ದನ್ನು ಸೂಚಿಸುವಂತೆ ನಡುಗುತ್ತಿದೆ; ಆ ಹಕ್ಕಿಯು ತನ್ನ ಗೂಡಿನ ಸಮೀಪಕ್ಕೆ ಬಂದು ಸೀತಾದೇವಿಯ ಪಟ್ಟಣಪ್ರವೇಶ ಸೂಚಕವಾದ ನುಡಿಗಳನ್ನು ನುಡಿಯುತ್ತಿದೆ'' ಎಂದು ಹೇಳಿದಳು

## ೨೮ ನೇ ಅಧ್ಯಾಯ.

## ಸೀತಾದೇವಿಯ ಪ್ರಲಾಪನೆ.

ಆ ಬಳಿಕ ಆ ರಾಕ್ಷಸ ಸ್ತ್ರೀಯರ ಕಠಿಣ ವಾಕ್ಯದಿಂದ ಮನಸ್ಸು ನೊಂದ ಸೀತಾದೇವಿಯು ವನಮಧ್ಯದಲ್ಲಿ ಸಿಂಹಗಳಿಗೆ ಸಿಕ್ಕಿದ ಹೆಣ್ಣಾನೆಯಂತೆ ರಾಕ್ಷಸ ಸ್ತ್ರೀಯರ ಮಧ್ಯದಲ್ಲಿದ್ದುಕೊಂಡು ಅವರ ಕಠಿಣವಚನಗಳಿಂದ ಭಯಪಟ್ಟು ಅನಾಥೆಯಾಗಿ "ಕಟಕಟಾ! ಲೋಕದಲ್ಲಿ ಪುಣ್ಯಾತ್ಮರು ಅಕಾಲಮೃತ್ಯುವು ಕೊಲ್ಲದು ಎಂದು ಹೇಳುವ ಮಾತು ಸತ್ಯವಾಯಿತು, ರಾಕ್ಷಸ ಸ್ತ್ರೀಯರಿಂದ ಭಯಪಟ್ಟು ಜೀವಿಸಿಕೊಂಡಿದ್ದೇನೆ, ನನ್ನ ಎದೆಯು ರಾಕ್ಷಸ ಸ್ತ್ರೀಯರ ಕಠಿಣ ವಚನಗಳಿಂದ ಅನೇಕಪ್ರಕಾರವಾಗಿ ಒಡೆಯದೆ ಇರುವದರಿಂದ ಸ್ಥಿರವಾದ ಕಲ್ಲಿನದೆಯಾಗಿರಬೇಕು, ರಾವಣನಿಗೆ ವಶವಾಗದಿದ್ದರೆ ನನಿಗೆ ದೋಷವಿಲ್ಲ; ಬ್ರಾಹ್ಮಣನಾದವನು ಶೂದ್ರನಿಗೆ ಮಂತ್ರರಹಸ್ಯವನ್ನು ಹೇಳಬಾರದಂತೆ ನಾನು ದುಷ್ಟರಾವಣನಿಗೆ ಮನಗೊಡಬಾರದು! ಹ್ಯಾಗೂ ರಾವಣನು ನಿಶಿತವಾದ ಕತ್ತಿಗಳಿಂದ ನನ್ನ ಸರ್ವಾಂಗಗಳನ್ನೂ ಛೇದಿಸಿ ಭಕ್ಷಣಮಾಡದೆ ಬಿಡನು, ಈಗ ನನಿಗೆ ಆತನು ಗಡುವುಕಟ್ಟಿದ ಎರಡು ತಿಂಗಳು ತುಂಬಿದವು, ನನಿಗೆ ಈ ರಾಕ್ಷಸಿಯರ ಭಯ ಒಂದು—ಎರಡು ತಿಂಗಳ ಗಡುವು ತೀರಿದಮೇಲೆ ರಾವಣನು ಭಕ್ಷಣ ಮಾಡುವನೆಂಬ ಭಯ ಒಂದು—ಈ ಎರಡು ಭಯಗಳುಂಟಾಗಿವೆ; ಅಂತಃಪುರದಲ್ಲಿ ಅಪರಾಧ ಮಾಡಿದ ಕಳ್ಳನಿಗೆ ಬಂಧನ ಕೊಲೆ ಎರಡೂ ಬರುವಹಾಗೆ ನನಿಗೆ ಶೆರೆ ಕೊಲೆ—ಎರಡೂ ಪ್ರಾಪ್ತವಾದವು! ಎಲೈ ಶ್ರೀರಾಮನೇ! ಎಲೈ ಲಕ್ಷ್ಮಣಾ! ಎಲೈ ಸುಮಿತ್ರಾದೇವೀ! ನೀವೆಲ್ಲರು ಇರಲು ನಾನು ಒಬ್ಬಳೇ ಸಮುದ್ರಮಧ್ಯದಲ್ಲಿ ಸುಳಿಘಾಳಿಗೆ ಸಿಕ್ಕಿದ ಓಡೆಯಂತೆ ಶೋಕಸಮುದ್ರದಲ್ಲಿ ಮುಳಗಿದೆನು! ಕಟಕಟಾ! ಮಾಯಾಮೃಗವು ಬಂದು ನನಿಗೆ ಶನಿಯಾಯಿತು; ಮಾಯಾಮೃಗವನ್ನು ಹಿಡಿಯುವದಕ್ಕೋದ ರಾಮಲಕ್ಷ್ಮಣರೇನಾದರೋ! ಕಾಲಯಮನೇ ಮೃಗರೂಪವಾಗಿ ಬಂದು ಭಾಗ್ಯಹೀನೆಯಾದ ನನ್ನ ಮನಸ್ಸಿಗೆ ಆ ಇಚ್ಛೆಯನ್ನು ಹುಟ್ಟಿಸಿದನೋ! ಅಜ್ಞಾನಿಯಾದ ನಾನು ಶ್ರೀರಾಮನನ್ನು ಕಳುಹಿಸಿ ಆಮೇಲೆ ನನ್ನ ಅಭಿಮಾನರಕ್ಷಕನಾದ ಲಕ್ಷ್ಮಣನನ್ನು ಕಳುಹಿಸಿ ಇಂಥಾ ಅವಸ್ಥೆಗೊಳಗಾದೆನು! ಹಾ ರಾಮಾ! ಹಾ ಲಕ್ಷ್ಮಣಾ! ದೀರ್ಘವಾದ ಕೊರಳುಳ್ಳ ದೇವನೇ! ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳವನೇ! ಸಮಸ್ತ ಪ್ರಾಣಿಗಳಿಗೂ ಹಿತವನ್ನು ಬಯಸುವ ದೇವನೇ! ರಾಕ್ಷಸರ ಕೊಲೆಗೊಳಗಾದ ನನ್ನನ್ನು ಯಾವಕಾರಣ ಉಪೇಕ್ಷೆಮಾಡುತಿದ್ದಿ! ಸಮಸ್ತ ಭೂಮಂಡಲಾಧಿಪತಿಯಾದ ನೀನು ಧರ್ಮವೇ ಶರಣೆಂದು ಭೂಶಯನ ಬ್ರಹ್ಮಚರ್ಯಗಳನ್ನು ಮಾಡಿಕೊಂಡಿದ್ದೆ, ಮಾಡಿದ ಉಪಕಾರವನ್ನು ಮರೆಯುವ ಮನುಷ್ಯರಿಗೆ ಮಾಡಿದ ಉಪಕಾರದಂತೆ ನನ್ನ ಪತಿವ್ರತಾಧರ್ಮವು ವ್ಯರ್ಥವಾಯಿತು! ಆ ಪತಿವ್ರತಾಧರ್ಮದಹಾಗೆಯೇ ನನ್ನ ಜೀವನವೂ ವ್ಯರ್ಥವಾಯಿತು; ನಿನ್ನನ್ನಗಲಿ ನಿನ್ನ ಮುಖಕಮಲವನ್ನು ಕಾಣದೆ ನಿನ್ನ ಕೂಟದಲ್ಲಿ ಆಶೆಯಿಲ್ಲದೆ ದುಃಖಪಡುತಿದ್ದೇನೆ; ನಿನ್ನ ತಂದೆಯಾದ ದಶರಥರಾಯನ ಆಜ್ಞೆಯಂತೆ ವ್ರತ ನೇಮಗಳನ್ನು ಸಮಾಪ್ತಮಾಡಿ ವನದಿಂದ ನಿನ್ನ ಸ್ಥಾನಕ್ಕೆ ಹೋಗಿ ಕೃತಾರ್ಥನಾಗಿ ಅನೇಕಮಂದಿ ಸ್ತ್ರೀಯರ ಕೂಡೆ ರಮಿಸಿಕೊಂಡು ನನ್ನನ್ನು ಮರೆತೆಯೊ! ನಿನ್ನಲ್ಲಿ ಪ್ರೀತಿಯುಳ್ಳವಳಾಗಿ ಮನೋರಥವನ್ನು ಪಡೆಯದೆ ವ್ಯರ್ಥಶರೀರವಾಗಿ ಹೋಗುತಿದ್ದೇನೆ; ವಿಷಪಾನಮಾಡಿಯಾದರೂ ಕೊರಲಗುಳ್ಳ ಆಯುಧದಿಂದ ಹೊಡದುಕೊಂಡಾದರೂ ಶರೀರವನ್ನು ಬಿಟ್ಟೇನೆಂದರೆ ವಿಷವನ್ನು ತಂದು ಕೊಡುವವರನ್ನು ಕಾಣೆನು; ಆಯುಧವನ್ನೂ ಕಾಣೆನು!" ಎಂದು ಹಂಬಲಿಸುತ ಶ್ರೀರಾಮನನ್ನೇ ಧ್ಯಾನ ಮಾಡುತ ನಡುಗುತ ಮುಖಕಾಂತಿ ಗುಂದಿ ಬಂದು ಪುಷ್ಪಿತವಾದ ಮರದಡಿಯನ್ನು ಶೇರಿ ಬಹಳವಾಗಿ ಚಿಂತಿಸುತ ಸಡಲಿದ ಜಡೆಮುಡಿಯನ್ನು ಕಟ್ಟಿಕೊಳ್ಳುತ ಆ ಮರದ ಕೊಂಬನ್ನು ಕೈಯಲ್ಲಿ ಅವಲಂಬಿಸಿಕೊಂಡು ಲಕ್ಷ್ಮಣಸಮೇತನಾದ ಶ್ರೀರಾಮನನ್ನು ಧ್ಯಾನಮಾಡುತಿದ್ದಳು. ಆ ಸಮಯದಲ್ಲಿ ಸಮಸ್ತವಾದ ಆಪತ್ತುಗಳನ್ನೂ ಪರಿಹರಿಸಿ ಶುಭವನ್ನುಂಟುಮಾಡುವವೆಂದು ಬಲ್ಲವರು ಹೇಳುವಂಥಾ ಸೂಚಕವಾದ ನಿಮಿತ್ತಗಳು ಆಗುತಿದ್ದವು.

## ೨೯ನೇ ಅಧ್ಯಾಯ.

## ಸೀತಾದೇವಿಗೆ ಶುಭನಿಮಿತ್ತಗಳಾದದ್ದು.

ಈ ಪ್ರಕಾರದಲ್ಲಿ ಮರದಡಿಯಲ್ಲಿ ಅನಾಥೆಯಾಗಿ ಹರ್ಷಗೆಟ್ಟು ಹಂಬಲಿಸುತ್ತಿದ್ದ ಸೀತಾದೇವಿಗೆ ಅರಸಿನ ಕಾರ್ಯಕ್ಕೆ ಸೇವಕರು ಒದಗುವಂತೆ ಶುಭಸೂಚಕವಾದ ನಿಮಿತ್ತಗಳು ಆಗುತಿದ್ದವು; ಆ ದೇವಿಯ ಶೋಭನವಾದ ಮುಖದಲ್ಲಿ ಕರಿಯಾಲಿಕಂಪಿನ ಧಾರೆಗಳೊಡನೆ ಕೂಡಿದ ಬಿಳಿಯಾಲಿಯುಳ್ಳ ಎಡಗಣ್ಣಿನ ಯವೆಯು ಮತ್ಸ್ಯಗಳ ಸಂಚಾರದಿಂದ ಚರಿಸುವ ಕೆಂದಾವರೆಯಂತೆ ಹಾರುತ್ತಿತ್ತು; ನುಣುಪಾಗಿ ಕ್ರಮವಾವೃತವಾಗಿ ಗಾತ್ರವಾಗಿ ಕರಿಯಗಿಲು ಶ್ರೀಗಂಧ ಮೊದಲಾದ ಅನುಲೇಪನ ವಸ್ತುಗಳಿಗೆ ಯೋಗ್ಯವಾದ ಎಡಭುಜವು ಹಾರುತಿತ್ತು, ಮದ್ದಾನೆಯ ಸುಂಡಿಲಂತೆ ಮನೋಹರವಾದ ತೊಡೆಗಳಲ್ಲಿ ವಾಮಭಾಗದ ತೊಡೆಯು ಶ್ರೀರಾಮನು ಸಮೀಪಕ್ಕೆ ಬಂದನೆಂಬುವುದನ್ನು ಸೂಚಿಸುತ್ತಿದೆಯೋ ಎಂಬಂತೆ ನಡುಗುತಿತ್ತು; ಧೂಳುಮುಸಗಿದ್ದರೂ ಪುಟವಿಕ್ಕಿದ ಚಿನ್ನದಂತೆ ತನುಕಾಂತಿಯುಳ್ಳ ಸೀತಾದೇವಿಯ ವಸ್ತ್ರದುಡಿಗೆಯು ಸಡಲುತಿತ್ತು! ಈ ಶುಭನಿಮಿತ್ತಗಳಿಂದ ಸೀತಾದೇವಿಯ ಮುಖಕಾಂತಿಯು ಘೋರಬಿಸಲುಗಳಿಂದ ಕಂಗೆಟ್ಟ ಪೈರಿಗೆ ಮಳೆಯಾದಂತೆ ಹೆಚ್ಚುತಿತ್ತು, ತೊಂಡೇಹಣ್ಣನ್ನು ಹೋಲುತಿದ್ದ ತುಟಿಯೂ ಸಿಂಗಾಡಿಯನ್ನು ಹೋಲುತಿದ್ದ ಹುಬ್ಬುಗಳೂ ಹಂಸತಲ್ಪಗಳಂತೆ ಮೃದುವಾಗಿ ನಯವಾದ ಯವೆಗಳೂ ಮುಗುಳುನಗೆಯಿಂದ ಕೂಡಿದ ಬಿಳೀದಂತಪಙ್ತಿಗಳೂ ಉಂಟಾಗಿ ಮನೋಹರವಾದ ಸೀತಾದೇವಿಯ ಮುಖವು ರಾಹುತೊಡಕಿ ಬಿಟ್ಟ ಚಂದ್ರಮಂಡಲದಂತೆ ಹೊತ್ತುಹೊತ್ತಿಗೂ ಕಾಂತಿಯೇರುತಿತ್ತು. ಆ ದೇವಿಯ ಶೋಕವು ತಗ್ಗಿ ಛಾಯೆ ಹೆಚ್ಚಿ ವಿರಹಜ್ವರವು ತಗ್ಗಿ ಮನಸ್ಸಿನಲ್ಲಿ ವಿವೇಕವು ಹುಟ್ಟಿ ಶುಕ್ಲಪಕ್ಷದಲ್ಲಿ ಚಂದ್ರೋದಯದಿಂದೊಪ್ಪುವ ರಾತ್ರಿಯಂತೆ ತನ್ನ ಮುಖಕಾಂತಿಯಿಂದ ಒಪ್ಪುತಿದ್ದಳು!

---

## ೩೦ನೇ ಅಧ್ಯಾಯ.

## ಹನುಮಂತನು ಸೀತಾದೇವಿಯೊಡನೆ ಮಾತಾಡಲು ಯೋಚಿಸಿದ್ದು.

ಈ ಮರ್ಯಾದೆಯಲ್ಲಿ ರಾವಣನು ನುಡಿದ ವಾಕ್ಯಗಳನ್ನೂ ರಾಕ್ಷಸಸ್ತ್ರೀಯರು ನುಡಿದ ವಾಕ್ಯಗಳನ್ನೂ ಸೀತಾದೇವಿಯು ನುಡಿದ ವಾಕ್ಯಗಳನ್ನೂ ರಾಕ್ಷಸಸ್ತ್ರೀಯರು ಸೀತಾದೇವಿಯನ್ನು ಹೆದರಿಸಿದಾಗ ತ್ರಿಜಟೆಯು ತಾನು ಕಂಡ ಸ್ವಪ್ನವೃತ್ತಾಂತವನ್ನು ಹೇಳಿದ್ದನ್ನೂ ಕೇಳಿದ ಹನುಮಂತನು ಸಾಕ್ಷಾತ್ ವನದೇವತೆಯಂತೆ ಮೆರೆಯುತ್ತಿದ್ದ ಸೀತಾದೇವಿಯನ್ನು ಕಂಡು ತನ್ನ ಮನಸ್ಸಿನಲ್ಲಿ “ಕಟಕಟಾ! ಸೀತಾದೇವಿಗೆ ಇಂಥಾ ಅವಸ್ಥೆಯು ಬರಬಹುದೆ! ಬಹುಮಂದಿ ಕಪಿಗಳು ಅರಸಿ ಕಾಣದ ಸೀತಾದೇವಿಯನ್ನು ನಾನು ಕಂಡೆನಲ್ಲಾ! ಅಸಾಧ್ಯನಾದ ರಾವಣನನ್ನೂ ಲಂಕಾಪಟ್ಟಣದಲ್ಲಿರುವ ಸಮಸ್ತ ರಾಕ್ಷಸರ ವೃತ್ತಾಂತಗಳನ್ನೂ ಕಂಡೆನಲ್ಲಾ!” ಎಂದು ಸಂತೋಷಪಟ್ಟು ಶ್ರೀರಾಮನನ್ನು ಕಾಣಬೇಕೆಂದು ಅತ್ಯಂತ ತ್ವರೆಪಡುತಿದ್ದ ಚಂದ್ರಮುಖಿಯಾದ ಸೀತಾದೇವಿಯನ್ನು ಸಂತವಿಡಲೆಣಿಸಿ “ಈ ದೇವಿಯು ಮೊದಲು ಒಂದುದಿವಸವಾದರೂ ದುಃಖವನ್ನು ಕಂಡವಳಲ್ಲ; ಹೀಗೆ ಕಂಗೆಟ್ಟಿರುವಾಗ ಸಂತವಿಡದಿದ್ದೆನಾದರೆ ನನಿಗೆ ಮಹತ್ತಾದ ದೋಷವು ಸಂಭವಿಸುವದು; ನಾನು ಈಕೆಯನ್ನು ಸಂತವಿಟ್ಟು ಶ್ರೀರಾಮನು ಕೊಟ್ಟ ಕುರುಹು ತೋರಿಸಿ ಪ್ರತಿವಾರ್ತೆಯನ್ನು ಕೊಂಡುಹೋದೆನಾದರೆ ಬಂದ ಕಾರ್ಯವು ನೆರವೇರುವದು; ಇಲ್ಲದಿದ್ದರೆ ಈ ದೇವಿಯು ಜೀವವಿಡಿದು ನಿಲ್ಲಲಾರಳು; ಈಕೆಯನ್ನು ಯಾವಾಗ ಕಾಣುವದೆಂದು ಮನಸ್ಸಿನಲ್ಲಿ ವ್ಯಥೆಪಡುವ ಶ್ರೀರಾಮನಿಗೆ ಈ ದೇವಿಯು ಕೊಡುವ ಕುರುಹನ್ನು ತೋರಿಸಿ ಈಕೆಯು ಹೇಳುವ ಕುರುಹಿನ ಮಾತುಗಳನ್ನು ಹೇಳಿ ಆತನನ್ನು ಸಂತವಿಡಬೇಕು; ಇದಕ್ಕೆ ಒಂದು ಉಪಾಯವನ್ನು ಮಾಡಬೇಕು; ಇಲ್ಲಿ ಕಾವಲಾಗಿರುವ ರಾಕ್ಷಸ ಸ್ತ್ರೀಯರ ಮುಂದೆ ಸಂಭಾಷಣೆ ಮಾಡಬಾರದು; ನಾಳೇ ಬೆಳಗಾಗುವದರೊಳಗಾಗಿ ಸೀತಾದೇವಿಯಕೂಡೆ ಸಂಭಾಷಣೆಮಾಡಿ ಶ್ರೀರಾಮನು ಕೊಟ್ಟ ಕುರುಹನ್ನು ತೋರಿಸಿ ಸಂತವಿಡದಿದ್ದರೆ ಶರೀರ ತ್ಯಾ

ಗವನ್ನು ಮಾಡುವಳು, ಈ ಅರ್ಥದಲ್ಲಿ ಸಂಶಯವಿಲ್ಲ; ಅದಲ್ಲದೆ ಸೀತಾದೇವಿಯನ್ನು ಕಂಡು ಸಂಭಾಷಣೆ ಮಾಡದೆ ಶ್ರೀರಾಮನ ಸಮೀಪಕ್ಕೆ ಹೋದರೆ ಆತನು ಸೀತಾದೇವಿಯು ಏನುಹೇಳಿದಳೆಂದು ಕೇಳಿದರೆ ನಾನೇನೆಂದು ಹೇಳುವದು; ಸೀತಾದೇವಿ ಹೇಳಿಕಳುಹಿಸುವ ಕುರುಹಿನ ಮಾತುಗಳಿಲ್ಲದೆ ಆತನ ಸಮೀಪಕ್ಕೆ ಹೋದರೆ ಕೋಪದೃಷ್ಟಿಯಿಂದ ನನ್ನನ್ನು ದಹಿಸುವನು, ಸೀತಾದೇವಿಯನ್ನು ಹೊತ್ತುಕೊಂಡುಹೋಗಿ ಆತನಿಗೆ ಒಪ್ಪಿಸಿದರೆ ಬಹು ಪ್ರಯತ್ನದಿಂದ ಕೂಡಿಸಿದ ಸೇನಾಸನ್ನಾಹವು ವ್ಯರ್ಥವಾಗುವದು; ಆದ್ದರಿಂದ ನಾನು ರಾಕ್ಷಸಿಯರಿಲ್ಲದ ಸಮಯವನ್ನು ಸಾಧಿಸಿ ದುಃಖಪಡುತಿರುವ ಸೀತಾದೇವಿಯನ್ನು ಸಂತವಿಡಬೇಕು, ನಾನು ದೊಡ್ಡ ಶರೀರವುಳ್ಳ ವಾನರನು, ಮನುಷ್ಯರ ಭಾಷೆಯಿಂದ ಮಾತಾಡಿದರೆ ನನ್ನನ್ನು ಕಾಮರೂಪಿಯಾದ ರಾವಣನೆಂದೆಣಿಸಿ ಭೀತಿಪಡುವಳು; ಹಾಗಾದರೂ ಮನುಷ್ಯಭಾಷೆಯಿಂದ ಸೀತಾದೇವಿಯನ್ನು ಸಂತವಿಡಬೇಕಲ್ಲದೆ ಮತ್ತೊಂದು ಉಪಾಯವಿಲ್ಲ; ಮನುಷ್ಯಭಾಷೆಯಲ್ಲಿ ಮಾತನಾಡಿದೆನಾದರೆ ರಾಕ್ಷಸರಿಂದ ಭಯಪಟ್ಟಿರುವ ಸೀತಾದೇವಿಯು ನನ್ನನ್ನು ಕಾಮರೂಪಿಯಾದ ರಾವಣನೆಂದೆಣಿಸಿ ಮೊರೆಯಿಟ್ಟು ಕೂಗುವಳು; ಆಗ ಈ ರಾಕ್ಷಸ ಸ್ತ್ರೀಯರು ತಮ್ಮ ಆಯುಧಗಳನ್ನು ತೆಗೆದುಕೊಂಡು ಅಟ್ಟಿಬಂದು ನನ್ನನ್ನಿಡಿದು ಕೊಲ್ಲುವದಕ್ಕೆ ಯತ್ನಮಾಡುವರು; ಆಮೇಲೆ ನಾನು ಕೊಂಬಿಂದ ಕೊಂಬಿಗೂ ಮರದಿಂದ ಮರಕ್ಕೂ ನೆಗೆದೋಡಿದೆನಾದರೆ ನನ್ನನ್ನು ನೋಡಿ ಭಯಪಟ್ಟು ಸಂಶಯದಿಂದ ಹುಯ್ಲಿಟ್ಟು ಕೂಗಿ ರಾಕ್ಷಸರನ್ನು ಕರಿಯುವರು, ಆ ಹುಯ್ಲು ಧ್ವನಿಯನ್ನು ಕೇಳಿದರೆ ರಾವಣನು ತನ್ನ ಸಮೀಪದಲ್ಲಿರುವ ರಾಕ್ಷಸರನ್ನು ಕಳುಹಿಸುವನು; ಅವರು ತ್ರಿಶೂಲ ಮೊದಲಾದ ಕ್ರೂರಲಗುಳ್ಳ ಆಯುಧಗಳನ್ನು ತೆಗೆದುಕೊಂಡು ನನ್ನನ್ನು ಸುತ್ತಿಕೊಳ್ಳುವರು; ಆಗ ನಾನು ಆ ರಾಕ್ಷಸರಕೂಡೆ ಜಗಳವನ್ನು ಮಾಡಿಕೊಂಡಿದ್ದರೆ ಸಮುದ್ರವನ್ನು ದಾಟಿಹೋಗುವದಕ್ಕೆ ಅವಕಾಶವಿಲ್ಲ; ಅವರು ನನ್ನನ್ನು ಅಡ್ಡಗಟ್ಟಿ ಹಿಡಿದುಕೊಳ್ಳುವರು; ಹಾಗೆ ರಾವಣನಿಗೆ ಶಿಕ್ಕಿದೆನಾದರೆ ಅವನು ಮೊದಲೇ ಶೆರೆಯಲ್ಲಿರುವ ಸೀತಾದೇವಿಯನ್ನೂ ನನ್ನನ್ನೂ ಕೊಂದುಹಾಕುವನು! ನಾನು ಸೀತಾದೇವಿಯನಿಮಿತ್ತವಾಗಿ ಬಂದೆನು, ಈ ಸೀತಾದೇವಿಯನ್ನು ಕೊಂದುಹಾಕಿದರೆ ಶ್ರೀರಾಮ ಸುಗ್ರೀವರ ಕಾರ್ಯವು ಕೆಟ್ಟುಹೋಗುವದು; ನಾನು ಬಂಧನಕ್ಕೆ ಸಿಕ್ಕಿದರೆ ಮಿಕ್ಕ ಕಪಿನಾಯಕರೊಬ್ಬರೂ ಇಲ್ಲಿಗೆ ಬರಲಾರರು; ನನ್ನನ್ನು ಹಿಡಿದು ಶೆರೆಯಲ್ಲಿಟ್ಟರೂ ಕೊಂದುಹಾಕಿದರೂ ಶ್ರೀರಾಮನ ಕಾರ್ಯಸಾಧನೆ ಮಾಡುವದಕ್ಕೆ ಮತ್ತೊಬ್ಬರೂ ಇಲ್ಲ; ನಾನು ಹೋದಮೇಲೆ ಆತನ ಕಾರ್ಯಕ್ಕೆ ಹಿತವಾಗಿ ನಡೆಯುವ ಕಪಿನಾಯಕರು ಒಬ್ಬರೂ ಇಲ್ಲ; ನೂರು ಗಾವುದದಾರಿ ಅಗಲವಾದ ಸಮುದ್ರವನ್ನು ದಾಟಬಂದೆನು; ಅನೇಕಮಂದಿ ರಾಕ್ಷಸರನ್ನು ಕೊಲ್ಲುವದಕ್ಕೆ ನಾನು ಸಮರ್ಥನು; ಹಾಗಾದರೂ ಈ ಸಮುದ್ರವನ್ನ ತಿರುಗೂ ದಾಟಿಹೋಗುವೆನೊ ಹೋಗೆನೋ ತಿಳಿಯಕೂಡದು; ಇಷ್ಟುಮಂದಿ ರಾಕ್ಷಸರಕೂಡೆ ನಾನೊಬ್ಬನೇ ಯುದ್ಧಮಾಡಿದರೆ ಜಯಿಸುವದು ಸಂಶಯವು, ಲೋಕದಲ್ಲಿ ಪ್ರಾಜ್ಞನಾದ ಪ್ರಾಜ್ಞನು ಸಂಶಯವಿಲ್ಲದಿರುವ ಕಾರ್ಯವನ್ನು ಮಾಡಬೇಕಲ್ಲದೆ ಸಂಶಯವಾದ ಕಾರ್ಯದಲ್ಲಿ ಪ್ರವೇಶಿಸಬಾರದು; ನಾನು ಸೀತಾದೇವಿಯಕೂಡೆ ಸಂಭಾಷಣೆ ಮಾಡಿದರೆ ಇಷ್ಟು ಅನರ್ಥಕ್ಕೆ ಕಾರಣವಾಗುವದು; ನನಿಗೆ ಕಾರ್ಯವನ್ನು ಕೆಡಿಸಿದ ದೋಷವು ಸಂಭವಿಸುವದು; ದೇಶಕಾಲವಿಪರ್ಯಾಯದಿಂದ ಮೊದಲು ಪ್ರಯಾಸದಿಂದ ಸಾಧಿಸಿದ್ದೆಲ್ಲವು ವ್ಯರ್ಥವಾಗುವದು; ಸೂರ್ಯೋದಯವಾದರೆ ಅಂಧಕಾರವು ಕೆಟ್ಟುಹೋಗುವಂತೆ ಅಧಮನಾದ ದೂತನನ್ನು ರಾಜಕಾರ್ಯಕ್ಕೆ ಕಳುಹಿಸಿದರೆ ಆ ಕಾರ್ಯವು ಕೆಟ್ಟುಹೋಗುವದು; ಕೃತ್ಯಾಕೃತ್ಯ ವಿಚಾರವನ್ನರಿಯದೆ ತಾವೇ ಬುದ್ಧಿವಂತರೆಂದು ನುಡಿದುಕೊಳ್ಳುವ ದೂತರು ಕಾರ್ಯಘಾತಕರೆನಿಸಿಕೊಳ್ಳುವರು, ಹ್ಯಾಗೆ ಮಾಡಿದರೆ ಶ್ರೀರಾಮನ ಕಾರ್ಯವು ಕೆಡದಿರುವದೋ—ನನಿಗೆ ಷಂಡತ್ವವು ಬಾರದಿರುವದೋ—ಸಮುದ್ರವನ್ನು ದಾಟಿಬಂದದ್ದು ವ್ಯರ್ಥವಾಗದಿರುವದೋ—ಸೀತಾದೇವಿಯು ನನ್ನ ಮಾತನ್ನು ಕೇಳಿ ವಿಶ್ವಾಸವಿಡುವಳೋ ಹಾಗೆ ಮಾಡಿ ಕಾರ್ಯವನ್ನು ಸಾಧಿಸಬೇಕು; ನನಿಗೆ ಶ್ರೀರಾಮನು ಒಡೆಯನಾದ್ದರಿಂದ ಆತನ ಪಟ್ಟದರಾಣಿಯಾದ ಸೀತಾದೇವಿಯ ಮನಸ್ಸಿಗೆ ಸಂಶಯ ಹುಟ್ಟದಹಾಗೆ ಆತನು ಹೇಳಿಕಳುಹಿಸಿದ ಶುಭವಾರ್ತೆಗಳನ್ನು ಮೃದುನುಡಿಯಿಂದ ಹೇಳಿ ವಿಶ್ವಾಸಹುಟ್ಟುವಂತೆ ಮಾಡಬೇಕು" ಎಂದು ಯೋಚಿಸಿದನು.

## ೩೧ನೇ ಅಧ್ಯಾಯ.

### ಸೀತಾದೇವಿಯು ಹನುಮಂತನ ದರ್ಶನಮಾಡಿದ್ದು.

ಈಪ್ರಕಾರದಲ್ಲಿ ಬಹಳಹೊತ್ತು ಯೋಚನೆ ಮಾಡಿ ಹನುಮಂತನು ಸೀತಾದೇವಿಯನ್ನು ಕುರಿತು ಮೃದು ಮಧುರ ವಾಕ್ಯಗಳಿಂದ "ಎಲೈ ತಾಯೇ ಕೇಳು: ದಶರಥರಾಯನೆಂಬ ಒಬ್ಬ ರಾಯನಿದ್ದನು; ಆತನು ಅಪರಿಮಿತವಾದ ರಥ ಗಜ ತುರಗ ಪದಾತಿಗಳೆಂಬ ಚತುರಂಗಬಲವುಳ್ಳವನು, ಮಹಾ ಪುಣ್ಯಶೀಲನು; ಕೀರ್ತಿವಂತನು, ರುಜುಮಾರ್ಗವುಳ್ಳವನು, ಸಮಸ್ತ ರಾಜರ್ಷಿಗಳಲ್ಲಿ ಪ್ರಸಿದ್ಧನಾದವನು, ಚಕ್ರವರ್ತಿಗಳ ಕುಲದಲ್ಲಿ ಜನಿಸಿದವನು; ಪರಾಕ್ರಮದಲ್ಲಿ ದೇವೇಂದ್ರನಿಗೆ ಸಮಾನನಾದವನು, ಹಿಂಸೆ ಮೊದಲಾದ ದುಷ್ಕೃತ್ಯಗಳಿಲ್ಲದವನು; ಮಹಾ ದಯಾಶೀಲನು, ಸತ್ಯಸಂಧನು, ಇಕ್ಷ್ವಾಕುವಂಶದ ರಾಯರಲ್ಲಿ ಮಹಾ ಪ್ರಸಿದ್ಧನಾದವನು, ಪರಿಪೂರ್ಣವಾದ ರಾಜಲಕ್ಷಣವುಳ್ಳವನು, ನಾಲ್ಕು ಸಮುದ್ರಮುದ್ರಿತವಾದ ಭೂಮಂಡಲಕ್ಕೆ ಒಡೆಯನು; ಅಂಥಾ ರಾಯನ ಹಿರಿಯಮಗನಾದ ಶ್ರೀರಾಮನು ಮಹಾಪ್ರಸಿದ್ಧನು; ಸರ್ವಜ್ಞನು; ಸಮಸ್ತ ಬಿಲ್ಲುಗಾರರಲ್ಲಿಯೂ ಪ್ರಸಿದ್ಧನಾದವನು; ಕ್ಷತ್ರಿಯಧರ್ಮವನ್ನು ಪರಿಪಾಲಿಸುವವನು; ತನ್ನನ್ನು ಆಶ್ರಯಿಸಿದವರನ್ನು ಸಂರಕ್ಷಿಸುವವನು; ಸಮಸ್ತ ಲೋಕನಾಯಕನಾದವನು, ಧರ್ಮಪರಿಪಾಲಕನು; ಶತ್ರುಸಂಹಾರಕನು; ಅಂಥಾ ರಘುನಾಯಕನು ತನ್ನ ತಂದೆಯಾದ ದಶರಥರಾಯನ ಆಜ್ಞೆಯಿಂದ ತನ್ನ ದೇವಿಯಾದ ಸೀತಾದೇವಿಯನ್ನೂ ತಮ್ಮನಾದ ಲಕ್ಷ್ಮಣನನ್ನೂ ಕೂಡಿಕೊಂಡು ವನಕ್ಕೆ ಬಂದು ಅದರ ಮಧ್ಯದಲ್ಲಿ ಜನಸ್ಥಾನವೆಂಬ ಸ್ಥಳದಲ್ಲಿ ಅನೇಕಮಂದಿ ರಾಕ್ಷಸರನ್ನು ಸಂಹರಿಸಿ ಖರದೂಷಣರೆಂಬ ರಾಕ್ಷಸರನ್ನು ಸಂಹರಿಸಿದನು, ಆಮೇಲೆ ರಾವಣನು ತನ್ನ ಬಂಧುಗಳಾದ ರಾಕ್ಷಸರ ವಧೆಯನ್ನು ಕೇಳಿ ಅತ್ಯಂತ ಕೋಪಯುಕ್ತನಾಗಿ ಮತ್ಸರದಿಂದ ರಾಮಲಕ್ಷ್ಮಣರನ್ನು ಮೋಸಮಾಡಿ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನ ಪಹರಿಸಿಕೊಂಡು ಬಂದನು, ರಘುನಾಥನು ಆ ದೇವಿಯನ್ನು ಹುಡುಕಿಕೊಂಡು ವನಾಂತರದಲ್ಲಿ ಸಂಚರಿಸುವಾಗ ದೈವಗತಿಯಿಂದ ಸುಗ್ರೀವನಕೂಡೆ ಮಿತ್ರತ್ವವಾಯಿತು, ಆತನು ಸುಗ್ರೀವನ ಒಡಹುಟ್ಟಿದ ವಾಲಿಯನ್ನು ಕೊಂದು ಆತನ ರಾಜ್ಯವನ್ನು ಸುಗ್ರೀವನಿಗೆ ಕೊಟ್ಟನು; ಸುಗ್ರೀವನು ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನು ಹುಡುಕಿಕೊಂಡು ಬರಲು ತನ್ನ ಮಗನಾದ ಅಂಗದನು ಮೊದಲಾದ ಅನೇಕಮಂದಿ ಕಪಿನಾಯಕರನ್ನು ನಾನಾದಿಕ್ಕುಗಳಿಗೂ ಕಳುಹಿಸಿದನು; ಅವರು ನಾನಾದಿಕ್ಕುಗಳನ್ನೂ ಹುಡುಕಿ ಎಲ್ಲಿಯೂ ಕಾಣದೆ ತೆಂಕಣ ಸಮುದ್ರ ತೀರಕ್ಕೆ ಬರಲು ಸಂಪಾತಿಯನ್ನು ಕಂಡು ಆತನು ಸೀತಾದೇವಿಯನ್ನು ರಾವಣನು ಕೊಂಡುಹೋದನೆಂದು ಹೇಳಿದನು; ಆತನ ಮಾತನ್ನು ಕೇಳಿ ನಾನು ನೂರುಗಾವುದದಾರಿಯಗಲವಾದ ಸಮುದ್ರವನ್ನು ದಾಟಿಬಂದು ಲಂಕಾಪಟ್ಟಣದಲ್ಲಿ ಹುಡುಕಿ ಎಲ್ಲಿಯೂ ಕಾಣದೆ ಅಶೋಕವನಕ್ಕೆ ಬಂದು ನಿನ್ನನ್ನು ಕಂಡು ಶ್ರೀರಾಮನು ಹೇಳಿದ ಅಂಗಲಕ್ಷಣಗಳೆಲ್ಲವೂ ನಿನ್ನಲ್ಲಿರುವದರಿಂದ ನಿನ್ನ ಸಮೀಪಕ್ಕೆ ಬಂದೆನು" ಎಂದು ನುಡಿದು ಸುಮ್ಮನಿದ್ದನು

ಆ ಮಾತನ್ನು ಕೇಳಿ ಸೀತಾದೇವಿಯು ಆಶ್ಚರ್ಯಪಟ್ಟು ನಾಲ್ಕುದಿಕ್ಕುಗಳಲ್ಲಿಯೂ ಮೇಲೆಯೂ ಕೆಳಗೆಯೂ ನೋಡುತ ಶಿಂಶುಪಾವೃಕ್ಷವನ್ನು ನೋಡಿ ಮಹಾತ್ಮನಾದ ಶ್ರೀರಾಮನ ನಾಮೋಚ್ಚಾರಣವು ಕೇಳಲ್ಪಟ್ಟಿತೆಂದು ಹರ್ಷಪಟ್ಟು ರಾಮಧ್ಯಾನಮಾಡುತ ಉದಯಪರ್ವತದಲ್ಲಿ ಉದಯಿಸಿದ ಸೂರ್ಯಮಂಡಲದೋಪಾದಿಯಲ್ಲಿದ್ದ ಮಹಾ ಬುದ್ಧಿಶಾಲಿಯಾಗಿ ಕಪಿಶ್ರೇಷ್ಠನಾದ ಹನುಮಂತನನ್ನು ಕಂಡಳು.

---

## ೩೨ನೇ ಅಧ್ಯಾಯ.

### ಹನುಮಂತನನ್ನು ನೋಡಿ ಸೀತಾದೇವಿಯು ಸಂಶಯಪಟ್ಟದ್ದು.

ಈಪ್ರಕಾರದಲ್ಲಿ ಸೀತಾದೇವಿಯು ಶಿಂಶುಪಾವೃಕ್ಷದ ಕೊಂಬಿನಮೇಲೆ ಬಿಳೀವಸ್ತ್ರವನ್ನುಟ್ಟುಕೊಂಡು ಮಿಂಚುಗಳಸಮೂಹದಂತೆ ಹೊಂಬಣ್ಣವುಳ್ಳವನಾಗಿ ಅತ್ಯಂತ ವಿನಯಗುಣಸಂಪನ್ನನಾಗಿ ಪ್ರಿಯವಚನಗಳನ್ನು ನುಡಿಯುವಂಥಾವನಾಗಿ ವಿಕಸಿತವಾದ ಅಶೋಕಪುಷ್ಪಗಳಿಗೆ ಸಮಾನವಾದ ತನುಕಾಂತಿಯುಳ್ಳವನಾಗಿ ಪುಟವಿಕ್ಕಿದ ಚಿನ್ನ

ಕ್ಕೆ ಸಮಾನವಾದ ಕಣ್ಣುಗಳ ಥಾಳವುಳ್ಳವನಾಗಿದ್ದ ಹನುಮಂತನನ್ನು ಕಂಡು ಸಂಶಯಪಟ್ಟು ಸ್ವಪ್ನವನ್ನು ಕಂಡವಳಂತೆ ವಿಸ್ಮಯವನ್ನೈದಿ ಮೂರ್ಛೆಬಿದ್ದು ಬಂದುಕ್ಷಣಮಾತ್ರದಲ್ಲಿ ಎಚ್ಚರಿತು ಮನಸ್ಸಿನಲ್ಲಿ "ಕಟಕಟಾ! ಇದೇನು ಚಿತ್ತಭ್ರಮೆಯೊ! ಅಲ್ಲದೆ ಸ್ವಪ್ನವೋ! ಸ್ವಪ್ನದಲ್ಲಿ ಕಪಿಗಳನ್ನು ಕಾಣುವುದು ದುಸ್ವಪ್ನವೆಂದು ಶಾಸ್ತ್ರಸಿದ್ಧವು; ಲಕ್ಷ್ಮಣಸಮೇತನಾದ ಶ್ರೀರಾಮನಿಗೂ ನನ್ನ ತಂದೆಯಾದ ಜನಕರಾಯನಿಗೂ ಸಮಸ್ತ ವಿಪತ್ತುಗಳೂ ಪರಿಹಾರವಾಗಿ ಮಾಂಗಲ್ಯವಾಗಲಿ! ಆದರೂ ಇದನ್ನು ಸ್ವಪ್ನವೆಂದು ತಿಳಿಯಬಾರದು, ಯಾಕಂದರೆ ನಾನು ನಿದ್ರೆಮಾಡುತ್ತಿರಲಿಲ್ಲ, ದುಃಖಾತಿಶಯದಿಂದ ನೊಂದು ವಿಷಯಾದಿ ಸುಖಗಳಿಲ್ಲದೆ ಮನಸ್ಸಿನಲ್ಲಿ ರಾಮಾ ರಾಮಾ ಎಂದು ಸ್ಮರಣೆಯನ್ನು ಮಾಡುತ ಆತನನ್ನೇ ಧ್ಯಾನಮಾಡುತ್ತಿದ್ದೆನು, ಆ ಧ್ಯಾನಕ್ಕನುಸಾರವಾಗಿ ನನಗೆ ಪ್ರಿಯವಾದ ನಾಮಸ್ಮರಣೆಯನ್ನು ಕೇಳಿದೆನು ಶ್ರೀರಾಮನನ್ನು ಯಾವಾಗ ಕಾಣುವೆನೆಂದು ಬಯಸುತಿದ್ದದ್ದರಿಂದ ಆತನ ನಾಮೋಚ್ಚಾರಣೆಯು ಕೇಳಲ್ಪಟ್ಟಿತೋ! ಮನುಷ್ಯಭಾಷೆಯಿಂದ ನುಡಿಯುವ ಈ ಜಂತುವಿನಲ್ಲಿ ಮನುಷ್ಯಸ್ವರೂಪವು ಕಾಣಲಿಲ್ಲ; ಈ ಕಪಿಯು ಸಾಕ್ಷಾತ್ ಮನುಷ್ಯ ಭಾಷೆಯಿಂದ ವ್ಯಕ್ತವಾಗಿ ನುಡಿಯುತ್ತಿದೆ; ಇದೇನೆಂದು ತಿಳಿಯಲಿಲ್ಲ, ಧರ್ಮವೇ ಶರಣು! ವಾಕ್ಕುಗಳಿಗೆ ಅಧಿಪತಿಯಾದ ಬೃಹಸ್ಪತಿಗೂ ದೇವೇಂದ್ರನಿಗೂ ಬ್ರಹ್ಮದೇವನಿಗೂ ಯಜ್ಞಪುರುಷನಿಗೂ ನಮಸ್ಕಾರ! ಈ ಕಪಿಯು ನನ್ನ ಕೂಡೆ ಯಾವ ವಾಕ್ಯವನ್ನು ನುಡಿಯಿತೋ ಆ ವಾಕ್ಯವು ನಿಮ್ಮೆಲ್ಲರ ಕೃಪೆಯಿಂದ ಯಥಾರ್ಥವಾಗಲಿ!" ಎಂದು ದೇವತಾಪ್ರಾರ್ಥನೆ ಮಾಡುತ್ತಿದ್ದಳು.

---

## ೩೩ ನೇ ಅಧ್ಯಾಯ.

### ಹನುಮಂತನು ಸೀತಾದೇವಿಯೊಡನೆ ಸಂಭಾಷಿಸಿದ್ದು.

ಈ ಮರ್ಯಾದೆಯಲ್ಲಿ ಸೀತಾದೇವಿಯು ಹನುಮಂತನ ವಚನ ಸತ್ಯವಾಗಬೇಕೆಂದು ದೇವತಾಪ್ರಾರ್ಥನೆ ಮಾಡುತ್ತಿರಲು ಹನುಮಂತನು ಶಿಂಶುಪಾವೃಕ್ಷದ ತುದಿಗೊಂಬಿನಿಂದ ಕಿರುಗೊಂಬಿಗೆ ಇಳಿದುಬಂದು ಅತ್ಯಂತ ವಿನಯದಿಂದಲೂ ಭೃತ್ಯಭಾವದಿಂದಲೂ ನಮಸ್ಕರಿಸಿ ಸಮೀಪವಾಗಿ ಕೆಳಗೆ ಇಳಿದು ಕೈಮುಗಿದುಕೊಂಡು ಮಧುರವಚನದಿಂದ "ಎಲೈ ಪದ್ಮಾಕ್ಷಿಯೇ, ನೀನ್ಯಾರು! ಮಾಸಿದ ಬಿಳೀ ಪಟ್ಟೇಶೀರೆಯನ್ನುಟ್ಟು ಮರದ ಕೊಂಬನ್ನಾಶ್ರಯಿಸಿಕೊಂಡಿದ್ದೀ; ತಾವರೇ ಎಸಳುಗಳಿಂದ ಇಬ್ಬನಿಯು ಬೀಳುವಂತೆ ನಿನ್ನ ಕಣ್ಣುಗಳಿಂದ ಕಂಬನಿಗಳು ಬೀಳುವ ಕಾರಣವೇನು? ನೀನು ದೇವಸ್ತ್ರೀಯೊ—ಅಸುರ ಕನ್ನಿಕೆಯೊ—ನಾಗ ಕನ್ನಿಕೆಯೊ—ಗಂಧರ್ವ ಕನ್ನಿಕೆಯೊ—ಯಕ್ಷ ಕನ್ನಿಕೆಯೊ—ಕಿನ್ನರ ಕನ್ನಿಕೆಯೋ—ರುದ್ರ ಕನ್ನಿಕೆಯೊ—ನೀನ್ಯಾರು? ಸಾಕ್ಷಾತ್ ದೇವತಾಸ್ವರೂಪವಾಗಿ ಕಾಣಿಸುತಿದ್ದೀ! ಅಂತರಿಕ್ಷದಿಂದ ಬಂದ ರೋಹಿಣಿದೇವಿಯೊ—ಸಮಸ್ತ ತೇಜಸ್ಸುಗಳಿಗೂ ಅಧಿದೇವತೆಯೋ—ನೀನ್ಯಾರು? ಕೋಪದಿಂದ ವಶಿಷ್ಠಮುನೀಶ್ವರನನ್ನು ಬಿಟ್ಟುಬಂದ ಅರುಂಧತಿದೇವಿಯೋ? ನಿನ್ನ ತಂದೆಯಾರು? ಒಡಹುಟ್ಟಿದವರ್ಯಾರು? ನಿನ್ನ ಪತಿಯಾರು? ನಿನ್ನ ಮಕ್ಕಳ್ಯಾರು? ಯಾವ ಲೋಕದಿಂದ ಈ ಲೋಕಕ್ಕೆ ಬಂದು ಶೋಕಪಡುತಿದ್ದೀ? ನಿನ್ನ ಭೂಷಣಗಳೆಲ್ಲಿಹೋದವು? ನಿನ್ನ ಲಕ್ಷಣಗಳನ್ನು ನೋಡಿದರೆ ರಾಜಕುಮಾರತಿಯಾಗಿದ್ದೀ; ಭೂಮಂಡಲಾಧಿಪತಿಯ ಸ್ತ್ರೀಯಹಾಗೆ ಕಾಣುತ್ತೀ; ನೀನು ಜನಸ್ಥಾನದಿಂದ ರಾವಣನು ಬಲಾತ್ಕಾರದಿಂದ ತಂದ ಸೀತಾದೇವಿಯೆಂದು ನನ್ನ ಮನಸ್ಸಿನಲ್ಲಿ ತೋರುತ್ತಲಿದೆ; ನಿನಗೆ ಬಹು ಶ್ರೇಯಸ್ಸಾಗುವದು; ನಿನ್ನ ಸ್ವರೂಪವನ್ನು ಹೇಳು; ನಿನ್ನನ್ನು ನೋಡಿದರೆ ಮನುಷ್ಯಸ್ತ್ರೀಯೆಂದು ತಿಳಿಯುತ್ತಲಿದೆ; ನಿನ್ನ ದೈನ್ಯವನ್ನು ನೋಡಿದರೆ ಇಷ್ಟು ಅಷ್ಟೆಂದು ಹೇಳಲು ಶಕ್ಯವಲ್ಲ; ನೀನು ತಪೋವೇಷವನ್ನು ತಾಳಿರುವದರಿಂದ ರಘುನಾಥನ ಪಟ್ಟದ ರಾಣಿಯಾಗಿರಬೇಕು; ಈ ಅರ್ಥದಲ್ಲಿ ಸಂಶಯವಿಲ್ಲ" ಎಂದು ಹೇಳಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಅತ್ಯಂತ ಹರ್ಷಪಟ್ಟು ಕೊಂಬಿನಮೇಲೆ ಕುಳಿತಿದ್ದ ಹನುಮಂತನನ್ನು ಕುರಿತು "ಎಲೈ ಕಪಿಶ್ರೇಷ್ಠನೆ, ನಾನ್ಯಾರೆಂದು ಕೇಳಿದೆಯಲ್ಲ, ನನ್ನ ವೃತ್ತಾಂತವನ್ನು ಹೇಳುತ್ತೇನೆ ಕೇಳು; ನಾನು ಲೋಕದಲ್ಲಿರುವ ರಾಜರ ಶಿರೋಮಣಿಯಾಗಿ ಸಮಸ್ತ ಶತ್ರುಸಂಹಾರಕನಾಗಿ ಮಹಾತ್ಮನಾದ ದಶರಥರಾಯನ ಸೊಸೆಯು, ಮಹಾಕೀರ್ತಿವಂತನಾಗಿ ಸತ್ಕುಲಪ್ರಸೂತನಾದ ಜನಕಮಹಾರಾಯನ ಮಗಳು, ತತ್ವಜ್ಞಾನಸಂಪನ್ನನಾಗಿ ಪರಮಪುರುಷನಾದ ಶ್ರೀರಾಮನ ಪಟ್ಟದ ರಾಣಿಯು; ನಾನು ದಶರಥರಾಯನ ಮನೆಯಲ್ಲಿ ಸಮಸ್ತ ಭೋಗಗಳನ್ನು ಅನುಭವಿಸುತ ಹನ್ನೆರಡು ವರುಷಗಳು ಸುಖವಾಗಿದ್ದೆನು; ಹದಿಮೂರನೇ ವರುಷದಲ್ಲಿ ನನ್ನ ಮಾವನಾದ ದಶರಥರಾಯನು ನನ್ನ ಪತಿಯಾದ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡಲು ಯತ್ನಮಾಡಿದನು; ನನ್ನ ಚಿಕ್ಕತ್ತೆಯಾದ ಕೈಕೆಯಿದೇವಿಯು ಪೂರ್ವದಲ್ಲಿ ತನ್ನ ಪತಿಯಾದ ದಶರಥರಾಯನಿಂದ ವಾಗ್ದತ್ತಮಾಡಲ್ಪಟ್ಟಿದ್ದ ಎರಡು ವರಗಳನ್ನು ಆ ಸಮಯದಲ್ಲಿ ಬೇಡಿಕೊಂಡು ಒಂದು ವರದಿಂದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸುವಹಾಗೂ ಮತ್ತೊಂದು ವರದಿಂದ ತನ್ನ ಮಗನಾದ ಭರತನಿಗೆ ಪಟ್ಟವನ್ನು ಕೊಡುವಹಾಗೂ ಮಾಡಿದಳು; ಸತ್ಯಸಂಧನಾದ ದಶರಥರಾಯನು ಮೊದಲು ಕೊಟ್ಟ ಮಾತಿಗೆ ತಪ್ಪಬಾರದೆಂಬ ಅಭಿಮಾನದಿಂದ ನನ್ನ ಪತಿಯಾದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿದನು; ಆತನು ತಂದೆಯ ಮಾತನ್ನು ಮಹಾಪ್ರಸಾದವೆಂದಂಗೀಕರಿಸಿ ಮೊದಲುಟ್ಟು ತೊಟ್ಟ ವಸ್ತ್ರಾಭರಣಗಳನ್ನು ಸಡಲಿಸಿ ನಾರಶೀರೆಗಳನ್ನುಟ್ಟು ವನವಾಸಕ್ಕೆ ಹೊರಟನು; ಆತನ ತಮ್ಮನಾದ ಲಕ್ಷ್ಮಣನು ತಾನೂ ನಾರಶೀರೆಗಳನ್ನುಟ್ಟು ಪ್ರಯಾಣವಾಗಿ ಹೊರಟನು; ಆಮೇಲೆ ನಾನೂ ನನ್ನ ಅತ್ತೆಮಾವಂದರಿಂದ ಕಳುಹಿಸಿಕೊಂಡು ನನ್ನ ಪತಿಯಕೂಡೆ ವನವಾಸಕ್ಕೆ ಹೊರಟೆನು; ಆತನು ಒಬ್ಬರಿಗೆ ಕೊಡುವದಲ್ಲದೆ ತಕ್ಕೊಳ್ಳುವವನಲ್ಲ; ಒಬ್ಬರನ್ನು ಸ್ವಲ್ಪವಾದರೂ ನಿಷ್ಠುರವಾಗಿ ನುಡಿಯುವವನಲ್ಲ; ಪ್ರಾಣಾವಸಾನಕ್ಕೆ ಹೇತುವಾದರೂ ಅಸತ್ಯವನ್ನು ನುಡಿಯುವವನಲ್ಲ; ಅಂಥಾ ಶ್ರೀರಾಮನು ವನವಾಸಕ್ಕೆ ಹೊರಟಮೇಲೆ ನನಗೆ ಆತನಿಲ್ಲದ ಸ್ವರ್ಗಲೋಕಾಧಿಪತ್ಯವಾದರೂ ಒಂದು ತೃಣಕ್ಕೆ ಸಮಾನವಾದ್ದರಿಂದ ಆತನ ಹಿಂದೆ ವನಕ್ಕೆ ಹೊರಟೆನು, ಲಕ್ಷ್ಮಣನು ನಾರಶೀರೆಗಳನ್ನುಟ್ಟು ನಮ್ಮ ಸಂಗಡ ಬರಲು ನಾವು ಮೂವರೂ ಒಡೆಯನ ಮಾತನ್ನು ಮೀರಬಾರದೆಂದು ಕಂದಮೂಲಫಲಾಹಾರ ನಿಯಮ ವ್ರತದಿಂದ ಅತಿ ಘೋರವಾಗಿ ಭಯಂಕರವಾದ ಅರಣ್ಯವನ್ನು ಸೇರಿ ದಂಡಕಾರಣ್ಯದಲ್ಲಿದ್ದ ಸಮಯದಲ್ಲಿ ದುರಾತ್ಮನಾದ ರಾವಣನು ರಾಮಲಕ್ಷ್ಮಣರಿಬ್ಬರನ್ನು ಮೋಸಮಾಡಿ ನನ್ನನ್ನು ಎತ್ತಿಕೊಂಡುಬಂದು ಇಲ್ಲಿ ಸೆರೆಯಿಟ್ಟು ರಾಕ್ಷಸ ಸ್ತ್ರೀಯರನ್ನು ಕಾವಲಿಟ್ಟು ನನ್ನನ್ನು ಬಹಳವಾಗಿ ಕಷ್ಟಪಡಿಸಿ ಎರಡು ತಿಂಗಳು ಗಡುವುಕೊಟ್ಟಿದ್ದಾನೆ; ಆ ಗಡುವು ತೀರಿದಮೇಲೆ ನಾನು ಶರೀರವಿಡಿದು ನಿಲ್ಲುವದಕ್ಕಿಲ್ಲ" ಎಂದು ನುಡಿದಳು.

## ೩೪ನೇ ಅಧ್ಯಾಯ.

### ಸೀತಾದೇವಿಯು ಹನುಮಂತನಲ್ಲಿ ಸಂಶಯಪಟ್ಟದ್ದು.

ಈ ಪ್ರಕಾರದಲ್ಲಿ ಸೀತಾದೇವಿಯು ವೃತ್ತಾಂತವನ್ನು ಸವಿಸ್ತಾರವಾಗಿ ಕೇಳಿ ಹನುಮಂತನು ದುಃಖದಮೇಲೆ ದುಃಖವನ್ನನುಭವಿಸಿ ಕಂಗೆಟ್ಟಿದ್ದ ಆ ದೇವಿಯನ್ನು ಸಂತವಿಟ್ಟು "ಎಲೈ ತಾಯೇ ಕೇಳು: ನಾನು ಶ್ರೀರಾಮನ ಗುರುತು ಮಾತುಗಳನ್ನು ಹೇಳಿ ಗುರುತು ಉಂಗರವನ್ನು ಕೊಟ್ಟು ಕಳುಹಿಸಲು ಆತನ ದೂತನಾಗಿ ಬಂದೆನು; ಆತನು ತಾನು ಚನ್ನಾಗಿರುವದಾಗಿ ಹೇಳಿ ನಿನ್ನ ಯೋಗಕ್ಷೇಮಗಳನ್ನು ವಿಚಾರಿಸಿ ಬರಲು ನನ್ನನ್ನು ಕಳುಹಿಸಿದನು; ರಘುನಾಯಕನು ಸಮಸ್ತ ವೇದವೇತ್ತೃಗಳಿಗೂ ಪ್ರಧಾನನಾದವನು; ಬ್ರಹ್ಮಾಸ್ತ್ರಪ್ರಯೋಗ ಕುಶಲವನ್ನು ಬಲ್ಲವನು; ಲಕ್ಷ್ಮಣನು ನಿನಗೆ ನಮಸ್ಕಾರವನ್ನು ಮಾಡಿದ್ದಾಗಿ ಹೇಳಿ ಕಳುಹಿಸಿದನು." ಎಂದು ಹೇಳಿದನು.

ಹಾಗೆ ಹನೂಮಂತನ ಮುಖವಾರ್ತೆಯಿಂದ ರಾಮಲಕ್ಷ್ಮಣರ ಪರಿಣಾಮವಾರ್ತೆಯನ್ನು ಕೇಳಿದ ಸೀತಾದೇವಿಯು ಅತ್ಯಂತ ಸಂತೋಷಪಟ್ಟು ಆತನನ್ನು ಕುರಿತು "ಎಲೈ ಕಪಿಶ್ರೇಷ್ಠನೆ, ಬಹಳ ಕಾಲಕ್ಕೆ ಶ್ರೀರಾಮನ ಶುಭವಾರ್ತೆಯನ್ನು ಕೇಳಿದೆನು" ಎಂದು ನುಡಿದಳು.

ಈ ಪ್ರಕಾರದಲ್ಲಿ ನುಡಿಯುತ್ತಿದ್ದ ಸೀತಾದೇವಿಯ ಮಾತನ್ನು ಕೇಳುತ ಹನೂಮಂತನು ಮೆಲ್ಲಮೆಲ್ಲಗೆ ಸಮೀಪಕ್ಕೆ ಹೋಗಲು ಆ ದೇವಿಯು ಆತನು ಎಷ್ಟೆಷ್ಟು ಸಮೀಪಸೇರಿದನೋ ಅಷ್ಟಷ್ಟು ಭಯಪಟ್ಟು ಆತನ ರಾವಣನೆಂದು ಸಂಶಯಪಟ್ಟು ಆತನ ಸಂಭಾಷಣವು ಸಾಕಂತಲೂ ರಾವಣನು ರೂಪಾಂತರದಿಂದ ಬರುತ್ತಿದ್ದನೆಂತಲೂ ಕಂಗೆಡುತ ಆ ಮರದ ಕೊಂಬನ್ನು ಬಿಟ್ಟು ದುಃಖಾಕ್ರಾಂತೆಯಾಗಿ ಭೂಮಿಯಮೇಲೆ ಕುಳಿತುಕೊಂಡಳು. ಹನುಮಂತನು ಸೀತಾದೇವಿಯ ಸಮೀಪವನ್ನು ಸೇರಿ ಆಕೆಗೆ ನಮಸ್ಕಾರವನ್ನು ಮಾಡಿದನು; ಚಂದ್ರಮುಖಿಯಾದ ಸೀತಾದೇವಿಯು ಮತ್ತೂ ವಿಶ್ವಾಸವಿಲ್ಲದೆ ಭಯಪಟ್ಟು ಹನುಮಂತನನ್ನು ದೃಷ್ಟಿಸಿ ನೋಡದೆ ಬಹಳವಾಗಿ ನಿಟ್ಟುಸಿರುಬಿಡುತ ಆತನನ್ನು ಕುರಿತು "ಎಲೈ ಕಪಿಯೇ, ನೀನು ಕಪಿಯೋ—ಮಾಯಾವಿಯಾದ ರಾವಣನೊ! ಕಪಟವೇಷದಿಂದ ಇಂಥಾ ಮಾತುಗಳನ್ನು ನುಡಿಯುತ್ತಿದ್ದೀಯೊ! ನನಗೆ ಸಂಶಯದಿಂದ ದುಃಖವುಂಟಾಗುತ್ತದೆ; ಮನಸ್ಸಿಗೆ ಹರ್ಷವಾಗಲಿಲ್ಲ; ಜನಸ್ಥಾನದಲ್ಲಿ ರಾಕ್ಷಸಸ್ವರೂಪವನ್ನು ಬಿಟ್ಟು ಸನ್ಯಾಸಿವೇಷವನ್ನು ಧರಿಸಿಕೊಂಡು ನನ್ನನ್ನು ಮೋಸಮಾಡಿದ ರಾವಣನು ನಿನ್ನ ಹಾಗೂ ಬರಬಹುದು; ಕಾಮರೂಪಿಯಾದ ರಾಕ್ಷಸನು ಉಪವಾಸ ವ್ರತಾದಿಗಳಿಂದ ಕೃಶಾಂಗಿಯಾಗಿ ಕಂಗೆಟ್ಟು ಅನಾಥೆಯಾದ ನನಗೆ ಸಂತಾಪವನ್ನು ಮಾಡುವದು ಒಳ್ಳೇದಲ್ಲ. ನೀನು ಕಪಟವುಳ್ಳವನಲ್ಲ; ಭ್ರಮೆಯಿಂದ ನನ್ನ ಮನಸ್ಸಿಗೆ ಸಂಶಯಹುಟ್ಟಿತೊ ಏನೋ! ನಿನ್ನನ್ನು ಕಂಡಮಾತ್ರದಿಂದಲೇ ನನಗೆ ಅತ್ಯಂತ ಸಂತೋಷವು ಹುಟ್ಟಿತು! ಎಲೈ ಕಪಿಶ್ರೇಷ್ಠನೇ, ನೀನು ರಾಮದೂತನಾದ ಪಕ್ಷದಲ್ಲಿ ನನಗೆ ಅನೇಕ ಶ್ರೇಯಸ್ಸಾಗುವದು; ನನಗೆ ರಾಮಕಥೆಯು ಅತಿ ಸಂತೋಷಕರವಾದದ್ದು; ಆದ್ದರಿಂದ ಶ್ರೀರಾಮನ ಗುಣಕಥನಗಳನ್ನು ನನಗೆ ಸವಿಸ್ತಾರವಾಗಿ ಹೇಳು; ನದೀಪ್ರವಾಹವು ತಡಿಕರೆಯನ್ನು ಕರಗಿಸುವಂತೆ ನಿನ್ನ ಮಾತು ನನ್ನ ಮನಸ್ಸನ್ನು ಕರಗಿಸುತ್ತಿದೆ; ಈ ರಾಕ್ಷಸಿಯರಕಾವಲಿಗೊಳಗಾಗಿ ದುಃಖಪಡುತಿದ್ದ ನಾನು ತ್ರಿಜಟೆಯು ಕಂಡ ಸ್ವಪ್ನವನ್ನು ಕೇಳಿ ಮನೋಹರ್ಷದಿಂದಿದ್ದೆನು; ಆಮೇಲೆ ರಾಮದೂತನಾಗಿ ಬಂದ ನಿನ್ನನ್ನು ಕಂಡೆನು; ಸ್ವಪ್ನದಲ್ಲಾದರು ರಾಮಲಕ್ಷ್ಮಣರನ್ನು ಕಂಡೆನಾದರೆ ಶೋಕವನ್ನು ಬಿಡುವೆನು, ಸ್ವಪ್ನವನ್ನು ಕಂಡು ಹೇಳಿದ ತ್ರಿಜಟೆಯು ನನ್ನಲ್ಲಿ ಮಾತ್ಸರವುಳ್ಳವಳು; ಆದ್ದರಿಂದ ನಾನು ಅವಳ ಸ್ವಪ್ನದಲ್ಲಿ ವಿಶ್ವಾಸಪಡಲಿಲ್ಲ, ಸ್ವಪ್ನದಲ್ಲಿ ಕಪಿಯನ್ನು ಕಂಡರೆ ಶ್ರೇಯಸ್ಸು ದುರ್ಘಟವು; ನನಗೆ ಚಿತ್ತಭ್ರಮೆಯೊ—ಅಲ್ಲದೆ ವಾತಪ್ರಕೋಪದಿಂದುಟ್ಟಿದ ಉನ್ಮಾದವಿಕಾರವೊ! ಉನ್ಮಾದವಿಕಾರವೆಂದು ಹೇಳುವದಕ್ಕೂ ನಾನು ಮೈಮರತು ನಿನ್ನನ್ನು ಕಪಿಯೆಂದು ಹೇಳದಿರುವದಕ್ಕಿಲ್ಲ" ಎಂದು ನುಡಿದು ಬಹಳಹೊತ್ತು ತನ್ನ ಬುದ್ಧಿ ಬಲಾಬಲಗಳನ್ನು ವಿಚಾರಿಸಿ ರಾಕ್ಷಸರು ಕಾಮರೂಪಿಗಳಾದಕಾರಣ ಹನುಮಂತನು ಕಾಮರೂಪಿಯಾದ ರಾವಣನೆಂದೆಣಿಸಿ ಪ್ರತಿವಚನವನ್ನು ನುಡಿಯದೆ ಸುಮ್ಮನೇ ಇದ್ದಳು.

ಹನುಮಂತನು ಸೀತಾದೇವಿಯ ಅಂತರಂಗವನ್ನರಿತು ಮಧುರ ವಚನಗಳಿಂದ ಮನೋಹರ್ಷವನ್ನು ಮಾಡುತ "ಎಲೈ ತಾಯೇ, ಲೋಕದಲ್ಲಿ ಚಂದ್ರಸೂರ್ಯರು ಹ್ಯಾಗೇ ತೇಜಸ್ವಿಗಳೋ—ಕುಬೇರನು ಹ್ಯಾಗೇ ಸರ್ವೈಶ್ವರ್ಯಸಂಪನ್ನನೊ—ನಾರಾಯಣನು ಹ್ಯಾಗೇ ಪರಾಕ್ರಮಶಾಲಿಯಾಗಿ ಮಹಾ ಕೀರ್ತಿವಂತನೋ—ಸತ್ಯವಾದಿಯಾಗಿ ಮಧುರವಚನ ನುಡಿಜಾಣ್ಮೆಯುಳ್ಳ ಬೃಹಸ್ಪತಿಯು ಹ್ಯಾಗೇ ಲೋಕೋತ್ತಮನೊ—ಹಾಗೆ ಲೋಕೋತ್ತಮನಾದವನು ರಘುನಾಯಕನು; ಆಕಾರದಲ್ಲಿ ಮನ್ಮಥನಿಗೆ ಸಮಾನನಾದವನು; ಲೋಕೋಚಿತವಾದ ಕೋಪಪ್ರಸಾರವುಳ್ಳವನು, ಸಮಸ್ತ ಬಿಲ್ಲುಗಾರರಲ್ಲಿಯೂ ಪ್ರಸಿದ್ಧನಾಗಿ ಶತ್ರುಸಂಹಾರಕನಾಗಿ ತನ್ನ ಭುಜಬಲಪರಾಕ್ರಮದಿಂದ ಸಮಸ್ತ ಭೂಮಂಡಲವನ್ನೂ ರಕ್ಷಿಸುವವನು; ಆತನ ಪಟ್ಟದರಾಣಿಯಾದ ನಿನ್ನನ್ನು ಮಾಯಾರೂಪದಿಂದ ಮೋಸಮಾಡಿ ರಾವಣನು ಎತ್ತಿಕೊಂಡು ಬರುವದಕ್ಕೆಣಿಸಿದಾಗ ನೀನು ಆ ಮಾಯಾಮೃಗದಲ್ಲಿ ಭ್ರಮೆಯಿಟ್ಟು ಅದನ್ನು ಹಿಡಿ

ತರಹೇಳಿ ರಾಮಲಕ್ಷ್ಮಣರನ್ನು ಕಳುಹಿಸಿದೆ; ಆ ಸಮಯದಲ್ಲಿ ನಿನ್ನನ್ನು ಅಪಹರಿಸಿಕೊಂಡು ಬಂದ ರಾವಣನಿಗೆ ಮುಂದೆ ಆಗತಕ್ಕ ಫಲವನ್ನು ನೀನೇ ನೋಡುವೇ; ಅತಿ ಪರಾಕ್ರಮಶಾಲಿಯಾಗಿ ಶತ್ರುಭಯಂಕರನಾದ ರಘುನಾಯಕನು ಪ್ರಜ್ವಲಿಸುತಿರುವ ಯಜ್ಞಪುರುಷನಿಗೆ ಸಮಾನವಾದ ರಾಮಬಾಣವನ್ನು ಪ್ರಯೋಗಿಸಿ ಅತಿ ಶೀಘ್ರದಲ್ಲಿ ರಣರಂಗದಲ್ಲಿ ರಾವಣನನ್ನು ಕೊಲ್ಲುವನು; ಆದಕಾರಣ ರಘುನಾಯಕನಿಂದ ಕಳುಹಿಸಿಕೊಂಡು ಬಂದ ರಾಮದೂತನಾದ ನಾನು ನಿನ್ನ ಸಮೀಪಕ್ಕೆ ಬಂದೆನು; ನಿನ್ನ ವಿರಹದುಃಖದಿಂದ ಕಂಗೆಟ್ಟ ರಘುನಾಯಕನು ತಾನು ಪರಿಣಾಮದಲ್ಲಿರುವ ವೃತ್ತಾಂತವನ್ನು ನಿನಗೆ ಹೇಳಲು ನನ್ನನ್ನು ಕಳುಹಿಸಿದನು; ಆತನ ತಮ್ಮನಾದ ಲಕ್ಷ್ಮಣನು ನಮಸ್ಕಾರಪೂರ್ವಕವಾಗಿ ತನ್ನ ಯೋಗಕ್ಷೇಮವಾರ್ತೆಯನ್ನು ನಿನಗೆ ಹೇಳಿಕಳುಹಿಸಿದನು, ಸುಗ್ರೀವ ಲಕ್ಷ್ಮಣ ಸಮೇತನಾದ ರಘುನಾಯಕನು ಅನವರತವಾಗಿ ನಿನ್ನನ್ನೇ ಸ್ಮರಿಸಿಕೊಂಡಿಧಾನೆ. ಎಲೈ ತಾಯೇ, ಈ ರಾಕ್ಷಸರವಶವಾಗಿರುವ ನೀನು ದೈವಾನುಕೂಲದಿಂದ ಜೀವವಂತೆಯಾಗಿದ್ದೀ; ಹ್ಯಾಗೂ ಲಕ್ಷ್ಮಣಸಮೇತನಾದ ಶ್ರೀರಾಮನು ಅನೇಕಕೋಟಿ ವಾನರಸೇನೆಗಳ ಮಧ್ಯದಲ್ಲಿರಲು ಅತಿಪರಾಕ್ರಮಶಾಲಿಯಾದ ಸುಗ್ರೀವನನ್ನು ನೀನು ಕಾಣುವೆ; ಸುಗ್ರೀವನ ಪ್ರಧಾನನಲ್ಲದೆ ನಾನು ಮತ್ತೊಬ್ಬನಲ್ಲ; ನಾನು ಸುಗ್ರೀವನ ವಾಕ್ಯದಿಂದ ಸಮುದ್ರವನ್ನು ದಾಟಿ ಲಂಕಾಪಟ್ಟಣವನ್ನೂ ರಾವಣನ ಅಂತಃಪುರವನ್ನೂ ಹೊಕ್ಕ ದುರಾತ್ಮನಾದ ರಾವಣನ ಶಿರಸ್ಸಿನಮೇಲೆ ನನ್ನ ಪಾದನ್ಯಾಸವನ್ನು ಮಾಡಿ ಅತ್ಯಂತ ಸಾಹಸದಿಂದ ನಿನ್ನನ್ನು ನೋಡಿದೆನು; ನಾನು ದುರಾತ್ಮನಾದ ರಾವಣನೆಂದು ಎಣಿಸಬೇಡ; ನನ್ನಲ್ಲಿ ಸಂಶಯವನ್ನು ಬಿಟ್ಟು ವಿಶ್ವಾಸವನ್ನು ಮಾಡಿ ನನ್ನ ಮಾತನ್ನು ಸತ್ಯವಾಗೆಣಿಸು” ಎಂದು ನುಡಿದನು.

---

## ೩೫ನೇ ಅಧ್ಯಾಯ.

## ಶ್ರೀರಾಮನ ಅಂಗಲಕ್ಷಣ ವರ್ಣನೆ.

ಹೀಗೆ ಹನುಮಂತನು ಹೇಳಲು ಸೀತಾದೇವಿಯು “ಎಲೈ ವಾನರನೇ, ನಿನಗೆ ಶ್ರೀರಾಮನ ದರ್ಶನವೆತ್ತಣದು? ನೀನು ಲಕ್ಷ್ಮಣನನ್ನು ಹ್ಯಾಗೆ ಬಲ್ಲೆ? ಮನುಷ್ಯರಿಗೂ ಕಪಿಗಳಿಗೂ ಮಿತ್ರತ್ವವು ಯಾವಪ್ರಕಾರದಲ್ಲುಂಟಾಗುವದು? ಶ್ರೀರಾಮನ ಕುರುಹುಗಳೇನು? ಲಕ್ಷ್ಮಣನ ಕುರುಹುಗಳೇನು? ಅವರ ಕುರುಹುಗಳನ್ನು ನೀನು ಸವಿಸ್ತಾರವಾಗಿ ಹೇಳಿದೆಯಾದರೆ ಸಂಶಯವು ಬಿಟ್ಟು ಮನಸ್ಸಿಗೆ ಮಹಾ ಪರಿಣಾಮವಾಗುವುದು; ಶ್ರೀರಾಮನ ವಾಸಸ್ಥಾನವ್ಯಾವುದು! ಆತನ ಸ್ವರೂಪವ್ಯಾವುದು! ಆತನ ತೊಡೆಗಳು ಹ್ಯಾಗಿವೆ? ಅವಯವಗಳು ಹ್ಯಾಗಿವೆ?” ಎಂದು ಕೇಳಿದಳು.

ಹನುಮಂತನು “ಎಲೈ ಸೀತಾದೇವಿಯೇ, ನೀನು ಕೇಳಿದ ರಾಮಲಕ್ಷ್ಮಣರ ಲಕ್ಷಣಗಳನ್ನು ನಾನು ದೈವಾನುಕೂಲದಿಂದ ಬಲ್ಲೆನು; ರಾಮಲಕ್ಷ್ಮಣರ ಲಕ್ಷಣಗಳನ್ನು ಹೇಳುವೆನು ಕೇಳು. ರಘುನಾಯಕನು ತಾವರೇ ಎಸಳುಗಳಂತೆ ಕೆಂಪಾದ ಕಣ್ಣುಗಳುಳ್ಳವನು; ನೋಡುವದಕ್ಕೆ ಮನೋಹರವಾದವನು; ರೂಪಲಾವಣ್ಯಾದಿ ಗುಣಸಂಪನ್ನನು; ಕಾಂತಿಯಲ್ಲಿ ಸೂರ್ಯನಿಗೆ ಸಮಾನನು; ಲೋಕಮರ್ಯಾದೆಯನ್ನು ಮೀರದಹಾಗೆ ನಡೆಸುವವನು; ಅಧಿಕ ತೇಜಸ್ವಿಯಾದವನು; ಬ್ರಹ್ಮಚರ್ಯವ್ರತದಲ್ಲಿರುವವನು; ಸತ್ಪುರುಷರನ್ನು ಪರಿಪಾಲಿಸುವವನು, ಧರ್ಮಪ್ರವರ್ತಕನು, ರಾಜನೀತಿಯಲ್ಲಿ ಚತುರನು; ಬ್ರಾಹ್ಮಣರನ್ನು ಸನ್ಮಾನಿಸುವವನು; ಶಾಸ್ತ್ರಜ್ಞಾನವುಳ್ಳವನು; ವಿನಯಸಂಪನ್ನನು; ಶತ್ರುಸಂಹಾರಕನು; ಯಜುರ್ವೇದವಿದ್ಯಾವಿಶಾರದನು; ವೇದಾರ್ಥ ತತ್ವಜ್ಞರಾದ ಬ್ರಾಹ್ಮಣರಿಂದ ಪೂಜ್ಯನಾದವನು; ಧನುರ್ವೇದದಲ್ಲಿ ನಿಪುಣನು; ವಿಶಾಲವಾದ ಮುಡುಹುಳ್ಳವನು; ಶಂಖದಂತೆ ಕೊರಳುಳ್ಳವನು; ದೀರ್ಘವಾದ ಭುಜಗಳುಳ್ಳವನು; ಶೋಭನವಾದ ಮುಖವುಳ್ಳವನು; ಕಾಣಬಾರದ ಎದೆಯುಳ್ಳವನು; ಕೆಂಪಾದ ಕಡೆಗಣ್ಣುಗಳುಳ್ಳವನು, ಮಹಾ ಪ್ರಸಿದ್ಧನಾದವನು; ಭೇರಿಧ್ವನಿಯಂತೆ ಗಂಭೀರವಾದ ಧ್ವನಿಯುಳ್ಳವನು; ಮನೋ

ಹರವಾದ ತನುಕಾಂತಿಯುಳ್ಳವನು, ಪ್ರತಾಪಶಾಲಿಯಾದವನು! ಲಕ್ಷ್ಮಣರೂ ಅಕ್ಷತವಾದ ಅಂಗೋಪಾಂಗಗಳುಳ್ಳವನು; ನೀಲಮೇಘದಂತೆ ಶ್ಯಾಮಲವರ್ಣನು; ಲೋಕಪ್ರಸಿದ್ಧವಾದ ಶುಭಲಕ್ಷಣಗಳುಳ್ಳವನು! ಮತ್ತೂ ಶ್ರೀರಾಮನು —

"ತ್ರಿಸ್ಥಿರಸ್ತ್ರಿಪ್ರಲಂಬಶ್ಚ । ತ್ರಿಸಮಸ್ತ್ರಿಷುಚೋನ್ನತಃ ॥
ತ್ರಿತಾಮ್ರಸ್ತ್ರಿಷುಚಸ್ನಿಗ್ಧೋ । ಗಂಭೀರಸ್ತ್ರಿಷುನಿತ್ಯಶಃ ॥ ೧ ॥
"ತ್ರಿವಲೀವಾಂಸ್ತ್ರ್ಯವನತ । ಶ್ಚತುರ್ವ್ಯಂಗ್ಯಸ್ತ್ರಿಶೀರ್ಷವಾನ್ ॥
ಚತುಷ್ಕಲಶ್ಚತುರ್ಲೇಖ । ಶ್ಚತುಷ್ಕಿಷ್ಕುಶ್ಚತುಸ್ಸಮಃ ॥ ೨ ॥
"ಚತುರ್ದಶಸಮದ್ವಂದ್ವ । ಶ್ಚತುರ್ದಂಷ್ಟ್ರಶ್ಚತುರ್ಗತಿಃ ॥
ಮಹೋಷ್ಠಹನುನಾಶಶ್ಚ । ಪಂಚಸ್ನಿಗ್ಧೋಷ್ಟವಂಶವಾನ್ ॥ ೩ ॥
"ದಶಪದ್ಮೋದಶಬೃಹ । ತ್ತ್ರಿಭಿರ್ವ್ಯಾಪ್ತೋದ್ವಿಶುಕ್ಲವಾನ್ ॥
ಷಡುನ್ನತೋನವತನು । ಸ್ತ್ರಿಭಿರ್ವ್ಯಾಪ್ನೋತಿರಾಘವಃ ॥ ೪ ॥

"ತ್ರಿಸ್ಥಿರಃ ಅಂದರೆ ಎದೆಕಟ್ಟು ಮುಂಗೈ ಮುಷ್ಟಿ ಈ ಮೂರು ಘಟ್ಟಿಯಾಗುಳ್ಳವನು; ತ್ರಿಪ್ರಲಂಬಃ ಅಂದರೆ: ಎರಡು ತೋಳುಗಳು ವೃಷಣ ಹುಬ್ಬು ಈ ಮೂರೂ ದೀರ್ಘವಾಗಿರುವವನು; (ಅಂಥಾವನು ದೀರ್ಘಾಯುಸ್ಸುಳ್ಳವನು) ತ್ರಿಸಮಃ ಅಂದರೆ: ಮುಂಡೀ ಕೂದಲ ಅಗ್ರಗಳು ಸಮಾನವಾಗಿಯೂ ವೃಷಣಗಳು ಒಂದು ಕೆಳಗೇ ಒಂದು ಮೇಲೆ ಇರದೆ ಸಮವಾಗಿಯೂ ಎರಡು ಮೊಳಕಾಲುಗಳೂ ಸಮವಾಗಿಯೂ ಇರುವವನು; (ಹಾಗಿರುವವನು ಭೂಮಂಡಲಾಧಿಪತಿಯಾಗುವನು) ತ್ರಿಷುಚೋನ್ನತಃ ಅಂದರೆ; ಹೊಟ್ಟೇ ಹೊಕ್ಕುಳು ಎದೆಕಟ್ಟು ಈ ಮೂರೂ ಮೇಲುಬ್ಬಾಗುಳ್ಳವನು. ತ್ರಿತಾಮ್ರಃ ಅಂದರೆ: ಕೈಬೆರಳುಗುರುಗಳು ಕಾಲುಬೆರಳುಗುರುಗಳು ಅಂಗಾಲ ರೇಖೆಗಳು ಈ ಮೂರೂ ಕೆಂಪಾಗಿರುವವನು. ತ್ರಿಷುಚಸ್ನಿಗ್ಧಃ ಅಂದರೆ: ಪಾದದರೇಖೆ ಶಿಶ್ನ ಕೇಶಪಾಶ ಈ ಮೂರೂ ನುಣುಪಾಗಿರುವವನು; ಗಂಭೀರಸ್ತ್ರಿಷುನಿತ್ಯಶಃ ಅಂದರೆ. ಸ್ವರ ಸತ್ವ ಹೊಕ್ಕುಳಕುಳಿ ಈ ಮೂರೂ ಆಳವನ್ನು ಕಾಣದ ಹಾಗೆ ಗಂಭೀರವಾಗಿರುವವನು ತ್ರಿವಳೀವಾನ್ ಅಂದರೆ; ಕಿಬ್ಬೊಟ್ಟೆಯಲ್ಲಾಗಲಿ ಕೊರಳಲ್ಲಾಗಲಿ ಮೂರು ರೇಖೆಗಳುಳ್ಳವನು; ತ್ರ್ಯವನತಃ ಅಂದರೆ; ಸ್ತನಾಗ್ರಗಳು ಪಾದರೇಖೆಗಳು ಚುಬುಕ ಈ ಮೂರೂ ಮುಂದೆ ಬಂದಿರುವವನು; (ಈ ಲಕ್ಷಣಗಳುಳ್ಳವರು ಗುರುವು ಇಷ್ಟದೇವತೆಯು ಬ್ರಾಹ್ಮಣರು ಈ ಮೂವರನ್ನು ಕಾಣುವಾಗ ತಲೆಯನ್ನು ಬೊಗ್ಗಿಸಿಕೊಂಡಿರುವರು) ಚತುರ್ವ್ಯಂಗ್ಯಃ ಅಂದರೆ; ಕೊರಳು ಶಿಶ್ನ ಪೃಷ್ಠಭಾಗ ಕಣ್ಣು ಕಾಲುಗಳು ಇವು ನಾಲ್ಕೂ ಗುಡ್ಡವಾಗುಳ್ಳವನು; ತ್ರಿಶೀರ್ಷವಾನ್ ಅಂದರೆ: ಮೂರು ಸುಳಿಗಳುಳ್ಳ ತಲೆಯುಳ್ಳವನು; ಚತುಷ್ಕಲಃ ಅಂದರೆ: ಹಸ್ತಾಂಗುಷ್ಠ ಪಾದಾಂಗುಷ್ಠ ಮೂಲಗಳಲ್ಲಿಯೂ ಹಣೆಯಲ್ಲಿಯೂ ನಾಲ್ಕು ನಾಲ್ಕಾದರೂ ಮೂರು ಮೂರಾದರೂ ಎರಡೆರಡಾದರೂ ಒಂದೊಂದಾದರೂ ರೇಖೆಗಳುಳ್ಳವನು; (ಹಾಗುಳ್ಳವನು ಮಂಡಲಾಧಿಪತಿಯಾಗುವನು; ಈ ಮೂರು ಸ್ಥಳಗಳಲ್ಲಿಯೂ ನಾಲ್ಕು ನಾಲ್ಕು ರೇಖೆಗಳಿದ್ದರೆ ಇನ್ನೂರು ವರುಷಗಳು ಬದುಕುವನು; ಮೂರು ಮೂರು ರೇಖೆಗಳಿದ್ದರೆ ನೂರು ವರುಷಗಳೂ ಎರಡೆರಡು ರೇಖೆಗಳಿದ್ದರೆ ಅರವತ್ತು ವರುಷಗಳೂ ಒಂದೊಂದು ರೇಖೆಯಿದ್ದರೆ ಇಪ್ಪತ್ತು ವರುಷಗಳೂ ಬದುಕುವನು). ಚತುರ್ಲೇಖಃ ಅಂದರೆ: ವಜ್ರರೇಖೆ ಧ್ವಜರೇಖೆ ಮತ್ಸ್ಯರೇಖೆ ಛತ್ರರೇಖೆ ಈ ನಾಲ್ಕು ರೇಖೆಗಳುಳ್ಳವನು. (ಇಂಥಾ ರೇಖೆಗಳುಳ್ಳ ಚತುಷ್ಕಲನು ಸಮಸ್ತಭೂಮಂಡಲಾಧಿಪತಿಯಾಗುವನು). ಚತುಷ್ಕಿಷ್ಕುಃ ಅಂದರೆ: ನಾಲ್ಕು ಕಿಷ್ಕುಗಳ ಪ್ರಮಾಣವುಳ್ಳವನು; (ಕಿಷ್ಕು ಅಂದರೆ; ಇಪ್ಪತ್ತುನಾಲ್ಕು ಅಂಗುಲಗಳು; ಅಂಥಾ ಕಿಷ್ಕುಗಳು ನಾಲ್ಕಾದರೆ ತೊಂಭತ್ತಾರಂಗುಲಗಳಾಗುವವು, ಇಷ್ಟು ಉದ್ದವಾದವನು ಚತುಷ್ಕಿಷ್ಕುಯೆನಿಸಿಕೊಳ್ಳುವನು). ಚತುಸ್ಸಮಃ ಅಂದರೆ: ಎರಡು ಮೊಣಕಾಲುಗಳೂ ಎರಡು ತೋಳುಗಳೂ ಎರಡು ತೊಡೆಗಳೂ ಎರಡು ಕದಂಪುಗಳೂ ಸಮಾನವಾಗುಳ್ಳವನು; ಚತುರ್ದಶಸಮದ್ವಂದ್ವಃ ಅಂದರೆ. ಎರಡೆರಡಾಗಿರುವ ಹದಿನಾಲ್ಕು ಅಂಗಗಳೂ ಸಮವಾಗುಳ್ಳವನು; (ಹುಬ್ಬು

ಗಳು ಮೂಗಿನ ಹೊಳೆಗಳು ಕಣ್ಣುಗಳು ರೆಪ್ಪೆಗಳು ತುಟಿಗಳು ಗಲ್ಲಗಳು ಕಿವಿಗಳು ಭುಜಗಳು ಮೊಳಕೈಗಳು ವೃಷಣಗಳು ಮೊಣಕಾಲುಗಳು ಪಾದಗಳು ಕೈಗಳು ತೊಡೆಗಳು ಈ ಹದಿನಾಲ್ಕೂ ದ್ವಂದ್ವಾಂಗಗಳು). ಚತು ರ್ದಂಷ್ಟ್ರಃ ಅಂದರೆ: ದಂತಪಜ್ತಿಗಳಲ್ಲಿ ಕೆಳಗೂ ಮೇಲೂ ಕೋರದಾಡೆಯಾಕಾರವಾದ ನಾಲ್ಕು ದಂತಗಳುಳ್ಳವನು; (ಈ ಲಕ್ಷಣಗಳುಳ್ಳವನು ಮಹಾಪುರುಷನೆನಿಸಿಕೊಳ್ಳುವನು). ಚತುರ್ಗತಿಃ ಅಂದರೆ; ಸಿಂಹದಂತೆಯೂ ವ್ಯಾಘ್ರ ದಂತೆಯೂ ಮದ್ದಾನೆಯಂತೆಯೂ ವೃಷಭದಂತೆಯೂ ಗಂಭೀರವಾದ ನಡೆಯುಳ್ಳವನಾಗಿರುವವನು. ಮಹೋಷ್ಠಃ ಅಂದರೆ: ತೊಂಡೇಹಣ್ಣಿನಂತೆ ಕೆಂಪಾಗಿ ಉರುಟಾದ ತುಟಿಯುಳ್ಳವನು. ಹನುನಾಶಕ್ಷ ಅಂದರೆ; ಮೇಲುಬ್ಬಾದ ಕದಂಪುಳ್ಳದ್ದಾಗಿ ಮುಂಬಾಗಾಗಿರುವ ತುದಿಮೂಗುಳ್ಳವನು; ಪಂಚಸ್ನಿಗ್ಧಃ ಅಂದರೆ; ನುಡಿ ಮುಖ ಕುರುಳು ರೋಮ ವೈ ಚರ್ಮ ಈ ಐದೂ ನಯವಾಗುಳ್ಳವನು. ಅಷ್ಟವಂಶವಾನ್ ಅಂದರೆ; ಬೆನ್ನುಮೂಳೆ ವೃಷಣ ಹಸ್ತಪಾದ ಬೆರ ಳುಗಳು ಮೂಗು ಕಣ್ಣು ಕಿವಿ ಕತ್ತು ಈ ಎಂಟೂ ನೀಟವಾಗುಳ್ಳವನು; ದಶಪದ್ಮಃ ಅಂದರೆ: ಪದ್ಮಾಕಾರವಾದ ಹತ್ತು ಲಕ್ಷಣಗಳುಳ್ಳವನು; ಆವಾವವೆನೆ (ಮುಖ ಕಣ್ಣು ಬಾಯಿ ನಾಲಿಗೆ ತುಟಿ ಅಂಗಳು ಸ್ತನ ಉಗುರು ಹಸ್ತ ಪಾದ ಈ ಹತ್ತು ಕಮಲಾಕಾರವಾಗುಳ್ಳವನು). ದಶಬೃಹತ್ ಅಂದರೆ: ಎದೆಕಟ್ಟು ಶಿರಸ್ಸು ಹಣೆ ಕೊರಳು ಭು ಜಗಳು ಮುಡುಹು ಎರಡೆಳೆ ಪೊರವಾರ ಸ್ವರ ಈ ಹತ್ತೂ ದೊಡ್ಡವಾಗುಳ್ಳವನು ತ್ರಿಭಿರ್ವ್ಯಾಪ್ತಃ ಅಂದರೆ: ತೇಜಸ್ಸಿನಿಂದಲೂ ಕೀರ್ತಿಯಿಂದಲೂ ಐಶ್ವರ್ಯದಿಂದಲೂ ಪರಿಪೂರ್ಣವಾದವನು. ದ್ವಿಶುಕ್ಲವಾನ್ ಅಂದರೆ; ಮಾತೃಪಿ ತೃವಂಶಗಳಲ್ಲಿ ಪರಿಶುದ್ಧವಾದವನಾಗಿಯೂ ವಿದ್ಯಾಪ್ರೌಢಿಯಾಗಿಯೂ ಕರ್ಮಕಲಾಪವನ್ನರಿತವನಾಗಿಯೂ ಇರು ವವನು. ಷಡುನ್ನತಃ ಅಂದರೆ; ಕಂಕುಳು ಹೊಟ್ಟೆ ಎದೆಕಟ್ಟು ಮೂಗು ರೆಪ್ಪೆ ಹೆಕ್ಕತ್ತು ಈ ಆರೂ ನೀಟವಾಗುಳ್ಳ ವನು. ನವತನುಃ ಅಂದರೆ: ಬೆರಳು ಮಂಡೆಯಕೂದಲು ಗಡ್ಡ ಉಗುರು ಚರ್ಮ ಶಿಶ್ನ ಬುದ್ಧಿ ನೋಟ ಶರೀರ ರೋ ಮ ಈ ಒಂಭತ್ತೂ ಸೂಕ್ಷ್ಮವಾಗುಳ್ಳವನು. ತ್ರಿಭಿರ್ವ್ಯಾಪ್ನೋತಿ ಅಂದರೆ: ಪೂರ್ವಾಹ್ಣ ಅಪರಾಹ್ಣ ಮಧ್ಯಾಹ್ನಗ ಳೆಂಬ ಕಾಲತ್ರಯಗಳಲ್ಲಿಯೂ ಮಾಡುವ ಧರ್ಮಾರ್ಥಕಾಮಗಳೆಂಬ ಪುರುಷಾರ್ಥತ್ರಯದಿಂದ ಯುಕ್ತನಾದವನು. ಇಂಥಾ ಲಕ್ಷಣಗಳಿಂದ ಶ್ರೀರಾಮನು ಪರಿಪೂರ್ಣನಾದವನು! ಸತ್ಯ ಧರ್ಮಗಳಲ್ಲಿ ನಿಷ್ಠೆಯುಳ್ಳವನು; ದುಷ್ಟ ನಿಗ್ರಹ ಶಿಷ್ಟಪರಿಪಾಲನಗಳಲ್ಲಿ ನಿಪುಣನು; ದೇಶಕಾಲಗಳ ವಿಭಾಗವನ್ನು ಬಲ್ಲವನು; ಸಮಸ್ತ ಪ್ರಾಣಿಗಳಲ್ಲಿ ಯೂ ಪ್ರಿಯವಾಗಿ ನುಡಿಯುವವನು! ಲಕ್ಷ್ಮಣನು ರೂಪದಿಂದಲೂ ದಯಾದಾಕ್ಷಿಣ್ಯಾದಿ ಗುಣಗಳಿಂದಲೂ ಶ್ರೀರಾಮ ನಿಗೆ ಸಮಾನನು! ಇಂಥಾ ಸದ್ಗುಣಸಂಪನ್ನರಾದ ರಾಮಲಕ್ಷ್ಮಣರು ನಿನ್ನನ್ನು ಹುಡುಕುತ ವನಾಂತರದಲ್ಲಿ ಸಂಚ ರಿಸಿಕೊಂಡಿದ್ದ ಸಮಯದಲ್ಲಿ ಕಪಿನಾಯಕನಾದ ವಾಲಿಯಿಂದ ರಾಜ್ಯಪರಿತ್ಯಾಗಮಾಡಿ ಋಷ್ಯಮೂಕಪರ್ವತದ ತಪ್ಪಲಿನಲ್ಲಿದ್ದ ಸುಗ್ರೀವನನ್ನು ಕಂಡರು; ನಾನು ಸುಗ್ರೀವನ ಪ್ರಧಾನನಾಗಿ ಆತನ ಸಂಗಡಲೇ ಇದ್ದೆನು; ರಾಮ ಲಕ್ಷ್ಮಣರು ನಾರುಶೀರೆಗಳನ್ನುಟ್ಟು ಬಿಲ್ಲುಬಾಣಗಳನ್ನು ಧರಿಸಿಕೊಂಡು ದೈವಗತಿಯಿಂದ ಋಷ್ಯಮೂಕಗಿರಿಗೆ ಬರಲು ಸುಗ್ರೀವನು ಅವರನ್ನು ಕಂಡು ಭಯಪಟ್ಟು ಆ ಪರ್ವತದ ಕೋಡುಕಲ್ಲುಗಳಲ್ಲಿ ಹಾರಿ ನೋಡಿ ನೆಗೆದು ಓಡಾಡಿ ಕಂಗೆಟ್ಟು ನನ್ನನ್ನು ಕರೆದು ಆಯುಧಪಾಣಿಗಳಾಗಿ ಬರುತಿದ್ದವರು ಯಾರೆಂದು ವಿಚಾರಿಸಿಕೊಂಡು ಬರ ಹೇಳಿ ಕಳುಹಿಸಿದನು; ನಾನು ರೂಪಲಕ್ಷಣಸಂಪನ್ನರಾದ ರಾಮಲಕ್ಷ್ಮಣರ ಸಮೀಪಕ್ಕೆ ಹೋಗಿ ಕಾಣಿಸಿಕೊಂಡು ಕೈಮುಗಿದು ನಿಲ್ಲಲಾಗಿ ಪ್ರಾಜ್ಞರಾದ ಅವರು ನನ್ನನ್ನು ಕಂಡು ಮಹಾಸಂತೋಷಪಟ್ಟು ಸುಗ್ರೀವನ ಸಮೀಪಕ್ಕೆ ಬಂದು ಮಾತನಾಡಬೇಕೆಂದು ಹೇಳಿದರು; ನಾನು ಮಹಾಪ್ರಸಾದವೆಂದು ಅವರಿಬ್ಬರನ್ನೂ ನನ್ನಮೇಲೆ ಕುಳ್ಳಿರಿಸಿ ಕೊಂಡು ಸುಗ್ರೀವನಿದ್ದ ಎಡೆಗೆ ಹೋಗಿ ಆತನಿಗೆ ಅವರು ಬಂದಿರುವದನ್ನು ತಿಳುಹಿಸಿದೆನು; ಆತನು ಒಳ್ಳೇದಾ ಯಿತೆಂದು ರಾಮಲಕ್ಷ್ಮಣರನ್ನು ಎದಿರುಗೊಂಡು ತನ್ನ ಆಶ್ರಮಕ್ಕೆ ಕರತಂದು ಅರ್ಘ್ಯಪಾದ್ಯಾದಿ ಸತ್ಕಾರವನ್ನು ಮಾಡಿ ಕುಳ್ಳಿರಿಸಿ ಅನ್ಯೋನ್ಯವಾಗಿ ತಮ್ಮ ಸುಖಸತ್ಕಥಾಲಾಪಗಳಿಂದ ತಮ್ಮ ಕಾರ್ಯಸ್ಥಿತಿಗಳನ್ನು ಮಾತನಾಡಿ ಕೊಂಡಿದ್ದರು; ಸುಗ್ರೀವನು ತನ್ನ ಅಣ್ಣನಾದ ವಾಲಿಯು ತನ್ನನ್ನು ರಾಜ್ಯಭ್ರಷ್ಟನಾಗಿ ಮಾಡಿ ತನ್ನ ಸ್ತ್ರೀಯ

ನ್ನಪಹರಿಸಿ ಹೊರಡಿಸಿದ ವರ್ತಮಾನವನ್ನು ತಿಳುಹಿಸಿದನು; ಆಗ ಲಕ್ಷ್ಮಣನು ನೀವು ಅಯೋಧ್ಯಾಪಟ್ಟಣದಿಂದ ಬಂದ ವೃತ್ತಾಂತವನ್ನೂ ರಾವಣನು ನಿನ್ನನ್ನಪಹರಿಸಿಕೊಂಡು ಹೋದ ವೃತ್ತಾಂತವನ್ನೂ ಹೇಳಿದನು, ಸುಗ್ರೀವನು ಆ ಮಾತನ್ನು ಕೇಳಿ ದುಃಖಪಟ್ಟನು, ಆಮೇಲೆ ರಾವಣನು ನಿನ್ನನ್ನು ಅಪಹರಿಸಿಕೊಂಡು ಬರುವ ಸಮಯದಲ್ಲಿ ನೀನು ನಿನ್ನ ಮೇಲುಹೊದಕೆಯ ವಸ್ತ್ರವನ್ನರದು ಕಟ್ಟಿಹಾಕಿದ ಆಭರಣಗಳನ್ನು ನಾವು ಐದುಮಂದಿ ಕಪಿಗಳು ಕಂಡು ತಂದುದನ್ನು ಶ್ರೀರಾಮನ ವಶಕ್ಕೆ ಒಪ್ಪಿಸಿದೆವು; ಆ ಆಭರಣಗಳನ್ನು ತೆಗೆದುಕೊಂಡು ನಿನ್ನವೆಂದು ನಿಶ್ಚಯಿಸಿ ತೊಡೆಯಮೇಲಿರಿಸಿಕೊಂಡು ಆ ಭೂಷಣಗಳನ್ನು ನೋಡಿ ನೋಡಿ ಬಹಳವಾಗಿ ದುಃಖಪಟ್ಟನು, ಮತ್ತು ಆ ಭೂಷಣಗಳನ್ನು ನೋಡಿದ್ದರಿಂದ ರಘುನಾಯಕನ ಹೃದಯದಲ್ಲಿ ಹೊಗೆಯಾಡುತ್ತಿದ್ದ ವಿರಹಶೋಕಾಗ್ನಿಯು ಜ್ವಲಿಸಿತೋ ಎಂಬಂತೆ ಹೆಚ್ಚುತಿತ್ತು; ನಾನು ನಾನಾಪ್ರಕಾರವಾದ ಮನ್ನಣೆಯ ವಾಕ್ಯಗಳಿಂದ ಸಂತವಿಡಲು ಆತನು ಲಕ್ಷ್ಮಣಸಮೇತನಾಗಿ ದುಃಖಪಡುತ ನಿನ್ನ ಆಭರಣಗಳನ್ನು ನಮಗೆ ತೋರಿಸಿ ಸುಗ್ರೀವನ ವಶಕ್ಕೆ ಕೊಟ್ಟನು; ಆ ಬಳಿಕ ನಿನ್ನನ್ನು ಕಾಣದೆ ವಿರಹತಾಪದಿಂದ ಪರಿತಪಿಸುತಿದ್ದನು; ನಿನ್ನ ನಿಮಿತ್ತವಾಗಿ ಶೋಕಮಾಡುತ ಆಹಾರ ನಿದ್ರೆಗಳಿಲ್ಲದೆ ಪಾಕಶಾಲೆಯಲ್ಲಿ ಅಗ್ನಿಯು ಪ್ರಜ್ವಲಿಸುವಂತೆ ತನ್ನ ಮನಸ್ಸಿನಲ್ಲಿ ವಿರಹಶೋಕಾಗ್ನಿಯು ತಪಿಸುತಿರಲು ರಘುನಾಯಕನು ನಿನ್ನನ್ನು ಕಾಣದ್ದರಿಂದ ಭ್ರಮೆಗೊಂಡಂತೆ ಹಂಬಲಿಸುತಿದ್ದನು, ಭೂಕಂಪವಾದಲ್ಲಿ ಪರ್ವತಗಳು ಚಲಿಸುವಂತೆ ನಿನ್ನ ವಿರಹತಾಪದಿಂದ ನಡುಗುತಿದ್ದನು; ಮನೋಹರವಾದ ವನಾಂತರಗಳಲ್ಲಿಯೂ ರಮ್ಯವಾದ ನದೀತೀರಗಳಲ್ಲಿಯೂ ಸೊಬಗಾದ ಜರೆಗಳಲ್ಲಿಯೂ ಸಂಚಾರಮಾಡುತ ನಿನ್ನನ್ನು ಕಾಣದ್ದರಿಂದ ಯಾವ ವಸ್ತುವಿನಲ್ಲಿಯೂ ಮನಸ್ಸಿಡುವದಿಲ್ಲ!

"ರಘುನಾಯಕನು ಸಮಸ್ತ ಮಿತ್ರಬಾಂಧವಸಮೇತನಾದ ರಾವಣನನ್ನು ಕೊಂದು ಶೀಘ್ರದಲ್ಲಿ ನಿನ್ನನ್ನು ಬಿಡಿಸುವದಕ್ಕಾಗಿ ಸುಗ್ರೀವನೊಡನೆ ಮಾತನಾಡಿ ಮೊದಲು ಕಿಷ್ಕಿಂಧಾ ಪಟ್ಟಣಕ್ಕೆ ಹೋಗಿ ಸಮರದಲ್ಲಿ ವಾಲಿಯನ್ನು ಕೊಂದು ಸುಗ್ರೀವನಿಗೆ ಪಟ್ಟವನ್ನು ಕಟ್ಟಿ ಆಮೇಲೆ ಸಮಸ್ತ ಕಪಿಸೇನೆಯನ್ನೂ ಕೂಡಿಕೊಂಡು ದಂಡೆತ್ತಿಬಂದು ರಾವಣನನ್ನು ಕೊಂದು ನಿನ್ನನ್ನು ಕರಕೊಂಡು ಹೋಗಬೇಕೆಂದು ಸಂಕೇತವನ್ನು ಮಾಡಿದನು; ಹಾಗೇ ವಾಲಿಯು ಮಡಿದು ಸಮಸ್ತ ವಾನರ ಸೇನೆಗಳು ಕೂಡಿದ ಬಳಿಕ ಅನೇಕ ಕಪಿನಾಯಕರ ಕೂಡೆ ನನ್ನನ್ನು ಕಳುಹಿಸಿದನು; ನಾನು ರಾಮದೂತನಾಗಿ ನಿನ್ನ ಸಮೀಪಕ್ಕೆ ಬಂದೆನು; ಸುಗ್ರೀವನು ತನ್ನ ರಾಜ್ಯದಲ್ಲಿದ್ದ ಕಪಿನಾಯಕರನ್ನು ಕರೆಕಳಿಸಿ ನಿನ್ನನ್ನು ನೋಡಿ ಬರಹೇಳಿ ದಶದಿಕ್ಕುಗಳಿಗೂ ಕಳುಹಿಸಲು ಮಹಾಪರಾಕ್ರಮಿಗಳಾಗಿ ಪರ್ವತಾಕಾರವಾದ ಅನೇಕಮಂದಿ ಕಪಿನಾಯಕರು ಭೂಮಂಡಲದಲ್ಲಿರುವ ನಾನಾದ್ವೀಪಾಂತರಗಳಿಗೂ ಹೋದರು; ನಾವು ಕೆಲವರು ತೆಂಕಣದಿಕ್ಕಿಗಾಗಿ ಬಂದೆವು; ನಮ್ಮಲ್ಲಿ ಗುರಿಕಾರನಾಗಿ ಬಂದವನು ಮಹಾಬಲವಂತನಾದ ವಾಲಿಯ ಮಗನಾದ ಅಂಗದನು; ಕಪಿರಾಜಕುಮಾರನಾದ ಅಂಗದನ ಕೂಡೆ ಬಂದ ನಾವು ನಾನಾದಿಕ್ಕುಗಳಲ್ಲಿಯೂ ಹುಡುಕಿ ಎಲ್ಲಿಯೂ ಕಾಣದೆ ಕಂಗೆಟ್ಟು ವಿಂಧ್ಯಪರ್ವತಕ್ಕೆ ಬಂದು ಒಬ್ಬರಿಗೊಬ್ಬರು 'ಇನ್ನು ನಮಿಗೆ ಸೀತಾದೇವಿಯನ್ನು ಕಾಣಬಹುದೆಂಬ ಆಶೆಯಿಲ್ಲ; ನಾವು ಸುಗ್ರೀವನ ಕೈಯಲ್ಲಿ ಕಳುಹಿಸಿಕೊಂಡು ಬರುವಲ್ಲಿ ಎರಡು ತಿಂಗಳೊಳಗಾಗಿ ಬರದಿದ್ದರೆ ಆಜ್ಞೆಗೊಳಗಾಗುವೆವೆಂದು ಹೇಳಿಬಂದೆವು; ಎರಡು ತಿಂಗಳ ಗಡಿಯು ಮೀರುತಿದೆ; ಗಿರಿದುರ್ಗಾರಣ್ಯ ದ್ವೀಪಾಂತರಗಳಲ್ಲಿಯೂ ಸೀತಾದೇವಿಯನ್ನು ಕಾಣದೆ ಹೋದೆವು; ನಾವು ಗಡಿಮೀರಿ ಸೀತಾದೇವಿಯನ್ನು ಕಾಣದೇ ಹೋದರೆ ಸುಗ್ರೀವನ ಆಜ್ಞೆಯಿಂದ ಪ್ರಾಣಗಳು ನಿಲ್ಲಲಾರವು; ಮೊದಲು ವಾಲಿಯು ಹೋದದ್ದು ಬಂದನರ್ಥ; ಸೀತಾದೇವಿಯನ್ನು ಕಾಣದೆ ಸುಗ್ರೀವನ ಸಮೀಪಕ್ಕೆ ಹೋಗಿ ಆತನ ಆಜ್ಞೆಗೊಳಗಾಗಿ ಸಾಯುವ ಮತ್ತೊಂದನರ್ಥಕ್ಕಿಂತಲೂ ಈ ಸಮುದ್ರತೀರದಲ್ಲಿ ಪ್ರಾಯೋಪವೇಶವನ್ನು ಮಾಡಿ ಮರಣವನ್ನೈದುವದು ಉತ್ತಮವು' ಎಂದು ನಿಶ್ಚಯಿಸಿಕೊಂಡಿದ್ದೆವು; ಆ ಸಮಯದಲ್ಲಿ ದೈವಾಧೀನದಿಂದ ಸಂಪಾತಿಯೆಂಬ ಗೃಧ್ರರಾಜನು ನಮ್ಮನ್ನು ಕಂಡು 'ನೀವ್ಯಾರು? ಏನುಕಾರಣ ಇಲ್ಲಿಗೆ ಬಂದಿರಿ?' ಎಂದು ಕೇಳಿದನು; ನಾವು ಜನಸ್ಥಾನದಲ್ಲಿ

ನಡೆದ ವೃತ್ತಾಂತವನ್ನು ಹೇಳಿ ಜಟಾಯುವು ನಿನ್ನ ನಿಮಿತ್ತವಾಗಿ ರಾವಣನ ಕೂಡೆ ಯುದ್ಧಮಾಡಿ ರಘುನಾಧನ ಕಾರ್ಯನಿಮಿತ್ತವಾಗಿ ಶರೀರವನ್ನು ಬಿಟ್ಟು ಕೃತಾರ್ಥನಾದನೆಂದು ಹೇಳಿದೆವು. ಸಂಪಾತಿಯು ಅತ್ಯಂತ ಕೋಪಯುಕ್ತನಾಗಿ ರಾವಣನು ಜಟಾಯುವನ್ನು ಕೊಂದಪ್ರಕಾರವನ್ನು ಸವಿಸ್ತಾರವಾಗಿ ಅಂಗದನ ಮುಖವಾರ್ತೆಯಿಂದ ಕೇಳಿ ದ್ವೇಷಹೆಚ್ಚಿ ನಿನ್ನನ್ನು ರಾವಣನು ಕೊಂಡುಹೋದನೆಂದೂ ರಾವಣನು ಲಂಕಾಪಟ್ಟಣದಲ್ಲಿದ್ದಾನೆ ಎಂದೂ ಆತನ ವಶದಲ್ಲಿ ನೀನಿದ್ದೀ ಎಂದೂ ಹೇಳಿದನು, ನಾವು ಅತ್ಯಂತ ಸಂತೋಷಯುಕ್ತರಾಗಿ ನಿನ್ನ ದರ್ಶನವಮಾಡಬೇಕೆಂದು ಸಮುದ್ರತೀರಕ್ಕೆ ಬಂದು ಅದನ್ನು ದಾಟಿಬರುವ ಉಪಾಯವನ್ನು ಕಾಣದೆ ಮಹತ್ತಾದ ಚಿಂತೆಗೊಳಗಾಗಿರುವ ಸಮಯದಲ್ಲಿ ನಾನು ಭಯವನ್ನು ಬಿಟ್ಟು ಅತ್ಯಂತ ಸಾಹಸದಿಂದ ನೂರುಗಾವುದದಾರಿ ಅಗಲವುಳ್ಳ ಸಮುದ್ರವನ್ನು ದಾಟಿಬಂದು ರಾತ್ರಿಯಲ್ಲಿ ಲಂಕಾಪಟ್ಟಣವನ್ನು ಹೊಕ್ಕು ರಾವಣನನ್ನು ನೋಡಿ ಅಲ್ಲೆಲ್ಲಿಯೂ ನಿನ್ನನ್ನು ಕಾಣದೆ ಈ ವನಕ್ಕೆ ಬಂದು ಅತ್ಯಂತ ದುಃಖಾಕ್ರಾಂತೆಯಾದ ನಿನ್ನನ್ನು ಕಂಡೆನು ! ಇದೇ ನನ್ನ ವೃತ್ತಾಂತವು ; ಇನ್ನಾದರೂ ನನ್ನ ಮೇಲಣ ಸಂಶಯವನ್ನು ಬಿಟ್ಟು ನನ್ನ ಕೂಡೆ ಸಂಭಾಷಣೆಮಾಡು ; ನಾನು ರಘುನಾಯಕನ ಕಾರ್ಯನಿಮಿತ್ತವಾಗಿ ಆತನ ದೂತನಾಗಿ ನಿನ್ನ ಸಮೀಪಕ್ಕೆ ಬಂದೆನು ; ನಾನು ವಾಯುಪುತ್ರನು ; ಸುಗ್ರೀವನ ಪ್ರಧಾನನು ; ಹೀಗೆಂದು ನಿನ್ನ ಮನಸ್ಸಿನಲ್ಲಿ ನಿಶ್ಚಯಮಾಡಿಕೋ ; ಸಮಸ್ತ ಬಿಲ್ಲುಗಾರರಿಗೂ ಪ್ರಧಾನನಾದ ರಘುನಾಯಕನು ಪರಿಣಾಮದಲ್ಲಿದ್ದಾನೆ ; ಆತನ ತಮ್ಮನಾದ ಲಕ್ಷ್ಮಣನು ರಘುನಾಥನ ಪಾದಸೇವೆಯನ್ನು ಮಾಡಿಕೊಂಡು ನಿನ್ನ ಬರುವಿಕೆಯನ್ನೇ ಬಯಸಿಕೊಂಡು ಸುಖವಲ್ಲಿದ್ದಾನೆ ; ಸುಗ್ರೀವನ ಮಾತಿನಿಂದ ನಾನೊಬ್ಬನೇ ಇಲ್ಲಿಗೆ ಬಂದೆನು ; ನಾನು ಕಾಮರೂಪಿಯಾದವನು ; ಅಸಹಾಯಶೂರನು ; ಅಂಥಾ ನಾನು ತೆಂಕಣದಿಕ್ಕಿನಲ್ಲಿ ನಿನ್ನನ್ನರಸಿಕೊಂಡು ಬಂದು ದೈವಾಧೀನದಿಂದ ನಿನ್ನನ್ನು ನೋಡಿದೆನು ; ಈ ವೃತ್ತಾಂತವನ್ನು ನಿನ್ನನ್ನು ಕಾಣದೆ ದುಃಖಪಡುತ್ತಿರುವ ಅಂಗದನು ಮೊದಲಾದವರಿಗೆ ಹೇಳಿ ಅವರ ದುಃಖವನ್ನು ಪರಿಹಾರಮಾಡಬೇಕು ; ದೈವಾಧೀನದಿಂದ ನಿನ್ನ ದರ್ಶನವಾದ ಕಾರಣ ಸಮುದ್ರವನ್ನು ದಾಟಿಬಂದದ್ದು ಸಫಲವಾಯಿತು ; ನನಿಗೆ 'ಸೀತಾದೇವಿಯನ್ನು ಕಂಡುಬಂದನು' ಎಂಬ ಕೀರ್ತಿಯುಂಟಾಯಿತು ; ರಘುನಾಧನು ಮಿತ್ರಬಂಧುವರ್ಗ ರಾಕ್ಷಸಬಲಸಮೇತನಾದ ರಾವಣನನ್ನು ಕೊಂದು ಶೀಘ್ರದಲ್ಲಿ ನಿನ್ನ ಮನೋರಥವನ್ನು ಸಫಲಮಾಡುವನು.

"ಎಲೈ ದೇವಿಯೇ, ಇನ್ನು ನನ್ನ ಹುಟ್ಟನ್ನು ಹೇಳುವೆನು ಕೇಳು : ನನ್ನ ತಂದೆಯಾದ ಕೇಸರಿಯೆಂಬ ಕಪಿನಾಯಕನು ಸಮಸ್ತಪರ್ವತಗಳಿಗೂ ಉತ್ತಮವಾದ ಮಾಲ್ಯವತ್ಪರ್ವತದಲ್ಲಿದ್ದನು ; ಬಂದು ಸಮಯದಲ್ಲಿ ಗೋಕರ್ಣಪರ್ವತಕ್ಕೆ ಹೋದನು ; ಅಲ್ಲಿ ನಾರದಮುನೀಶ್ವರನು ಆತನನ್ನು ಕಂಡು 'ಸಮುದ್ರತೀರದಲ್ಲಿ ಗೋಕರ್ಣವೆಂಬ ಪುಣ್ಯಕ್ಷೇತ್ರದಲ್ಲಿ ಶಂಬಸಾದನನೆಂಬ ರಾಕ್ಷಸನು ಬಹಳವಾಗಿ ಉಪದ್ರಮಾಡುತ್ತಿದ್ದಾನೆ ; ಅವನನ್ನು ಕೊಂದೆಯಾದರೆ ಆ ಪುಣ್ಯಕ್ಷೇತ್ರಕ್ಕೆ ಉಪದ್ರವಿಲ್ಲದಿರುವುದು, ಆಗ ಪುಣ್ಯಾತ್ಮರಾದ ತೀರ್ಥವಾಸಿಗಳು ಭಯವಿಲ್ಲದೆ ಬರುವರು' ಎಂದು ಹೇಳಿದನು. ಆತನ ವಾಕ್ಯದಿಂದ ನನ್ನ ತಂದೆಯು ಅತಿಪರಾಕ್ರಮಶಾಲಿಯಾದ ಶಂಬಸಾದನನನ್ನು ಲೀಲಾಮಾತ್ರದಿಂದ ಸಂಹರಿಸಿದನು ! ಅಂಥಾ ಪರಾಕ್ರಮಶಾಲಿಯಾದ ಕೇಸರಿಯ ಸ್ತ್ರೀಯಲ್ಲಿ ವಾಯುದೇವನಿಂದ ನಾನು ಜನಿಸಿದೆನು ; ನನ್ನ ಹೆಸರು ಹನುಮಂತನು. ಎಲೈ ಸೀತಾದೇವಿಯೇ, ನಿನ್ನ ಮನಸ್ಸಿಗೆ ವಿಶ್ವಾಸಹುಟ್ಟಬೇಕೆಂದು ನಿನ್ನ ಪ್ರಾಣಕಾಂತನಾದ ಶ್ರೀರಾಮನ ಗುಣಗಳನ್ನು ಹೇಳಿದೆನು ; ಆತನು ಶೀಘ್ರದಲ್ಲಿ ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗುವನು ; ಈ ಅರ್ಥದಲ್ಲಿ ಸಂಶಯವಿಲ್ಲ ; ಇನ್ನು ನಿನ್ನ ಮನಸ್ಸಿನಲ್ಲಿರುವ ಸಂಶಯವನ್ನು ಬಿಡು" ಅಂದನು.

"ಆ ಬಳಿಕ ರಘುನಾಧನ ವಿರಹಶೋಕದಿಂದ ನೊಂದು ಕೃಶಾಂಗಿಯಾದ ಸೀತಾದೇವಿಯು ಹನುಮಂತನು ಹೇಳಿದ ಕುರುಹುಗಳಿಂದ ಆತನು ರಾಮದೂತನೆಂದು ನಿಶ್ಚಯಿಸಿ ಅತಿ ಹರ್ಷಪಟ್ಟು ಆನಂದಾಶ್ರುಗಳನ್ನು ಬಿಡುತ್ತಿರಲು ಕೆಂಪಿನ ಧಾರೆಗಳೊಡನೆ ಕೂಡಿದ ಬಿಳಿಯಾಲೆ ಕರಿಯಾಲೆಗಳಿಂದ ರಮಣೀಯವಾದ ಕಣ್ಣುಗಳುಳ್ಳ ಆ ದೇವಿಯು

ಮುಖವು ರಾಹುತುಡುಕಿ ಬಿಟ್ಟ ಚಂದ್ರಮಂಡಲದಂತೆ ಬಪ್ಪುತಿತ್ತು! ಆಗ ಹನುಮಂತನು ಸೀತಾದೇವಿಯ ಅಭಿಪ್ರಾಯವನ್ನು ತಿಳಿದು ಆಕೆಯನ್ನು ಕುರಿತು "ಎಲೈ ತಾಯೇ, ನನ್ನ ವೃತ್ತಾಂತವನ್ನು ಸವಿಸ್ತಾರವಾಗಿ ಹೇಳಿದೆನು; ನೀನು ದುಃಖವನ್ನು ಬಿಟ್ಟು ಧೈರ್ಯದಿಂದಿರು; ನಾನು ತಿರುಗಿ ಹೋಗುತ್ತೇನೆ; ಇಲ್ಲಿ ನಾನು ಮಾಡಬೇಕಾದ ಕಾರ್ಯವೇನಾದರೂ ಇದ್ದರೆ ಹೇಳು, ನಾನು ಬಲವಿಲ್ಲದವನೆಂದು ತಿಳಿಯಬೇಡ; ಮಹಾ ಪರಾಕ್ರಮಶಾಲಿಯಾದ ಶಂಬಸಾದನನೆಂಬ ರಾಕ್ಷಸನನ್ನು ಸಂಹರಿಸಿದ ಕೇಸರಿಯ ಸ್ತ್ರೀಯಲ್ಲಿ ಜನಿಸಿದ ವಾಯುಪುತ್ರನಾದ್ದರಿಂದ ನಾನು ಕೇಸರಿಯ ಪರಾಕ್ರಮಕ್ಕೂ ವಾಯುವಿನ ವೇಗಕ್ಕೂ ಸಮಾನನು" ಎಂದು ಹೇಳಿದನು.

---

## ೩೬ನೇ ಅಧ್ಯಾಯ.

### ಹನುಮಂತನು ಸೀತಾದೇವಿಗೆ ಶ್ರೀರಾಮನ ಮುದ್ರೆ ಉಂಗರವನ್ನು ಕೊಟ್ಟದ್ದು.

ಮತ್ತು ವಾಯುಪುತ್ರನಾದ ಹನುಮಂತನು ಸೀತಾದೇವಿಗೆ ವಿಶ್ವಾಸವನ್ನುಟ್ಟಿಸುವದಕ್ಕಾಗಿ ಆಕೆಯನ್ನು ನೋಡಿ "ಎಲೈ ಪತಿವ್ರತಾಶಿರೋಮಣಿಯೇ, ಇಗೋ ಸತ್ಯಜ್ಞಾನಸಂಪನ್ನನಾದ ರಘುನಾಥನ ನಾಮಾಂಕಿತವಾದ ಮುದ್ರೇ ಉಂಗರವಿದೆ ನೋಡು! ಮಹಾತ್ಮನಾದ ರಘುನಾಯಕನು ನಿನ್ನ ಮನಸ್ಸಿಗೆ ವಿಶ್ವಾಸ ಹುಟ್ಟಬೇಕೆಂದು ಇದನ್ನು ನನ್ನ ಕೈಯ್ಯಲ್ಲಿ ಕೊಟ್ಟು ಕಳುಹಿಸಿದನು; ಇನ್ನು ನಿನ್ನ ಮನಸ್ಸಿಗೆ ಸಂತೋಷವಾಗಲೀ; ನಿನ್ನ ದುಃಖಸಾಧನವಾದ ಕರ್ಮವು ಕ್ಷಯವಾಗುವ ಸಮಯಬಂತು!" ಎಂದು ರಘುನಾಥನ ಮುದ್ರೇ ಉಂಗರವನ್ನು ಕೊಟ್ಟನು.

ಸೀತಾದೇವಿಯು ತನ್ನ ಪ್ರಾಣಕಾಂತನಾದ ರಘುನಾಥನ ಅಂಗುಲ್ಯಾಭರಣವನ್ನು ನೋಡಿ ಕೈಗಳಲ್ಲಿ ತೆಗೆದುಕೊಂಡು ಕಣ್ಣುಗಳಿಗೆ ಒತ್ತಿಕೊಂಡು ರಘುನಾಥನೇ ಸಾಕ್ಷಾತ್ಕಾರವಾಗಿ ಬಂದು ಮುಂದೆ ನಿಂತಂತೆ ಮನಸ್ಸಿನಲ್ಲಿ ಹರ್ಷಪಟ್ಟಳು! ಆ ಸಮಯದಲ್ಲಿ ಆಕೆಯ ಮುಖವು ರಾಹುತುಡಿಕಿ ಬಿಟ್ಟ ಚಂದ್ರಮಂಡಲದಂತೆ ಕಾಂತಿಯಿಂದ ಬಪ್ಪುತಿತ್ತು!

ಆ ಬಳಿಕ ಸೀತಾದೇವಿಯು ಕಪಿಶ್ರೇಷ್ಠನಾದ ಹನುಮಂತನನ್ನು ಬಹಳವಾಗಿ ಕೊಂಡಾಡಿ ಪ್ರಿಯವಚನಪೂರ್ವಕವಾಗಿ ಆತನನ್ನು ಕುರಿತು "ಎಲೈ ಕಪಿಶ್ರೇಷ್ಠನೆ, ನೀನು ಮಹಾಪ್ರಾಜ್ಞನು; ಅನೇಕ ಸತ್ವಸಾಹಸವುಳ್ಳವನು; ಮೊಸಳೆ ಮೊದಲಾದ ಅನೇಕ ಜಲಚರಪ್ರಾಣಿಗಳಿಂದ ಮಹಾ ಭಯಂಕರವಾಗಿ ನೂರುಗಾವುದದಾರಿ ಅಗಲವುಳ್ಳ ಸಮುದ್ರವನ್ನು ಗೋವಿನ ಹೆಜ್ಜೇಕುಳಿಯನ್ನು ದಾಟುವಂತೆ ದಾಟಿದೆ! ನಿನ್ನ ಸಾಹಸವನ್ನು ನೋಡಿದರೆ ನೀನು ಸಾಮಾನ್ಯನಲ್ಲ; ನೀನು ಸ್ವಲ್ಪವಾದರೂ ರಾವಣನಿಗೆ ಭಯಪಡುವವನಲ್ಲ; ನನ್ನ ಕೂಡೆ ಸಂಭಾಷಣೆ ಮಾಡುವದಕ್ಕೆ ನೀನು ಯೋಗ್ಯನು; ಮಹಾತ್ಮನಾದ ರಘುನಾಯಕನು ನಿನ್ನ ಮಹಿಮೆಯನ್ನು ತಿಳಿದು ಕಳುಹಿಸಿದನೇ ಹೊರ್ತಾಗಿ ತಿಳಿಯದೆ ಕಳುಹಿಸಿದವನಲ್ಲ; ಧರ್ಮಾತ್ಮನಾಗಿ ಸತ್ಯಸಂಧನಾದ ಶ್ರೀರಾಮನು ಕ್ಷೇಮವಾಗಿಧಾನೆಯೇ? ಸುಮಿತ್ರಾದೇವಿಗೆ ಆನಂದವನ್ನುಂಟುಮಾಡುವ ಲಕ್ಷ್ಮಣಸ್ವಾಮಿಯು ಚನ್ನಾಗಿಧಾನೆಯೇ? ಕಂಗೆಟ್ಟು ಚಿತ್ತವಿಕಳತೆಯಿಂದ ಮೋಸಕಾರ್ಯಕ್ಕೊಳಗಾಗದಿಧಾರೆಯೇ? ಸಾಮ ದಾನ ಭೇದ ದಂಡಗಳೆಂಬ ಚತುರೋಪಾಯಗಳನ್ನು ಎರಡುಪಾಲುಮಾಡಿ ಮಿತ್ರರಲ್ಲಿ ಸಾಮ ದಾನಗಳೆಂಬ ಪಾಲನ್ನು ಪ್ರಯೋಗಿಸುತ ಶತ್ರುಗಳಲ್ಲಿ ಭೇದದಂಡಗಳೆಂಬ ಪಾಲನ್ನು ದೇಶಕಾಲಗಳನ್ನರಿತು ಅನ್ಯೋನ್ಯ ಸಂಕರವಿಲ್ಲದಹಾಗೆ ಪ್ರಯೋಗಿಸುತ ಮಿತ್ರರಲ್ಲಿ ಕಪಟಕಾರ್ಯವನ್ನು ನಡಿಸದೆ ಶತ್ರುಗಳಲ್ಲಿ ಜಯಶೀಲರಾಗಿ ಮಿತ್ರರಬಳಿಗೆ ಹೋಗುತ ತಮ್ಮ ಸಮೀಪಕ್ಕೆ ಮಿತ್ರರು ಬರುವಹಾಗೆ ಮಾಡಿಕೊಂಡಿದ್ಧಾನೆಯೇ? ಮಿತ್ರರೂ ಆತನಲ್ಲಿ ಕಪಟವಿಲ್ಲದೆ ನಡೆಯುತ್ತಿಧಾರೆಯೇ? ಶ್ರೀರಾಮನಿಗೆ ದೇವರ ಕೃಪೆಯುಂಟಾಗಿರುವದೇ? ದೈವಾನುಕೂಲದಿಂದ ಪುರುಷಪ್ರಯತ್ನವು ನಡೆಯುತ್ತಿರುವದೇ? ದೂರದಲ್ಲಿದ್ದರೂ ನನ್ನ ಮೇಲಣ ಸ್ನೇಹವನ್ನು ಬಿಡದಿಧಾರೆಯೇ? ನನ್ನ ಬಂಧನವನ್ನು ಬಿಡಿಸಲು ಬರುವರೇ? ಒಂದು ದಿವಸವಾದರೂ ದುಃಖವನ್ನ

ನುಭವಿಸದ ರಘುನಾಯಕನು ದುಃಖವನ್ನೈದಿದರೂ ಬಹಳವಾಗಿ ಹಂಬಲಿಸದಿದ್ದಾನೆಯೋ? ತನ್ನ ತಾಯಾದ ಕೌಸಲ್ಯಾದೇವಿಯು ಮತ್ತು ಲಕ್ಷ್ಮಣಸ್ವಾಮಿಯ ತಾಯಾದ ಸುಮಿತ್ರಾದೇವಿಯ ಪರಿಣಾಮಸ್ಥಿತಿಯನ್ನೂ ಭರತನ ಪರಿಣಾಮಸ್ಥಿತಿಯನ್ನೂ ವಿಚಾರಿಸಿಕೊಂಡಿಧಾನೆಯೋ? ಶಸ್ತ್ರಾಸ್ತ್ರವಿದ್ಯಾಕುಶಲನಾದ ಲಕ್ಷ್ಮಣನು ತನ್ನ ರೌದ್ರಾಸ್ತ್ರದಿಂದ ರಣರಂಗದಲ್ಲಿ ಪುತ್ರಮಿತ್ರಸಹಿತನಾದ ರಾವಣನನ್ನು ಕೊಂದು ಜಯವನ್ನು ಪಡೆಯುವದನ್ನು ಯಾವಾಗ ಕಂಡೇನು? ಪುಟವಿಕ್ಕಿದ ಚಿನ್ನಕ್ಕೆ ಸಮಾನವಾದ ಕಾಂತಿಯುಳ್ಳವನಾಗಿ ತಾವರೇಕಮಲದಂತೆ ಶೋಭನವಾದ ಪರಿಮಳವುಳ್ಳ ರಘುನಾಥನ ಮುಖವು ನನ್ನ ವಿರಹಶೋಕದಿಂದ ಜಲಶೂನ್ಯವಾದ ಕೊಳದಲ್ಲಿರುವ ತಾವರೆಯಂತೆ ಕಾಂತಿಗುಂದದಿದೆಯೋ? ಧರ್ಮವನ್ನು ಪರಿಪಾಲಿಸಬೇಕೆಂಬ ಬುದ್ಧಿಯಿಂದ ರಾಜ್ಯವನ್ನು ಬಿಟ್ಟು ಅರಣ್ಯದಲ್ಲಿ ನನ್ನನ್ನು ಕಾಣದೆ ಕಾಲುನಡೆಯಿಂದ ಸಂಚರಿಸುವ ರಘುನಾಯಕನು ಶೋಕಪಡದೆ ಧೈರ್ಯದಿಂದಿಧಾನೆಯೋ? ಎಲೈ ಹನುಮಂತನೆ, ಇಲ್ಲಿ ನನಗೆ ತಾಯಿತಂದೆ ಮಿತ್ರವರ್ಗಗಳ್ಯಾರೂ ಇಲ್ಲ; ಹಾಗಾದರೂ ದೈವಾಧೀನದಿಂದ ಶ್ರೀರಾಮನ ಪರಿಣಾಮಸ್ಥಿತಿಯನ್ನು ಕೇಳುವ ಪರಿಯಂತರ ಜನ್ಮಾಂತರದಲ್ಲಿ ಮಾಡಿದ ಪುಣ್ಯಾತಿಶಯದಿಂದ ಜೀವಿಸಿಕೊಂಡಿದ್ದೆನು!" ಎಂದು ಆರ್ತಗಂಭೀರವಾದ ಮಾತುಗಳಿಂದ ನುಡಿದು ಹನುಮಂತನ ಗಂಭೀರಾರ್ಥವುಳ್ಳವಾಗಿ ಕಿವಿಗಿಂಪಾದ ಶ್ರೀರಾಮನ ಚಾರಿತ್ರಯುಕ್ತವಾದ ಮಾತುಗಳನ್ನು ಮತ್ತು ಆತನ ಮುಖವಾರ್ತೆಯಿಂದ ಕೇಳಬೇಕೆಂದು ಸುಮ್ಮನೇ ಇದ್ದಳು.

ಆಮೇಲೆ ಹನುಮಂತನು ಕೈಮುಗಿದುಕೊಂಡು "ಎಲೈ ಸೀತಾದೇವಿಯೇ, ಕಮಲನಯನನಾದ ರಘುನಾಥನು ನೀನು ಇಲ್ಲಿರುವದನ್ನು ತಿಳಿದಪಕ್ಷದಲ್ಲಿ ರಾವಣನನ್ನು ಕೊಂದು ಅತ್ಯುತ್ಸವದಿಂದ ದೇವೇಂದ್ರನು ಶಚೀದೇವಿಯನ್ನು ಕೊಂಡುಹೋಗುವಂತೆ ನಿನ್ನನ್ನು ಕರದುಕೊಂಡು ಹೋಗುವನು; ನಾನು ಹೋಗಿ ನಿನ್ನ ಪರಿಣಾಮಸ್ಥಿತಿಯನ್ನು ಹೇಳಿದಕೂಡಲೇ ಆತನು ಸಮಸ್ತ ಕಪಿಸೇನೆಗಳನ್ನೂ ಕೂಡಿಕೊಂಡು ಅತ್ಯಂತ ಗಂಭೀರ ಜಲವುಳ್ಳ ಸಮುದ್ರದಲ್ಲಿ ಸೇತುವೆಯನ್ನು ಕಟ್ಟಿ ಲಂಕಾಪಟ್ಟಣವನ್ನು ನಿರ್ನಾಮವಾಗಿ ಮಾಡುವನು, ದೇವಾಸುರರಲ್ಲಿ ಯಾರಾದರೂ ವಿಘ್ನವಾಗಿ ಬಂದರೆ ಅವರನ್ನು ಸಂಹಾರಮಾಡುವನು; ಆತನು ಸಿಂಹದಿಂದ ಕಂಗೆಟ್ಟ ಗಜರಾಜನಂತೆ ನಿನ್ನನ್ನು ಕಾಣದೆ ನಿನ್ನ ವಿರಹಶೋಕದಿಂದ ಕಂಗೆಟ್ಟು ತನುಕಾಂತಿಗುಂದಿ ಹಂಬಲಿಸುತ್ತಿಧಾನೆ! ಎಲೈ ಸೀತಾದೇವಿಯೇ, ಮನೋಹರವಾದ ಕಣ್ಣುಗಳುಳ್ಳವನಾಗಿ ರಮಣೀಯವಾದ ರತ್ನಕುಂಡಲಗಳುಳ್ಳ ಶ್ರೀರಾಮನ ಮುಖದರ್ಶನವು ನಿನಗೆ ಶೀಘ್ರದಲ್ಲಿ ಆಗುವದು; ಈ ಅರ್ಥದಲ್ಲಿ ತಪ್ಪಿಲ್ಲ! ಕಪಿಕುಲಗಳಿಗಾಶ್ರಯವಾದ ದುರ್ಧರ ಪರ್ವತದಾಣೇ!—ಮಲಯಪರ್ವತದಾಣೇ?—ವಿಂಧ್ಯಪರ್ವತದಾಣೇ?—ಮಂದರಗಿರಿ ಪರ್ವತದಾಣೇ?—ಕಡೆಗೆ ನನ್ನ ಜೀವನಾಧಾರವಾದ ಕಂದಮೂಲ ಫಲಗಳಾಣೇ ಅವಶ್ಯವಾಗಿ ನಿನಗೆ ಪ್ರಸ್ರವಣಗಿರಿಯಲ್ಲಿ ಶ್ರೀರಾಮನ ದರ್ಶನವಾಗುವದು! ನಾನು ನೋಡಿದಾಗ ರಘುನಾಥನು ವನದಲ್ಲಿರುವ ಮಧುರವಾದ ಕಂದಮೂಲ ಫಲಾಹಾರಗಳನ್ನು ಮಾಡದೆ ತನ್ನ ಅಂತರಂಗವನ್ನು ನಿನ್ನಲ್ಲಿರಿಸಿ ಮರವಟ್ಟಂತೆ ತನ್ನ ಶರೀರದಮೇಲೆ ಬಂದೇರುವ ಕಾಡನೊಣ ಸೊಳ್ಳೇಹುಳ ಹಾವು ಮೊದಲಾದ ಪ್ರಾಣಿಗಳನ್ನು ತೊಲಗಿಸದೆ ಭ್ರಮೆಗೊಂಡಂತಿರುತಿದ್ದನು; ನಿನ್ನ ವಿರಹದಿಂದ ಮನ್ಮಥನ ಬಾಧೆಗಳಿಗೆ ಗುರಿಯಾಗಿ ನಿನ್ನನ್ನೇ ಧ್ಯಾನಮಾಡುತ ಹಂಬಲಿಸುತಿದ್ದನು; ಮಲಗಿದ್ದರೂ ನಿದ್ರೆಮಾಡದೆ ನಿನ್ನಲ್ಲಿಯೇ ಆಸಕ್ತನಾಗಿ ಏಳುವಲ್ಲಿ ಸೀತಾದೇವಿ! ಸೀತಾದೇವಿ! ಎಂದು ಹಂಬಲಿಸುತಿದ್ದನು; ಕಂದಮೂಲಫಲ ಗಂಧ ಪುಷ್ಪಾದಿಗಳನ್ನು ಕಂಡರೆ 'ಹಾ ಸೀತಾದೇವೀ! ನಿನಗೆ ಪ್ರಿಯವಾದ ವಸ್ತುಗಳು ಬಂದವೆ! ಎಲ್ಲಿಗೆ ಹೋದೇ! ಯಾಕೆ ಮುಖದೋರೆ!' ಎಂದು ಹಂಬಲಿಸಿ ನಿಟ್ಟುಸುರು ಬಿಡುತಿದ್ದನು! ಎಲೈ ರಾಜಕುಮಾರತಿಯಾದ ಸೀತಾದೇವಿಯೇ, ರಘುನಾಥನು ನಿನ್ನ ದರ್ಶಸುಖವನ್ನು ಪಡೆಯಬೇಕೆಂದು ವ್ರತ ನಿಯಮಗಳನ್ನು ಮಾಡಿಕೊಂಡು 'ಹಾ ಸೀತಾದೇವೀ! ಹಾ ಸೀತಾದೇವೀ!' ಎಂದು ಹಂಬಲಿಸುತಿದ್ದನು" ಎಂದು ನುಡಿದನು.

ಆ ಮಾತನ್ನು ಕೇಳಿ ಸೀತಾದೇವಿಯು ಶ್ರೀರಾಮನ ಪರಿಣಾಮ ವಾರ್ತೆಯನ್ನು ಕೇಳಿ ಸಂತೋಷಪಡುತಿದ್ದವಳಾದರೂ ಆತನು ದುಃಖಪಡುತಿದ್ದನು ಎಂಬದನ್ನು ಕೇಳಿ ಶರತ್ಕಾಲದಲ್ಲಿ ಮೇಘಮಂಡಲದ ಮರೆಯಾದ ಚಂದ್ರಮಂಡಲವುಳ್ಳ ರಾತ್ರಿಯಂತೆ ಒಪ್ಪುತಿದ್ದಳು.

## ೩೭ ನೇ ಅಧ್ಯಾಯ.

### ಹನುಮಂತನು ಸೀತಾದೇವಿಯನ್ನು ಹೊತ್ತುಕೊಂಡು ಹೋಗುವೆದಾಗಿ ಹೇಳಿದ್ದು

ಆ ಬಳಿಕ ಸೀತಾದೇವಿಯು ಹನುಮಂತನನ್ನು ಕುರಿತು ಧರ್ಮಾರ್ಥಸಹಿತವಾದ ಮಾತುಗಳಿಂದ "ಎಲೈ ಹನುಮಂತನೆ, ನೀನು ಹೇಳಿದ ಮಾತು ವಿಷದೊಡನೆ ಕೂಡಿದ ಅಮೃತದಂತಾಯಿತು. ಶ್ರೀರಾಮನ ಯೋಗಕ್ಷೇಮ ವಾರ್ತೆಯನ್ನು ಕೇಳಿ ನನ್ನ ಮನಸ್ಸಿಗೆ ಬಹಳ ಸಂತೋಷವಾಯಿತು ; ಆದರೂ ರಘುನಾಥನು ನನ್ನಲ್ಲೇ ಆಸಕ್ತನಾಗಿ ಆಹಾರ ನಿದ್ರೆಗಳನ್ನು ಬಿಟ್ಟಿದ್ದಾನೆ ಎಂಬ ದುಃಖವಾರ್ತೆಯೊಡನೆ ಕೂಡಿ ಆ ಶುಭವಾರ್ತೆಯು ವಿಷಬೆರೆದ ಅಮೃತದಂತಾಗಿದೆ ; ಲೋಕದಲ್ಲಿ ಸುಖದುಃಖಗಳು ಸ್ವತಂತ್ರವಾದವಲ್ಲ ; ಅವರವರು ಮಾಡಿದ ಕರ್ಮಾನುಸಾರವಾಗಿ ವಿಧಾತನು ಬಹಳವಾದ ಐಶ್ವರ್ಯದಿಂದಲಾದರೂ ಅಧಿಕವಾದ ದುಃಖದಿಂದಲಾದರೂ ಉರುಳು ಹಗ್ಗದಿಂದ ಕೊರಳನ್ನು ಕಟ್ಟಿ ಕೆಡಹುವಂತೆ ಕೂಡಿಸುವನು ; ವಿಧಿಯನ್ನು ಮೀರುವದಕ್ಕೆ ಶಕ್ಯವಲ್ಲ ; ಲಕ್ಷ್ಮಣನನ್ನೂ ನನ್ನ ವಿಧಿಯು ಶೋಕಸಾಗರದಲ್ಲಿ ಕೆಡಹಿತು ; ಲಕ್ಷ್ಮಣಸಮೇತನಾದ ರಘುನಾಥನು ಸಮುದ್ರದಲ್ಲಿ ಮುಳುಗಿದ ಹಡಗನ್ನೆತ್ತುವಂತೆ ಈ ಶೋಕಸಮುದ್ರದಲ್ಲಿ ಮುಳುಗಿರುವ ನನ್ನನ್ನು ಎಂದಿಗೆ ಉದ್ಧರಿಸುವನೊ ತಿಳಿಯದು ; ರಘುನಾಥನು ಸಮಸ್ತ ರಾಕ್ಷಸಬಲವನ್ನೂ ಸಂಹರಿಸಿ ನನ್ನನ್ನೆಂದಿಗೆ ರಕ್ಷಿಸುವನೊ ! ನೀನು ಆತನಕೂಡೆ—ಮೊದಲು ಮಿತಿಮಾಡಿದ ಹದಿನಾಲ್ಕನೆ ವರುಷದಲ್ಲಿ ಹತ್ತುತಿಂಗಳು ತುಂಬಿ ಇನ್ನೆರಡುತಿಂಗಳ ಅವಧಿ ಇದೇ ಎಂತಲೂ ಆ ಅವಧಿಯ ಮಿತಿಯು ತುಂಬುವದಕ್ಕೆ ಮೊದಲೇ ನನ್ನನ್ನು ಕರದುಕೊಂಡು ಹೋಗಬೇಕೆಂತಲೂ ಹೇಳು ; ರಾವಣನು ಮಿತಿಯಿಟ್ಟ ಎರಡು ತಿಂಗಳೂ ಅಂದಿಗೆ ತುಂಬುವವು ; ಆ ದಿವಸದಲ್ಲಿ ನಾನು ಅವನ ಮಾತನ್ನು ಕೇಳದಿದ್ದರೆ ಉಳಿಯುವದಕ್ಕಿಲ್ಲ ; ರಾವಣನ ತಮ್ಮನಾದ ವಿಭೀಷಣನು ನನ್ನನ್ನು ಬಿಟ್ಟು ಕಳುಹಿಸಬೇಕೆಂದು ಬಹಳವಾಗಿ ಒಡಂಬಡಿಕೆ ಹೇಳಿದನು ; ಹಾಗಾದರೂ ರಾವಣನು ಆತನ ಮಾತಿಗೆ ಒಡಂಬಡಲಿಲ್ಲ ; ಈಗ ಕಾಲಮೃತ್ಯುವು ರಾವಣನನ್ನು ಹುಡುಕುತ್ತಿದೆ ; ಅವನು ಯುದ್ಧದಲ್ಲಿ ಮಡಿಯುವದಲ್ಲದೆ ಉಳಿಯುವದಕ್ಕಿಲ್ಲ ; ಈ ವರ್ತಮಾನವನ್ನು ನನಗೆ ವಿಭೀಷಣನು ತನ್ನ ಹಿರಿಯಮಗಳಾಗಿ ಸ್ತ್ರೀರತ್ನವಾದ ಅನಲೆಯ ಸಂಗಡ ಹೇಳಿಕಳುಹಿಸಿದನು ; ಈ ವರ್ತಮಾನವನ್ನು ನಿನ್ನ ಸಂಗಡ ಹೇಳಿದೆನು ; ನನ್ನ ಪ್ರಾಣಕಾಂತನಾದ ರಘುನಾಥನು ನನ್ನನ್ನು ಕರದುಕೊಂಡು ಹೋಗಬೇಕೆಂದು ಬಯಸಿಕೊಂಡಿದ್ದೇನೆ ; ನನಗೆ ಈ ಅರ್ಥದಲ್ಲಿ ಅಂತರಂಗಶುದ್ಧವಾಗಿದೆಯೇ ಅಲ್ಲದೆ ಸಂಶಯವಾಗಿಲ್ಲ ; ಶ್ರೀರಾಮನಲ್ಲಿ ಉತ್ಸಾಹವು ಪೌರುಷವು ಸತ್ವವು ಅಸೂಯೆ ಇಲ್ಲದಿರುವದು ಪರರು ಮಾಡಿದ ಉಪಕಾರವನ್ನು ಮರೆಯದಿರುವದು ಪರಾಕ್ರಮವು ಪ್ರಭಾವವು ಮೊದಲಾದ ಅಪರಿಮಿತವಾದ ಸದ್ಗುಣಗಳು ಶಾಶ್ವತವಾಗಿವೆ ; ಜನಸ್ಥಾನದಲ್ಲಿ ಲಕ್ಷ್ಮಣನ ಸಹಾಯವಿಲ್ಲದೆ ತಾನೊಬ್ಬನೇ ಹದಿನಾಲ್ಕುಸಾವಿರಮಂದಿ ರಾಕ್ಷಸರನ್ನು ಸಂಹರಿಸಿದನು ; ಅಂಥಾ ಶ್ರೀರಾಮನನ್ನು ಕಂಡು ಯಾರು ಕಂಗೆಡರು ! ಈಗ ಆತನಿಗೆ ಬಂದಿರುವ ದುಃಖಕ್ಕೆ ಸಮಾನವಾದ ದುಃಖವು ಲೋಕದಲ್ಲಿ ಯಾರಿಗೂ ಬರಲಿಲ್ಲ ; ದೇವೇಂದ್ರನ ಮನೋಭಾವವನ್ನು ಶಚೀದೇವಿಯು ಬಲ್ಲಂತೆ ಆತನ ಅಂತರಂಗವನ್ನು ನಾನು ಚನ್ನಾಗಿ ಬಲ್ಲೆನು ; ಶರಸಮೂಹಗಳೆಂಬ ಕಿರಣಗಳುಳ್ಳ ರಘುನಾಥನೆಂಬ ಸೂರ್ಯನು ರಾಕ್ಷಸರೆಂಬ ಉದಕವನ್ನು ದೃಷ್ಟಿಮಾತ್ರದಿಂದಲೇ ಹೀರುವನು !" ಎಂದು ಶ್ರೀರಾಮನ ಗುಣವಿಶೇಷಗಳನ್ನು ಹೇಳುತ ದುಃಖಾತಿಶಯದಿಂದ ಹಂಬಲಿಸುತಿದ್ದಳು.

ಹನುಮಂತನು ಆಕೆಯನ್ನು ಕುರಿತು "ಎಲೈ ಸೀತಾದೇವಿಯೇ, ರಘುನಾಥನು ನನ್ನ ಮಾತನ್ನು ಕೇಳಿದ ಕ್ಷಣದಲ್ಲಿಯೇ ಸಮಸ್ತ ಕಪಿಸೇನೆಯನ್ನೂ ಕೂಡಿಕೊಂಡು ಇಲ್ಲಿಗೆ ಬರುವನು ; ಇಲ್ಲವೆಂಬಪಕ್ಷದಲ್ಲಿ ನೀನು ನನ್ನ ಹೆಗಲಿನಮೇಲೆ ಹತ್ತಿಕೊಂಡರೆ ನಿನ್ನನ್ನೂ ರಾವಣನ ಸಹಿತವಾದ ಲಂಕಾಪಟ್ಟಣವನ್ನೂ ಹೊತ್ತುಕೊಂಡುಹೋಗುವ ಸಾಮರ್ಥ್ಯವು ನನಗುಂಟು ; ನಿನ್ನನ್ನು ಹೆಗಲಮೇಲೆ ಕುಳ್ಳಿರಿಸಿಕೊಂಡು ಸಮುದ್ರವನ್ನುದಾಟಿ ಯಜ್ಞಪುರುಷನು ದೇವೇಂದ್ರನಿಗೆ ಹವಿಸ್ಸನ್ನು ತಕ್ಕೊಂಡುಹೋಗಿ ಕೊಡುವಂತೆ ಪ್ರಸ್ರವಣಗಿರಿಯಲ್ಲಿರುವ ರಘುನಾಥನಿಗೆ

ಒಪ್ಪಿಸುವೆನು ; ನಿನಗೆ ಈಹೊತ್ತೇ ಲಕ್ಷ್ಮಣಸಮೇತನಾದ ಶ್ರೀರಾಮನ ದರ್ಶನವಾಗುವದು; ದೈತ್ಯವಧೆಯನ್ನು ಮಾಡುವದಕ್ಕೆ ಉದ್ಯುಕ್ತನಾದ ಮಹಾವಿಷ್ಣುವನ್ನು ಕಂಡಂತೆ ನಿನ್ನನ್ನು ಕಾಣಬೇಕೆಂದು ಚಿಂತಿಸುತಿರುವ ಶ್ರೀರಾಮನನ್ನು ಈ ದಿವಸದಲ್ಲೇ ಕಾಣುವೆ. ಎಲೈ ತಾಯೇ, ನೀನು ಸಂಶಯಪಡದೆ ನನ್ನ ಹೆಗಲಮೇಲೆ ಹತ್ತಿಕೊ ; ರೋಹಿಣೀದೇವಿಯು ಚಂದ್ರನ ಧ್ಯಾನದಿಂದಿರುವಂತೆ ನೀನು ಶ್ರೀರಾಮನನ್ನು ಧ್ಯಾನಮಾಡುತ ಸೂರ್ಯನ ಕೂಡೆ ಸಂಭಾಷಣಕ್ಕೆ ಹೋಗುವಂತೆ ತೆರಳು ; ನೀನು ನನ್ನ ಹೆಗಲಮೇಲೆ ಹತ್ತಿಕ್ಕೊಂಡು ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟ ಹೋಗುವ ನನ್ನ ಸಾಹಸವನ್ನು ನೋಡು, ನಾನಿಲ್ಲಿಗೆ ಬರುವಾಗ ಹ್ಯಾಗೆ ಸಮುದ್ರವನ್ನು ದಾಟಿ ಬಂದೆನೋ ಆಪ್ರಕಾರದಲ್ಲೇ ತಿರುಗೂ ದಾಟಿಹೋಗುವೆನು ; ಈ ಅರ್ಥದಲ್ಲಿ ಸಂಶಯವಿಲ್ಲ; ನಿನ್ನನ್ನು ಹೆಗಲಿನ ಮೇಲೆ ಕುಳ್ಳಿರಿಸಿಕ್ಕೊಂಡು ಸಮುದ್ರವನ್ನು ದಾಟ ಹೋಗುವೆನು” ಎಂದು ನುಡಿದನು.

ಆ ಅದ್ಭುತವಾದ ಮಾತುಗಳನ್ನು ಕೇಳಿ ಸೀತಾದೇವಿಯು ಅತ್ಯಂತ ಆಶ್ಚರ್ಯಪಟ್ಟು ಅತ್ಯಂತ ಸಂತೋಷಯುಕ್ತಳಾಗಿ ಹನುಮಂತನನ್ನು ಕುರಿತು “ಎಲೈ ಹನುಮಂತನೆ, ನೀನು ನನ್ನನ್ನು ಹೆಗಲಮೇಲೆ ಕುಳ್ಳಿರಿಸಿಕ್ಕೊಂಡು ಹ್ಯಾಗೆ ಸಮುದ್ರವನ್ನು ದಾಟಿಹೋಗುವೆ ! ಈ ಮಾತಿನಿಂದ ನೀನು ಕಪಿಯೆಂಬುದು ಪ್ರಕಟವಾಯಿತು ; ಸೂಕ್ಷ್ಮಶರೀರವುಳ್ಳ ನೀನು ನನ್ನನ್ನು ಹೆಗಲಮೇಲೆ ಕುಳ್ಳಿರಿಸಿಕ್ಕೊಂಡು ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟ ರಾಜಶಿರೋಮಣಿಯಾದ ಶ್ರೀರಾಮನ ಸಮೀಪಕ್ಕೆ ಕರದುಕ್ಕೊಂಡು ಹೋಗುವದಕ್ಕಾಗುವದೆ ?” ಎಂದು ನುಡಿದಳು.

ಆ ಮಾತನ್ನು ಕೇಳಿ ಹನುಮಂತನು ಸೀತಾದೇವಿಯು ತನ್ನನ್ನು ಅಲ್ಪವಾಗೆಣಿಸಿದಳೆಂದು ಮನಸ್ಸಿನಲ್ಲಿ ಚಿಂತಿಸಿ ಆ ದೇವಿಯನ್ನು ಕುರಿತು “ಎಲೈ ಸೀತಾದೇವಿಯೇ, ನೀನು ನನ್ನ ಸತ್ವ ಸಾಹಸಗಳನ್ನೂ ನನ್ನ ಪ್ರಭಾವವನ್ನೂ ಕಾಮರೂಪಿಯಾಗಿರುವದನ್ನೂ ತಿಳಿದವಳಲ್ಲ ; ನನ್ನ ಸ್ವರೂಪವನ್ನು ನೋಡು !” ಎಂದು ಶತ್ರುಸಂಹಾರಕನಾದ ಹನುಮಂತನು ಸೀತಾದೇವಿಗೆ ವಿಶ್ವಾಸವುಂಟುಮಾಡಬೇಕೆಂದು ಮಂದರಗಿರಿಪರ್ವತ ಮಹಾಮೇರುಪರ್ವತಗಳಿಗೆ ಸಮಾನವಾದ ಶರೀರಾಕಾರವುಳ್ಳವನಾಗಿ ಪ್ರಜ್ವಲಿಸುವ ಯಜ್ಞಪುರುಷನಿಗೆ ಸಮಾನವಾದ ತನುಕಾಂತಿಯುಳ್ಳವನಾಗಿ ಅತ್ಯಂತ ಕೆಂಪಾದ ಮುಖಮಂಡಲವುಳ್ಳ ಪರ್ವತವೋ ಎಂಬಂತೆ ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ಕಂಬವಿರುವಹಾಗೆ ಬೆಳೆದು ವಜ್ರಾಯುಧದೋಪಾದಿಯಲ್ಲಿರುವ ಉಗುರು ಕೋರದಾಡೆಗಳಿಂದ ಭಯಂಕರವಾದ ರೂಪವುಳ್ಳವನಾಗಿ ಸೀತಾದೇವಿಯ ಮುಂದುಗಡೆಯಲ್ಲಿ ನಿಂತುಕ್ಕೊಂಡು “ಎಲೈ ಸೀತಾದೇವಿಯೇ, ನನ್ನ ಸಾಮರ್ಥ್ಯವನ್ನು ಕಂಡೆಯಾ ! ವನಸಮೂಹ ಕೋಟೆ ಆಳ್ವೇರಿ ಉಪ್ಪರಿಗೆಗಳುಳ್ಳ ಲಂಕಾಪಟ್ಟಣವನ್ನೆತ್ತಿಕ್ಕೊಂಡು ಹೋಗುವ ಸಾಮರ್ಥ್ಯವು ನನಿಗೆ ಉಂಟು ; ನಿನ್ನ ಮನಸ್ಸಿನಲ್ಲಿ ಇದು ಸತ್ಯವೆಂದು ತಿಳಿದು ಲಕ್ಷ್ಮಣಸಮೇತನಾಗಿರುವ ಶ್ರೀರಾಮನ ಸನ್ನಿಧಿಗೆ ಬಂದು ಅವರ ದುಃಖವನ್ನು ಪರಿಹಾರಮಾಡು” ಎಂದು ನುಡಿದನು.

ಸೀತಾದೇವಿಯು ಪರ್ವತಾಕಾರನಾಗಿ ವಾಯುಪುತ್ರನಾದ ಹನುಮಂತನನ್ನು ನೋಡಿ ಅತಿ ಆಶ್ಚರ್ಯಪಟ್ಟು “ಎಲೈ ಹನುಮಂತನೆ, ನಿನ್ನ ಸತ್ವಸಾಹಸಗಳನ್ನು ತಿಳಿದೆನು ; ನಿನಗೆ ವಾಯುವೇಗಸಮಾನವಾದ ವೇಗವುಂಟು ; ಯಜ್ಞಪುರುಷನಿಗೆ ಸಮಾನವಾದ ತೇಜಸ್ಸುಂಟು ; ನೀನುಹೊರ್ತಾಗಿ ಮತ್ತೊಬ್ಬ ಕಪಿನಾಯಕನು ಇಲ್ಲಿಗೆ ಬರುವದಕ್ಕೆ ಸಮರ್ಥನಲ್ಲ ; ನೀನು ನನ್ನನ್ನು ಕರದುಕ್ಕೊಂಡು ಸಮುದ್ರವನ್ನು ದಾಟ ಹೋಗುವದಕ್ಕೆ ಶಕ್ತನೆಂಬುದನ್ನು ಕಂಡೆನು ; ಆದರೂ ಯಾವಬಗೆಯಲ್ಲಾದರು ಕಾರ್ಯಸಿದ್ಧಿಯಾಗುವ ಯೋಚನೆ ಮಾಡಬೇಕಲ್ಲದೆ ಸಾಹಸ ಮಾಡಬಾರದು ; ನಾನು ನಿನ್ನಕೂಡೆ ಬರುವದು ಉಚಿತವಲ್ಲ, ವಾಯುವೇಗಕ್ಕೆ ಸಮಾನವಾದ ವೇಗವುಳ್ಳ ನಿನ್ನ ಗಮನವೇಗವು ನನ್ನನ್ನು ಮೃತ್ಯುಪಾಲುಮಾಡುವದು ; ನೀನು ನನ್ನನ್ನು ಹೊತ್ತುಕ್ಕೊಂಡು ಸಮುದ್ರವನ್ನು ದಾಟುವಾಗ ಅಂತರಿಕ್ಷಮಾರ್ಗದಲ್ಲಿ ಮೇಲೆ ಮೇಲೆ ಅತಿವೇಗದಿಂದ ಹೋಗುವಾಗ ನಾನು ಸಮುದ್ರವನ್ನು ನೋಡಿ ಭಯಪಟ್ಟು ಮೊಸಳೆ ಮೊದಲಾದ ಜಲಚರಪ್ರಾಣಿಗಳಿಂದ ಪರಿಪೂರ್ಣವಾದ ಸಮುದ್ರದಲ್ಲಿ ಬಿದ್ದು ಜಲಚರಪ್ರಾಣಿಗಳಿಗೆ ಆಹಾರವಾಗುವೆನು ; ಅದಲ್ಲದೆ ನೀನು ನನ್ನನ್ನು ಕರದುಕ್ಕೊಂಡು ಹೋದರೆ ನಿನ್ನಲ್ಲಿ ಶ್ರೀರಾಮನಿಗೆ ಸಂಶಯವು ಹುಟ್ಟುವದು ; ಅದೂ ಅಲ್ಲದೆ ಅತ್ಯಂತ ಕ್ರೂರಕರ್ಮಿಗಳಾದ ರಾಕ್ಷಸರು ನೀನು ಕರದುಕ್ಕೊಂಡು ಹೋಗುವ

ಸಮಯದಲ್ಲಿ ನನ್ನನ್ನು ಕಂಡರೆ ಹುಯ್ಲಿಟ್ಟು ಕೂಗುವರು ; ರಾವಣನು ಅನೇಕ ರಾಕ್ಷಸರನ್ನು ಹಿಂದಟ್ಟಿ ಕಳುಹಿಸು ವನು , ನಿನ್ನನ್ನು ತನ್ನ ಸ್ತ್ರೀಯಾದ ನನ್ನನ್ನು ಕರದುಕೊಂಡು ಹೋಗುವ ಶ್ರೀರಾಮನೆಂದು ಹೇಳುವರು , ಹೀಗೆ ಸಂಶಯಹುಟ್ಟಿ ಆಯುಧಪಾಣಿಗಳಾದ ರಾಕ್ಷಸರು ಅಂತರಿಕ್ಷಮಾರ್ಗದಲ್ಲಿ ನಿನ್ನನ್ನು ಅಡ್ಡಗಟ್ಟಿದರೆ ಆಯುಧಪಾಣಿ ಗಳಾದ ರಾಕ್ಷಸರಿಗೂ ನಿರಾಯುಧನಾದ ನಿನಗೂ ಯುದ್ಧವಾದರೆ ನೀನು ಅವರಕೂಡೆ ಯುದ್ಧಮಾಡುವದು ಹ್ಯಾಗೆ ನನ್ನನ್ನು ರಕ್ಷಿಸುವದು ಹ್ಯಾಗೇ ! ಅದೂ ಅಲ್ಲದೆ ನನ್ನನ್ನು ಹೊತ್ತುಕೊಂಡು ಆ ರಾಕ್ಷಸರ ಕೂಡೆ ಯುದ್ಧಮಾಡಿ ಕೊಂಡು ನನ್ನನ್ನು ರಕ್ಷಿಸಬೇಕೆಂದು ಪರಾಕಿನಿಂದ ಹೋದರೆ ಯುದ್ಧವನ್ನು ಕಂಡು ಭಯಪಟ್ಟು ಕಂಗೆಟ್ಟು ನಾನು ನಿನ್ನ ಹೆಗಲಮೇಲಿಂದ ಸಮುದ್ರದಲ್ಲಿ ಬೀಳುವೆನು ; ಆ ಸಮಯದಲ್ಲಿ ರಾಕ್ಷಸರು ನನ್ನನ್ನೆತ್ತಿಕೊಂಡು ಹೋಗುವರು ; ನಿನ್ನನ್ನೂ ಎತ್ತಿಕೊಂಡು ಹೋದಾರು ! ನೀನು ಎಷ್ಟು ಪರಾಕ್ರಮಿಯಾದರೂ ಯುದ್ಧದಲ್ಲಿ ಜಯಾಪಜಯಗಳು ಹೇಳಿದಹಾಗೆ ಬಾರವು ; ನಾನು ರಾಕ್ಷಸರ ಭಯದಿಂದ ನಾಶವನ್ನೈದುವೆನು , ನಿನ್ನ ಪ್ರಯಾಸವು ವ್ಯರ್ಥವಾಗು ವದು. ಇವಲ್ಲದೆ ಸಮಸ್ತ ರಾಕ್ಷಸರನ್ನೂ ಸಂಹರಿಸುವದಕ್ಕೆ ಸಮರ್ಥನಾದರೂ ಶ್ರೀರಾಮನು ರಾಕ್ಷಸರಕೂಡೆ ಯುದ್ಧಮಾಡಲಂಜಿ ನಿನ್ನನ್ನು ಕಳುಹಿಸಿ ನನ್ನನ್ನು ತರಿಸಿಕೊಂಡನೆಂಬ ಅಪಕೀರ್ತಿಯು ಸಂಭವಿಸುವದು ! ನೀನು ಸೋಲಿದರೆ ನನ್ನನ್ನು ಲಂಕಾಪಟ್ಟಣದೊಳಗೆ ಸೆರೆಯಿಡುವರು , ಆಗ ಲಕ್ಷ್ಮಣಸಮೇತನಾದ ಶ್ರೀರಾಮನೂ ಸುಗ್ರೀವನು ಮೊದಲಾದ ಕಪಿನಾಯಕರೂ ನಿನ್ನನ್ನು ಕಾಣದೆ ನನ್ನ ವೃತ್ತಾಂತವನ್ನು ತಿಳಿಯದೆ ಮತ್ತು ದುಃಖ ಕ್ಕೊಳಗಾಗುವರು ; ಶ್ರೀರಾಮನು ನಿನ್ನನ್ನು ಕಾಣದಮೇಲೆ ನೀನು ಸಮುದ್ರವನ್ನು ದಾಟಿಬಂದದ್ದು ವ್ಯರ್ಥವಾ ಗುವದು , ನೀನು ಶ್ರೀರಾಮನನ್ನು ಕರಕೊಂಡು ಬರುವದೇ ಅತ್ಯಂತ ಗಂಭೀರವಾದ ಕಾರ್ಯವು , ನನ್ನ ಪ್ರಾಣವೆಂಬುದು ಶ್ರೀರಾಮನ ಅಧೀನವಾದಂಥಾದ್ದು ; ಲಕ್ಷ್ಮಣನು ಆತನ ಅಧೀನವಾದವನು ; ರಾಮಲಕ್ಷ್ಮಣರು ನನ್ನ ನಿಮಿತ್ತವಾಗಿ ಶೋಕಾಗ್ನಿಯಿಂದ ಕೃಶಾಂಗರಾಗಿ ನನ್ನಮೇಲಣ ಕೃಪೆಯಿಂದ ಸಮಸ್ತ ಕಪಿಸೇನೆಗಳಸಹಿತ ವಾಗಿ ಪ್ರಾಣಗಳನ್ನು ಬಿಡುವದಕ್ಕೆ ಯತ್ನಮಾಡಿಕೊಂಡಿರುವಾಗ ಪರಪುರುಷರ ಶರೀರವನ್ನು ನಾನು ಹ್ಯಾಗೆ ಸ್ಪರ್ಶಮಾಡುವೆನು ! ನಾನು ಸಹಾಯವಿಲ್ಲದೆ ಅನಾಥೆಯಾಗಿ ರಾಕ್ಷಸಾಧಮನಾದ ರಾವಣನು ಬಲಾತ್ಕಾರದಿಂದೆತ್ತಿದಾ ಗ ಪರಿಹರಿಸುವದಕ್ಕೆ ಶಕ್ತಿಯಿಲ್ಲದೆ ಅವನನ್ನು ನೋಡಿದೆನಲ್ಲದೆ ಬುದ್ಧಿಪೂರ್ವಕವಾಗಿ ನೋಡಿದವಳಲ್ಲ , ನಾನು ರಘು ನಾಯಕನ ಪರಾಕ್ರಮಗಳನ್ನು ಕೇಳಿಯೂ ಪ್ರತ್ಯಕ್ಷವಾಗಿ ನೋಡಿಯೂ ಇದ್ದೇನೆ ; ಸಮರದಲ್ಲಿ ದೇವ ಗಂಧರ್ವ ರಾಕ್ಷಸ ನಾಗರಲ್ಲಿಯೂ ಆತನ ಮುಂದೆ ನಿಲ್ಲುವವರಿಲ್ಲ ; ಸಂಗ್ರಾಮದಲ್ಲಿ ಅತ್ಯದ್ಭುತವಾದ ಬಿಲ್ಲುಳ್ಳವನಾಗಿ ದೇವೇಂ ದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಲಕ್ಷ್ಮಣಸಮೇತನಾದ ಶ್ರೀರಾಮನಿಗೆದಿರಾಗಿ ನಿಲ್ಲುವವನ್ಯಾರು ! ಆತನು ಸಮರದಲ್ಲಿ ಕೋಪಿಸಿಕೊಂಡರೆ ಪ್ರಜ್ವಲಿಸುವ ಯಜ್ಞಪುರುಷನಿಗೆ ಸಮಾನನಾಗಿರುವನು ; ಬಲದಲ್ಲಿ ಮದಸೊ ಕ್ಕಿದ ದಿಗ್ಗಜಕ್ಕೆ ಸಮಾನನಾದವನು ; ಯುದ್ಧರಂಗದಲ್ಲಿ ಪ್ರಳಯಕಾಲದ ಸೂರ್ಯನಂತೆ ಪ್ರಕಾಶಿಸುವ ಶ್ರೀರಾಮನ ತೇಜಸ್ಸನ್ನು ಸಹಿಸುವವನ್ಯಾರು ! ಎಲೈ ಕಪಿಶ್ರೇಷ್ಠನೆ, ಶ್ರೀರಾಮನನ್ನು ಕಾಣದೆ ಆತನ ವಿರಹಶೋಕಾಗ್ನಿಯಿಂದ ಬೆಂದು ನೊಂದು ಆತನನ್ನೇ ಧ್ಯಾನಮಾಡುತ ಹಂಬಲಿಸುತಿರುವ ನನಿಗೆ ಲಕ್ಷ್ಮಣಸಮೇತನಾಗಿ ಆತನನ್ನು ತೋರಿ ನನ್ನ ಶೋಕಸಂತಾಪವನ್ನು ಪರಿಹರಿಸು ” ಎಂದು ಹೇಳಿದಳು.

---

## ೩೮ ನೇ ಅ ಧ್ಯಾ ಯ .

## ಸೀ ತಾ ದೇ ವಿ ಯು ಶ್ರೀ ರಾ ಮ ನಿ ಗೆ ಕು ರು ಹು ಕ ಳು ಹಿ ಸಿ ದ್ದು .

ಆ ಮಾತನ್ನು ಕೇಳಿ ಹನುಮಂತನು ಅತ್ಯಂತ ಹರ್ಷಪಟ್ಟು “ ಎಲೈ ಪತಿವ್ರತಾ ಶಿರೋಮಣಿಯಾದ ಸೀತಾ ದೇವಿಯೇ, ನಿನ್ನ ಪತಿವ್ರತಾಧರ್ಮಕ್ಕೆ ಸಲ್ಲುವ ಮಾತುಗಳನ್ನೇ ನುಡಿದೆ ; ಸ್ತ್ರೀಯಾದವಳು ಸಮುದ್ರವನ್ನು ದಾಟುವದಕ್ಕೆ ಸಮರ್ಥಳಲ್ಲ ; ನಿನ್ನ ನಡೆನುಡಿಗಳೆಲ್ಲವು ಶ್ರೀರಾಮನಿಗೆ ಸಂತೋಷವುಂಟುಮಾಡುವವಲ್ಲದೆ ವಿರೋಧ

ಮಾಡುವವಲ್ಲ ; ನಾನು ಸ್ನೇಹದಿಂದ ಇಂಥಾ ಮಂದಿಮಾಳದ ಮಾತುಗಳನ್ನಾಡಿದೆನಲ್ಲದೆ ಮತ್ತೊಂದಲ್ಲ , ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಬರುವುದು ಮಹಾಸತ್ವಸಾಹಸಗಳುಳ್ಳವರಿಗಲ್ಲದೆ ಮತ್ತೊಬ್ಬರಿಗೆ ಕೂಡದೆಂಬುದನ್ನು ತಿಳಿಸಬೇಕೆಂದು ಈ ಮಾತನ್ನಾಡಿದೆನು ; ಶ್ರೀರಾಮನ ವಿಶ್ವಾಸದಿಂದಲೂ ನನ್ನ ಭಕ್ತಿಯಿಂದಲೂ ನಿನ್ನನ್ನು ಕರದು ಕೊಂಡು ಹೋಗುವೆನೆಂದು ನುಡಿದೆನಲ್ಲದೆ ಮತ್ತೊಂದಲ್ಲ ; ನನ್ನ ಸಂಗಡ ಬರಬಾರದೆಂಬಪಕ್ಷದಲ್ಲಿ ಒಂದು ಕುರುಹಿನ ಮಾತನ್ನು ಶ್ರೀರಾಮನಿಗೆ ವಿಶ್ವಾಸವಾಗುವದಕ್ಕಾಗಿ ಹೇಳಿ ಒಂದು ಕುರುಹನ್ನು ಕೊಡು ” ಎಂದು ಕೇಳಿದನು.

ಸೀತಾದೇವಿಯು ಕಣ್ಣೀರು ತುಂಬಿಕೊಂಡು “ ಎಲೈ ಕಪಿನಾಯಕನೆ, ಒಂದು ಉತ್ತಮವಾದ ಕುರುಹಿನ ಮಾತನ್ನು ಹೇಳುತ್ತೇನೆ ; ಅದನ್ನು ಕೇಳಿ ಹೋಗಿ ಶ್ರೀರಾಮನಿಗೆ ಹೇಳು. ಮೊದಲು ನಾನು ಚಿತ್ರಕೂಟಪರ್ವತದ ಈಶಾನ್ಯಭಾಗದಲ್ಲಿರುವ ಪ್ರತ್ಯಂತಪರ್ವತದಬಳಿ ಮಂದಾಕಿನೀತೀರದ ಸಮೀಪದಲ್ಲಿ ನಾನಾಪ್ರಕಾರವಾದ ಕಂದಮೂಲ ಫಲಗಳಿಂದಲೂ ಸ್ವಾದೋದಕವುಳ್ಳ ಕೊಳಗಳಿಂದಲೂ ಪರಿಮಳಪುಷ್ಪಗಳಿಂದಲೂ ಇಟ್ಟಣಿಸಿರುವ ಮಹಾತ್ಮರಾದ ಋಷಿಗಳ ಆಶ್ರಮಗಳಲ್ಲಿ ಸಂಚರಿಸಿ ಬಳಲಿ ಶ್ರೀರಾಮನ ತೊಡೆಯಮೇಲೆ ಕುಳಿತುಕೊಂಡಿರುವಾಗ ಒಂದು ವಾಯಸವು ಬಂದು ನನ್ನನ್ನು ಕುಟಕಿತು ; ನಾನು ಒಂದು ಹೆಂಟೆಯನ್ನು ತೆಗೆದುಕೊಂಡು ಆ ವಾಯಸವನ್ನು ಅಟ್ಟಿ ಕೆಡಹಲು ಅದು ಮರೆಯಾಯಿತು ; ನಾನು ತಿರುಗಿ ಬರುತ್ತಿರಲು ಆ ಮಾಂಸಾಪೇಕ್ಷೆಯುಳ್ಳ ವಾಯಸವು ನನ್ನ ಹಿಂದೆ ಬರುತಿತ್ತು ; ನಾನು ನನ್ನ ಕಾಂಚೀಧಾಮವನ್ನು ತೆಗೆದುಕೊಂಡು ಅದನ್ನು ಹೊಡೆಯಲಾಗಿ ನನ್ನ ವಸ್ತ್ರದುಡಿಗೆ ಸಡಲಿತು ; ಅದನ್ನು ಶ್ರೀರಾಮನು ಕಂಡು ನನ್ನನ್ನು ಹಾಸ್ಯಮಾಡಲು ನಾನು ಲಜ್ಜಿತೆಯಾಗಿ ಕೋಪಿಸಿಕೊಂಡು ಆ ವಾಯಸಕ್ಕೆ ಅಂಜಿಕೊಂಡು ಆತನ ತೊಡೆಯಮೇಲೆ ಕುಳಿತುಕೊಂಡಿರಲು ಶ್ರೀರಾಮನು ಅತಿಹರ್ಷದಿಂದ ನನ್ನನ್ನು ಸಂತವಿಟ್ಟು ಕಣ್ಣೀರನ್ನು ತೊಡೆಯುತಿದ್ದನು ; ನಾನು ಬಳಲಿ ಆತನ ತೊಡೆಯಮೇಲೆ ಬಹಳಹೊತ್ತು ಮಲಗಿದ್ದೆನು. ಆಮೇಲೆ ಆತನು ನನ್ನನ್ನೆಬ್ಬಿಸಿ ನನ್ನ ತೊಡೆಯಮೇಲೆ ಮಲಗಿದನು. ಕೆಲವುಹೊತ್ತಿಗೆ ಆ ವಾಯಸವು ಬಂದು ನನ್ನ ಸ್ತನಮಧ್ಯವನ್ನು ಉಗುರುಗಳಿಂದ ಮತ್ತು ಮತ್ತೂ ಮೇಲಕ್ಕೆ ಹಾರುತ ಬರುತ ಸೀಳುತಿರಲು ಸ್ತನಮಧ್ಯವು ಅದರ ಉಗುರುಗಳಿಂದ ಘಾಯಪಡದು ರಕ್ತಬಿಂದುಗಳು ಶ್ರೀರಾಮನಮೇಲೆ ಬೀಳುತಿದ್ದವು ; ನಾನು ಬಹಳವಾಗಿ ದುಃಖಪಟ್ಟು ನನ್ನ ತೊಡೆಯಮೇಲೆ ಮಲಗಿದ್ದ ಶ್ರೀರಾಮನನ್ನೆಬ್ಬಿಸಿದೆನು ; ಆತನು ಸ್ತನಮಧ್ಯದಲ್ಲಿ ಘಾಯಪಟ್ಟಿದ್ದ ನನ್ನನ್ನು ನೋಡಿ ಅತ್ಯಂತ ಕೋಪಯುಕ್ತನಾಗಿ ‘ ಯಾರು ಹೀಗೆ ಅಸೂಯೆಯನ್ನು ಮಾಡಿದವನು ? ಅತ್ಯಂತ ಕೋಪವುಳ್ಳ ಐದುಹೆಡೆಯುಳ್ಳ ಸರ್ಪವನ್ನು ತುಳಿದವನಂತೆ ಆದನಲ್ಲಾ !’ ಎಂದು ನುಡಿದು ಮುಂದುಗಡೆಯಲ್ಲಿ ಕುಳಿತಿದ್ದ ವಾಯಸನನ್ನು ಕಂಡು ಅದು ಭೂಮಿಯಲ್ಲಿಯೂ ಅಂತರಿಕ್ಷಮಾರ್ಗದಲ್ಲಿಯೂ ಸಂಚರಿಸಿಕೊಂಡು ಗಮನದಲ್ಲಿ ವಾಯುವೇಗಕ್ಕೆ ಸಮಾನವಾದ ವೇಗವುಳ್ಳವನಾಗಿ ದೇವೇಂದ್ರನ ಮಗನಾದ ಕಾಕಾಸುರನೆಂದು ತಿಳಿದು ಮಹಾಕೋಪಯುಕ್ತನಾಗಿ ಅವನಿಗೆ ತಕ್ಕ ಆಜ್ಞೆಯನ್ನು ಮಾಡಬೇಕೆಂದು ಮನಸ್ಸಿನಲ್ಲೆಣಿಸಿ ಕುಳಿತಿದ್ದ ದರ್ಭಾಸನದಲ್ಲಿ ಒಂದು ದರ್ಭೆಯ ಎಸಳನ್ನು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿ ಕಾಲಾಗ್ನಿಯಂತೆ ಪ್ರಜ್ವಲಿಸುತಿದ್ದ ಆ ದರ್ಭಾಸ್ತ್ರವನ್ನು ಪ್ರಯೋಗಿಸಿದನು ; ಆಗ ಆ ವಾಯಸವು ಅಂತರಿಕ್ಷಮಾರ್ಗದಲ್ಲಿ ಹೋಗಲು ದರ್ಭಾಸ್ತ್ರವೂ ಅದರ ಹಿಂದಟ್ಟಿಕೊಂಡು ಹೋಯಿತು ; ಮತ್ತೂ ಆ ವಾಯಸವು ಲೋಕಾಂತರಗಳನ್ನು ನೋಡಬೇಕೆಂದು ಹೋಗುತ್ತಿದೋ ಎಂಬಂತೆ ನಾನಾಲೋಕಗಳಿಗೂ ಹೋದರೂ ದರ್ಭಾಸ್ತ್ರವು ಹಿಂದಟ್ಟಿಕೊಂಡೇ ಹೋಯಿತು ; ಆಮೇಲೆ ಕಾಕಾಸುರನು ಸ್ವರ್ಗಲೋಕಕ್ಕೆ ಹೋಗಲು ಅವನ ತಂದೆಯಾದ ದೇವೇಂದ್ರನೂ ಋಷಿಗಳೂ ಅಪರಾಧಿಯೆಂದು ಪರಿತ್ಯಾಗ ಮಾಡಿದರು, ಈಪ್ರಕಾರವಾಗಿ ಕಾಕಾಸುರನು ಸ್ವರ್ಗಮರ್ತ್ಯ ಪಾತಾಳಗಳಲ್ಲಿ ಎಲ್ಲಿಹೋದರೂ ದರ್ಭಾಸ್ತ್ರವು ಬೆನ್ನಟ್ಟಿ ಹೋಗಲು ನಾನಾಲೋಕಗಳನ್ನೂ ತಿರಿಗಿ ಎಲ್ಲಿಯೂ ಮರೆಯನ್ನು ಕಾಣದೆ ಕಂಗೆಟ್ಟು ಕಡೆಗೆ ಶ್ರೀರಾಮನ ಸಮೀಪಕ್ಕೆ ಬಂದು ದೇಹೀ ಎಂದು ಶರಣಾಗತನಾಗಿ ಭೂಮಿಯಮೇಲೆ ಬಿದ್ದನು ; ಶರಣಾಗತರಕ್ಷಕನಾದ ರಘುನಾಥನು ಕಾಕಾಸುರನು ಕೊಲೆಗೆ ಯೋಗ್ಯನಾದಂಥಾವನಾದರೂ ಕೃಪೆಯಿಂದ ಪರಿಪಾಲಿಸಿ ಆತನನ್ನು ಕುರಿತು ‘ ಎಲೈ ಕಾಕಾ

ಸುರನೆ; ಬ್ರಹ್ಮಾಸ್ತ್ರವನ್ನು ತೊಲಗಿಸುವದಕ್ಕೆ ಯಾರಿಗೂ ಶಕ್ಯವಲ್ಲ; ಆದ್ದರಿಂದ ಈ ಅಸ್ತ್ರವು ನಿನ್ನ ಬಲಗಣ್ಣನ್ನು ಆಹಾರವಾಗಿ ತೆಗೆದುಕೊಂಡು ಕೃತಕೃತ್ಯವಾಗಲಿ!' ಎಂದು ನುಡಿದನು. ಆ ಮಾತನ್ನು ಕೇಳಿ ಕಾಕಾಸುರನು ಮಹಾಪ್ರಸಾದವೆಂದು ಅಂಗೀಕರಿಸಿ ದಶರಥಕುಮಾರನಾದ ಶ್ರೀರಾಮನಿಗೆ ನಮಸ್ಕರಿಸಿ ಕಳುಹಿಸಿಕೊಂಡು ತನ್ನ ಲೋಕಕ್ಕೆ ಹೋದನು ಈ ವೃತ್ತಾಂತವನ್ನು ನನ್ನ ಕಡೆಯ ಕುರುಹುಮಾತಾಗಿ ಹೇಳು. ನನಗೆ ಅಪರಾಧವಮಾಡಿದ ಬಂದು ಕಾಗೆಮಾತ್ರದಲ್ಲೇ ಬ್ರಹ್ಮಾಸ್ತ್ರವನ್ನು ಪ್ರಯೋಗಿಸಿದ ಶ್ರೀರಾಮನು ಈಗ ಏನುಕಾರಣ ನನ್ನನ್ನು ಉಪೇಕ್ಷೆಮಾಡುತಿದ್ದಾನೋ ತಿಳಿಯಲಿಲ್ಲ! 'ಎಲೈ ಶ್ರೀರಾಮನೆ, ವಿಳಂಬವನ್ನು ಮಾಡಬೇಡಾ; ನನ್ನ ಮೇಲೆ ಕೃಪೆಯನ್ನು ಮಾಡು; ದಯಾದಾಕ್ಷಿಣ್ಯ ಪರೋಪಕಾರಾದಿ ಧರ್ಮಗಳನ್ನು ನಿನ್ನಿಂದಲೇ ನಾನು ಕೇಳಿರುವೆನು, ನಿನ್ನ ಮಹಾಬಲಪರಾಕ್ರಮ ಉತ್ಸಾಹ ದಯಾದಾಕ್ಷಿಣ್ಯ ಪರೋಪಕಾರ ಸಮುದ್ರಕ್ಕೆ ಸಮಾನವಾದ ಗಂಭೀರಾದಿ ಗುಣಗಳನ್ನು ಬಲ್ಲೆನು; ನೀನು ಸಮುದ್ರಪರ್ಯಂತವಾದ ಭೂಮಂಡಲಕ್ಕೊಡೆಯನಾದವನು, ಲೋಕದಲ್ಲಿ ಸಮಸ್ತ ಶಸ್ತ್ರಾಸ್ತ್ರವಿದ್ಯಾಪಾರಂಗತರೆಲ್ಲರಿಗೂ ಗುರುವಾದವನು; ಸತ್ವಬಲಸಂಪನ್ನನು; ಇಂಥಾ ಸ್ವಾಮಿಯು ನನ್ನನ್ನೇನುಕಾರಣ ಉಪೇಕ್ಷೆಮಾಡಿ ಶತ್ರುಗಳಾದ ರಾಕ್ಷಸರಲ್ಲಿ ಶಸ್ತ್ರಪ್ರಯೋಗವನ್ನು ಮಾಡದಿದ್ದಾನೆ; ರಣರಂಗದಲ್ಲಿ ಕೋಪಿಸಿಕೊಂಡು ಕೋದಂಡವನ್ನಿಡಿದು ನಿಂತನಾದರೆ ನಾಗ ಗಂಧರ್ವ ಕಿನ್ನರ ಕಿಂಪುರುಷಾದಿ ದೇವತೆಗಳಲ್ಲಿಯಾದರೂ ಸಮಸ್ತ ರಾಕ್ಷಸರಲ್ಲಿಯಾದರೂ ಮಾರ್ಮಲತು ನಿಲ್ಲುವವರ್ಯಾರು! ಅಂಥಾ ಸ್ವಾಮಿಗೆ ನನ್ನಲ್ಲಿ ಕೃಪೆಯುಂಟಾದರೆ ತೀಕ್ಷ್ಣವಾದ ಶರಗಳಿಂದ ರಾವಣಾದಿ ರಾಕ್ಷಸರನ್ನು ಯಮಲೋಕಕ್ಕೆ ಕಳುಹಿಸದಿರುವನೇ! ಆತನ ಅಪ್ಪಣೆಯಿಂದ ಸಮಸ್ತ ಶತ್ರುಸಂಹಾರಕನಾದ ಲಕ್ಷ್ಮಣನಾದರೂ ಯಾವಕಾರಣ ನನ್ನ ಬಂಧನವನ್ನು ಬಿಡಿಸಿ ರಕ್ಷಿಸಲಿಲ್ಲ! ಬೃಹಸ್ಪತಿ ದೇವೇಂದ್ರರಿಗೆ ಸಮಾನವಾದ ಬುದ್ಧಿ ಶಕ್ತಿ ಪರಾಕ್ರಮವುಳ್ಳವರಾಗಿ ರಾಕ್ಷಸರಿಗೆ ಅಸಾಧ್ಯರಾದ ರಾಮಲಕ್ಷ್ಮಣರು ನನ್ನನ್ಯಾಕೆ ಉಪೇಕ್ಷೆಮಾಡಿಕೊಂಡಿಧಾರೆ! ನಾನು ಜನ್ಮಾಂತರದಲ್ಲಿ ಪರರಿಗೆ ದ್ರೋಹವನ್ನು ಮಾಡಿರಬೇಕು; ಈ ಅರ್ಥದಲ್ಲಿ ಸಂಶಯವಿಲ್ಲ' ಎಂದು ನಾನು ಬಿನ್ನವಿಸಿದೆನೆಂದು ಶ್ರೀರಾಮನಿಗೆ ತಿಳುಹಿಸು" ಎಂದು ನುಡಿದಳು.

ಹನುಮಂತನು "ಎಲೈ ದೇವಿಯೇ, ರಘುನಾಥನು ನಿನ್ನ ವಿರಹಶೋಕದಿಂದ ನೊಂದು ಹಂಬಲಿಸುತಿದ್ದನು; ಆತನು ದುಃಖಾಕ್ರಾಂತನಾಗಿರುವದನ್ನು ನೋಡಿ ಲಕ್ಷ್ಮಣನು ಅತ್ಯಂತ ದುಃಖಪಡುತಿದ್ದನು; ಈಗ ನಿನ್ನನ್ನು ಕಂಡು ಕಾಯುವ ಕಾಲವಾಯಿತು; ಅಲ್ಪಕಾಲದೊಳಗಾಗಿ ನಿನ್ನ ದುಃಖವನ್ನು ಕಳೆದುಕೊಂಡು ಸುಖವನ್ನು ಪಡೆಯುವೆ; ದಶರಥರಾಯನ ಕುಮಾರರಾಗಿ ಅತ್ಯಂತ ಸಮರೋತ್ಸಾಹಪುರುಷರಾದ ರಾಮಲಕ್ಷ್ಮಣರು ನಿನ್ನನ್ನು ಕಾಣಬೇಕೆಂಬ ಆಶೆಯಿಂದಿಧಾರೆ, ಆದಕಾರಣ ನಾನು ಹೋಗಿ ನಿನ್ನ ಪರಿಣಾಮಸ್ಥಿತಿಯನ್ನು ಹೇಳಿದ ಕ್ಷಣದಲ್ಲಿಯೇ ದಂಡೆತ್ತಿ ಬಂದು ಪುತ್ರಮಿತ್ರಬಂಧುಸಹಿತನಾದ ರಾವಣನನ್ನು ಯಮಲೋಕಕ್ಕೆ ಕಳುಹಿಸಿ ಲಂಕಾಪಟ್ಟಣವನ್ನು ಭಸ್ಮಮಾಡಿ ನಿನ್ನನ್ನು ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋಗುವರು; ಈ ಅರ್ಥದಲ್ಲಿ ಸಂಶಯವಿಲ್ಲ; ಶ್ರೀರಾಮನು ಲಕ್ಷ್ಮಣನನ್ನು ಕರೆದು ಈ ಕಾರ್ಯವನ್ನು ಸಾಧ್ಯಮಾಡಿಕೊಂಡು ಬರಹೇಳಿ ಕಳುಹಿಸಿದನಾದರೆ ಮಹಾಬಲವಂತನಾದ ಲಕ್ಷ್ಮಣನೇ ರಾವಣನನ್ನು ವಧೆಮಾಡಿ ನಿನ್ನನ್ನು ಕರೆದುಕೊಂಡು ಹೋಗುವನು; ಅದಲ್ಲದೆ ರಘುನಾಥನು ಸುಗ್ರೀವನನ್ನು ಕರೆದು ಹೇಳಿದನಾದರೂ ಆತನು ಈ ಕಾರ್ಯವನ್ನು ಸಾಧ್ಯವಾಗಿ ಮಾಡುವನು; ಶ್ರೀರಾಮನ ಅಪ್ಪಣೆಯಿಂದ ಸುಗ್ರೀವನು ತನ್ನ ಕಪಿನಾಯಕರನ್ನು ಕಳುಹಿಸಿದನಾದರೆ ಅವರು ಈ ಕಾರ್ಯವನ್ನು ಸಾಧ್ಯಮಾಡುವರು" ಎಂದು ನುಡಿದನು.

ಸೀತಾದೇವಿಯು "ಎಲೈ ಹನುಮಂತನೆ, ಕೌಸಲ್ಯಾದೇವಿಯ ಕುಮಾರನಾದ ಶ್ರೀರಾಮನಿಗೆ 'ಸೀತಾದೇವಿಯು ನಿನಗೆ ಸುಖದಲ್ಲಿರುವದಾಗಿ ನಿನ್ನ ಪರಿಣಾಮಸ್ಥಿತಿಯನ್ನು ಕೇಳಿದಳು' ಎಂದು ಹೇಳು; ಲಕ್ಷ್ಮಣನು ಸಮಸ್ತ ಭೂಮಂಡಲಾಧಿಪತ್ಯವನ್ನೂ ಸಮಸ್ತ ಐಶ್ವರ್ಯವನ್ನೂ ಸಮಸ್ತ ಸ್ತ್ರೀಯರನ್ನೂ ಅನೇಕ ರತ್ನಗಳನ್ನೂ ಸಮಸ್ತ ಪ್ರಜೆಗಳನ್ನೂ ಬಿಟ್ಟು ಶ್ರೀರಾಮನೇ ತನ್ನ ತಂದೆಯೆಂದು ವಿಚಾರಿಸಿ ನನ್ನನ್ನು ಹೆತ್ತ ತಾಯಿಯೆಂದೆಣಿಸಿ ನಮಿಗೋ

ಸ್ಕರ ಸಮಸ್ತ ಸುಖವನ್ನೂ ಬಿಟ್ಟು ವನಾಂತರಕ್ಕೆ ಬಂದು ತನ್ನ ಅಣ್ಣನ ಸೇವೆಯನ್ನು ಮಾಡಿಕೊಂಡಿರುವವನಾಗಿ ಮಹಾಬಲವಂತನಾಗಿ ವೃದ್ಧಸೇವೆ ಮಾಡಿಕೊಂಡಿರುವವನಾಗಿ ಬಹುಭಾಷೆಗಳನ್ನು ನುಡಿಯುದವನಾಗಿ ತನ್ನ ತಂದೆಯಾದ ದಶರಥರಾಯನ ಗುಣಗಳಿಗೆ ಸಮಾನವಾದ ಗುಣಗಳುಳ್ಳವನು; ಶ್ರೀರಾಮನಿಗೆ ನನಿಗಿಂತಲೂ ಅಧಿಕವಾದ ಪ್ರಿಯವುಳ್ಳವನು; ಶ್ರೀರಾಮನು ತನಿಗೆ ರಾಕ್ಷಸರ ಸಂಗಡ ಯುದ್ಧಬಂದಲ್ಲಿ ಲಕ್ಷ್ಮಣನನ್ನು ನನಿಗೆ ಕಾವಲಾಗಿರಿಸಿ ಯುದ್ಧಕ್ಕೆ ಹೋಗುವನು; ರಘುನಾಯಕನು ಲಕ್ಷ್ಮಣನ ವಿನಯಾದಿ ಗುಣಗಳನ್ನೂ ನನ್ನನ್ನು ರಕ್ಷಿಸಿಕೊಂಡಿರುವದನ್ನೂ ನೋಡಿ ತನ್ನ ತಂದೆಯಾದ ದಶರಥರಾಯನನ್ನು ನೆನಸದಿದ್ದನು; ರಾವಣನ ಪಟ್ಟಣದಿಂದ ನನ್ನನ್ನು ಮತ್ತೊಬ್ಬರು ಎತ್ತಿಕೊಂಡು ಬರುವುದನ್ನು ಸಹಿಸನು; ಅಂಥಾ ಲಕ್ಷ್ಮಣನ ಸಂಗಡ ನನ್ನ ಪರಿಣಾಮಸ್ಥಿತಿಯನ್ನು ಹೇಳಿ ಆತನ ಯೋಗಕ್ಷೇಮವನ್ನು ಕೇಳಿದೆನೆಂದು ಹೇಳು, ಲಕ್ಷ್ಮಣನು ಮಹಾ ಮೃಗುಭಾಷಿಯು; ಅತ್ಯಂತ ಶುಚಿಯಾದವನು; ಸಮಸ್ತ ಕಾರ್ಯಗಳಲ್ಲಿಯೂ ದಕ್ಷನು; ಶ್ರೀರಾಮನಿಗೆ ಮಹಾಪ್ರಿಯವಾದವನು; ಲಕ್ಷ್ಮಣನೇ ನನ್ನ ದುಃಖವನ್ನು ಪರಿಹರಿಸಬೇಕು; ರಾಮಲಕ್ಷ್ಮಣರ ಮನಸ್ಸಿನಲ್ಲಿ ಈ ಕಾರ್ಯವನ್ನು ನೆರವೇರಿಸಬೇಕೆಂಬ ಬುದ್ಧಿಯನ್ನು ಹುಟ್ಟಿಸುವದಕ್ಕೆ ನೀನು ಸಮರ್ಥನು, ಶ್ರೀರಾಮನು ನಿನ್ನ ಸಹಾಯದಿಂದ ಈ ಕಾರ್ಯಕ್ಕೆ ಯತ್ನವನ್ನು ಮಾಡಬೇಕು; ರಾವಣನು ಗಡುವುಕಟ್ಟಿದ ಎರಡು ತಿಂಗಳೊಳಗೆ ಒಂದು ತಿಂಗಳು ಕಳೆಯಿತು; ಇನ್ನೊಂದು ತಿಂಗಳಿಧೆ, ಆ ತಿಂಗಳೂ ಕಳೆದಮೇಲೆ ನಾನು ಜೀವವಿಡಿದು ನಿಲ್ಲುವದಕ್ಕಿಲ್ಲ; ಹೀಗೆಂದು ಶ್ರೀರಾಮನ ಸಂಗಡ ಮತ್ತು ಮತ್ತೂ ಹೇಳು; ಈ ಮಾತನ್ನು ಸತ್ಯಸಾಕ್ಷಿಯಾಗಿ ಹೇಳುತಲಿಧೇನೆ; ಪೂರ್ವದಲ್ಲಿ ದೇವೇಂದ್ರನು ವೃತ್ರಾಸುರನನ್ನು ಕೊಂದಾಗ ಬ್ರಹ್ಮಹತ್ಯದೋಷದಿಂದ ಐಶ್ವರ್ಯಲಕ್ಷ್ಮಿಯು ತೊಲಗಿ ಪಾತಾಳಕ್ಕೆ ಹೋಗಲು ಆದಿಪುರುಷನಾದ ನಾರಾಯಣನು ಆ ಲಕ್ಷ್ಮಿಯನ್ನು ಪಾತಾಳಲೋಕದಿಂದ ಸ್ವರ್ಗಲೋಕಕ್ಕೆ ಉದ್ಧರಿಸಿದಂತೆ ದುರಾತ್ಮನಾದ ರಾವಣನಲ್ಲಿ ಶರೆಸಿಕ್ಕಿರುವ ನನ್ನನ್ನು ರಕ್ಷಿಸಹೇಳು'' ಎಂದು ಹೇಳಿ ತನ್ನ ಶರಗಿನಲ್ಲಿ ಕಟ್ಟಿದ್ದ ಚೂಡಾಮಣಿಯನ್ನು ಬಿಚ್ಚಿ ಶ್ರೀರಾಮನಿಗೆ ಕೊಡಹೇಳಿ ಆತನ ಕೈಯಲ್ಲಿ ಕೊಟ್ಟಳು.

ಹನುಮಂತನು ಚೂಡಾಮಣಿ ರತ್ನಭೂಷಣವನ್ನು ತೆಗೆದುಕೊಂಡು ಅಷ್ಟು ದೊಡ್ಡಶರೀರವುಳ್ಳವನಾದರೂ ಕಾಮರೂಪಿಯಾದ್ದರಿಂದ ಭೂಷಣಕ್ಕೆ ತಕ್ಕಹಾಗೆ ಬೆರಳನ್ನು ಸೂಕ್ಷ್ಮವಾಗಿ ಮಾಡಿಕೊಂಡು ಅದನ್ನು ಧರಿಸಿಕೊಂಡು ಸೀತಾದೇವಿಗೆ ಪ್ರದಕ್ಷಿಣ ನಮಸ್ಕಾರವನ್ನು ಮಾಡಿ ಆ ದೇವಿಯನ್ನು ಕಂಡದ್ದರಿಂದ ಮನೋಹರ್ಷವುಳ್ಳವನಾಗಿ ಅಂತರಂಗದಲ್ಲಿ ಶ್ರೀರಾಮನನ್ನು ಧ್ಯಾನಮಾಡುತ ಶ್ರೀರಾಮನ ಬಳಿಗೆ ಹೋಗುವದಕ್ಕೆ ಸನ್ನದ್ಧನಾಗಿದ್ದನು

---

## ೩೯ನೇ ಅಧ್ಯಾಯ.

### ಸೀತಾದೇವಿಯು ಹನುಮಂತನು ತಿರುಗಿ ಹೋಗಲು ಅಪ್ಪಣೆ ಕೊಟ್ಟದ್ದು.

ಆ ಸಮಯದಲ್ಲಿ ಸೀತಾದೇವಿಯು ಆತನನ್ನು ಕುರಿತು ''ಎಲೈ ಹನುಮಂತನೆ, ಶ್ರೀರಾಮನು ನಿನ್ನ ಕೈಯಲ್ಲಿ ಕೊಟ್ಟುಕಳುಹಿಸಿದ ಕುರುಹಿನ ಮುದ್ರೇ ಉಂಗರವನ್ನು ಕಂಡು ಆ ಸ್ವಾಮಿಯನ್ನೇ ಸಾಕ್ಷಾತ್ಕಾರವಾಗಿ ಕಂಡಂತೆ ನನ್ನ ಮನಸ್ಸಿಗೆ ಅತ್ಯಂತ ಹರ್ಷವಾಯಿತು; ನಾನು ಕೊಟ್ಟ ಚೂಡಾಮಣಿಯನ್ನು ಆತನು ಕಂಡರೆ ನನ್ನನ್ನೂ ನನ್ನ ತಂದೆಯಾದ ಜನಕರಾಯನನ್ನೂ ನನ್ನ ಮಾವನಾದ ದಶರಥರಾಯನನ್ನೂ ನೆನಸುವನು; ಯಾಕಂದರೆ; ಈ ಚೂಡಾಮಣಿಯನ್ನು ನಮ್ಮ ವಿವಾಹಕಾಲದಲ್ಲಿ ದಶರಥರಾಯನ ಸಮಕ್ಷಮದಲ್ಲಿ ನನ್ನ ತಂದೆಯಾದ ಜನಕರಾಯನು ನನಿಗೆ ಕೊಟ್ಟನು; ಆದ್ದರಿಂದ ರಘುನಾಥನು ಇದನ್ನು ಕಂಡಮಾತ್ರದಲ್ಲಿ ನಮ್ಮ ಮೂವರನ್ನು ಸ್ಮರಿಸುವನು; ನಾನು ಜೀವವಂತೆಯಾಗಿರುವುದನ್ನು ತಿಳಿದು ಮುಂದಣ ರಾಜಕಾರ್ಯಕ್ಕೆ ಯತ್ನಮಾಡುವನು, ಆ ಕಾರ್ಯಕ್ಕೆ ತಕ್ಕ ಸಹಾಯಸಂಪತ್ತುಗಳನ್ನು ಮಾಡುವದಕ್ಕೆ ನೀನು ಸಮರ್ಥನು; ಈ ಕಾರ್ಯವು ನಿನ್ನ ಅಧೀನವಾದಂಥಾದ್ದು;

ನಿನ್ನ ಪರಾಕ್ರಮವನ್ನು ತಿಳಿದಿರುವದರಿಂದ ನಾನು ಚಿತ್ತವನ್ನು ಸ್ವಸ್ಥಮಾಡಿಕೊಂಡು ದುಃಖವನ್ನು ಬಿಟ್ಟಿರುವೆನು; ಆದಕಾರಣ ನೀನು ಶ್ರೀರಾಮನ ಕಾರ್ಯಕ್ಕೆ ಸಹಾಯಮಾಡಿ ಆತನ ಮನೋದುಃಖವನ್ನು ಪರಿಹರಿಸು" ಎಂದು ಹೇಳಿದಳು.

ಆ ಬಳಿಕ ಹನುಮಂತನು ಮಹಾಪ್ರಸಾದವೆಂದು ಅಂಗೀಕರಿಸಿ ತನಗೆ ನಮಸ್ಕಾರವನ್ನು ಮಾಡಿ ಪ್ರಯಾಣವಾಗಿ ಹೊರಡುವದನ್ನು ಕಂಡು ಸೀತಾದೇವಿಯು ಕಣ್ಣೀರುತುಂಬಿ ಬಿಕ್ಕಿಬಿಕ್ಕಿ ಅಳುತ "ಎಲೈ ಹನುಮಂತನೆ, ರಾಮಲಕ್ಷ್ಮಣರಿಬ್ಬರ ಸಂಗಡ ನಾನು ಅವರ ಪರಿಣಾಮಸ್ಥಿತಿಯನ್ನು ಕೇಳಿದೆನೆಂದು ಹೇಳು, ಸುಗ್ರೀವನನ್ನೂ ಆತನ ಸಮೀಪದಲ್ಲಿರುವ ಪ್ರಧಾನರನ್ನೂ ಕಪಿಗಳನ್ನೂ ಕುರಿತು ಅವರ ಯೋಗಕ್ಷೇಮಗಳನ್ನು ಕೇಳಿದೆನೆಂದು ಹೇಳು; ಶ್ರೀರಾಮನು ದುಃಖಸಾಗರದಲ್ಲಿ ಬಿದ್ದಿರುವ ನನ್ನನ್ನುದ್ಧರಿಸಿ ಹ್ಯಾಗೆ ಸನ್ಮಾನಿಸಬೇಕೋ ಹಾಗೆ ಹೇಳು; ನಿನಗೆ ವಾಕ್ಮಾತ್ರದಿಂದಲೇ ಬಹುಧರ್ಮಗಳು ಬರುವವು, ನಾನು ಶ್ರೀರಾಮನ ಸಮೀಪದಲ್ಲಿದ್ದಾಗ ಯಾವಾಗಲೂ ಆತನು ಉತ್ಸಾಹಗುಣಯುಕ್ತವಾದ ಮಾತುಗಳನ್ನೇ ನುಡಿಯುತಿದ್ದನು, ನನ್ನನಿಮಿತ್ತವಾಗಿ ಆತನಿಗೆ ಪೌರುಷವು ಹೆಚ್ಚುವದಲ್ಲದೆ ತಗ್ಗುವದಿಲ್ಲ; ನಾನು ಹೇಳಿಕಳುಹಿಸಿದ ಮಾತನ್ನು ಕೇಳಿದರೆ ಅತ್ಯಂತ ಉತ್ಸಾಹದಿಂದ ಪರಾಕ್ರಮವನ್ನೇ ಆಶ್ರಯಿಸುವನು" ಎಂದು ಹೇಳಿದಳು.

ಹನುಮಂತನು "ಎಲೈ ಸೀತಾದೇವಿಯೇ, ನಿನ್ನ ಸಂಗಡ ಬಹುಮಾತುಗಳನ್ನಾಡಬಾರದು, ರಘುನಾಥನು ಯುದ್ಧರಂಗದಲ್ಲಿ ಸಮಸ್ತ ಶತ್ರುಗಳನ್ನೂ ಜಯಿಸಿ ನಿನ್ನ ದುಃಖವನ್ನು ತೊಲಗಿಸಿ ಅನೇಕಮಂದಿ ಕಪಿನಾಯಕರನ್ನು ಕೂಡಿಕೊಂಡು ಬಂದು ಸಮಸ್ತ ರಾಕ್ಷಸಬಲಸಮೇತನಾದ ರಾವಣನನ್ನು ಕೊಂದು ಶೀಘ್ರದಲ್ಲಿ ನಿನ್ನನ್ನು ಕರದುಕೊಂಡು ಹೋಗುವನು; ಶ್ರೀರಾಮನು ಯುದ್ಧದಲ್ಲಿ ಶರಸಂಧಾನವನ್ನು ಮಾಡಿದರೆ ದೇವಾಸುರ ಮನುಷ್ಯರಲ್ಲಿ ಆತನಿಗೆದಿರಾಗಿ ನಿಲ್ಲುವವರ್ಯಾರು! ಸೂರ್ಯ ಯಮ ವರುಣರಾದರೂ ಆತನ ಇದಿರಾಗಿ ರಣರಂಗದಲ್ಲಿ ನಿಲ್ಲಲಾರರು! ಎಲೈ ಸೀತಾದೇವಿಯೇ, ಸಮುದ್ರಪರ್ಯಂತರವಾದ ಭೂಮಂಡಲವನ್ನು ಪಾಲಿಸಬೇಕೆಂಬುದೂ ಸಮಸ್ತ ಶತ್ರುಗಳನ್ನು ಸಂಹರಿಸಿ ಜಯಲಕ್ಷ್ಮಿಯನ್ನು ಪಡೆಯಬೇಕೆಂಬುದೂ ನಿನ್ನ ನಿಮಿತ್ತವಾಗಲ್ಲದೆ ಮತ್ತೊಂದಲ್ಲ" ಎಂದು ನುಡಿದನು.

ಸೀತಾದೇವಿಯು ಪ್ರಯಾಣಸ್ಥನಾದ ಹನುಮಂತನನ್ನು ನೋಡಿ ತನ್ನ ಪತಿಯ ಸ್ನೇಹದಿಂದ ಆತನನ್ನು ಕುರಿತು "ಎಲೈ ಹನುಮಂತನೇ, ನಾನು ಸಮರ್ಪಿಸುವ ಕಂದಮೂಲ ಫಲಾದಿಗಳನ್ನು ನೀನು ಸ್ವೀಕರಿಸುವದಕ್ಕೆ ನಾನು ಭಾಗ್ಯವನ್ನು ಪಡೆಯಲಿಲ್ಲ; ನೀನು ಈ ವನದಲ್ಲಿರುವ ಫಲಗಳನ್ನು ಆಹಾರಮಾಡಿ ಯಾರಿಗೂ ತಿಳಿಯದಹಾಗೆ ಒಂದು ರಾತ್ರಿಯು ವಿಶ್ರಮಿಸಿಕೊಂಡು ಆಯಾಸವನ್ನು ಪರಿಹರಿಸಿಕೊಂಡು ನಾಳೇ ಹೋಗು, ನಿನ್ನನ್ನು ಕಂಡ ಮಾತ್ರದಲ್ಲಿ ನನ್ನ ಶೋಕಾಗ್ನಿಯು ಶಾಂತವಾಯಿತು; ನೀನು ಹೋಗಿಬರುವ ಪರ್ಯಂತರವು ನನ್ನ ಪ್ರಾಣಗಳಿರುವವೊ—ಇರವೊ! ನೀನು ಹೋಗಿ ಶೀಘ್ರದಲ್ಲಿ ಬರದಿದ್ದರೆ ನಿನ್ನನ್ನು ಕಾಣದಿರುವ ದುಃಖವು ಶಾಂತವಾದ ನನ್ನ ದುಃಖವನ್ನು ಪುಟವಿಕ್ಕಿ ಎಬ್ಬಿಸುವದು, ಅದಲ್ಲದೆ ನನ್ನ ಮನಸ್ಸಿನಲ್ಲಿ ಮತ್ತೊಂದು ಸಂದೇಹವಿದೆ; ನಿನಗೆ ಸಹಾಯವಾಗಿ ಬರುವ ಕಪಿನಾಯಕರು ಈ ಅಪಾರವಾದ ಸಮುದ್ರವನ್ನು ಹ್ಯಾಗೆ ದಾಟುವರು? ಕಪಿಸೇನೆಗಳು ಹ್ಯಾಗೆ ಬರುವವು; ಶ್ರೀರಾಮ ಲಕ್ಷ್ಮಣರು ಹ್ಯಾಗೆ ದಾಟಿ ಬರುವರು? ಲೋಕದಲ್ಲಿ ಸಮುದ್ರವನ್ನು ದಾಟಬರುವದಕ್ಕೆ ಗರುಡನು ನೀನು ವಾಯುದೇವನು ಈ ಮೂವರಿಗೆ ಸಾಮರ್ಥ್ಯವುಂಟಲ್ಲದೆ ಮಿಕ್ಕವರಿಗಿಲ್ಲ; ಈ ಸಂಶಯಪ್ರಶ್ನೆಗೆ ನೀನೇನು ಉತ್ತರವನ್ನು ಕೊಡುವೆ? ಈ ಕಾರ್ಯವನ್ನು ಸಾಧಿಸುವದಕ್ಕೆ ನೀನೊಬ್ಬನೇ ಸರಿ; ನೀನೇ ಬಲವಂತನು; ಕೀರ್ತಿವಂತನು; ನಿನ್ನ ಸಹಾಯದಿಂದ ಈ ಸಮುದ್ರವನ್ನು ದಾಟಿ ಯುದ್ಧದಲ್ಲಿ ರಾವಣನನ್ನು ಸಂಹರಿಸಿ ನನ್ನನ್ನು ಕರದುಕೊಂಡು ಹೋದನಾದರೆ ಮಹಾತ್ಮನಾದ ಶ್ರೀರಾಮನ ಪರಾಕ್ರಮಕ್ಕೆ ಸಮಾನವಾದ ಪರಾಕ್ರಮವಿಲ್ಲ; ಆತನು ರಾವಣನನ್ನು ಜಯಿಸಿ ನನ್ನನ್ನು ಕರದುಕೊಂಡು ಹೋದರೆ ನಿನಗೆ ಬಹಳವಾದ ಕೀರ್ತಿಯು ಸಂಭವಿಸು

ವುದು, ರಘುನಾಥನು ಶತ್ರುಬಲಸಂಹಾರಕನು; ನಿನ್ನ ಸಹಾಯದಿಂದ ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಮುತ್ತಿಗೆಯನ್ನು ಹಾಕಿ ಸಮಸ್ತ ರಾಕ್ಷಸಬಲಗಳನ್ನೂ ಕೊಂದು ರಾವಣನನ್ನು ಸಂಹರಿಸಿ ನನ್ನನ್ನು ಕರದುಕೊಂಡು ಹೋಗುವನು, ಸಮುದ್ರಲಂಘನವೇ ಪ್ರಧಾನಕಾರ್ಯವು" ಅಂದಳು.

ಹನುಮಂತನು "ಎಲೈ ಸೀತಾದೇವಿಯೇ, ಸಮಸ್ತ ಕಪಿಗಳಿಗೂ ನಾಯಕನಾದ ಸುಗ್ರೀವನು ಮಹಾ ಸತ್ವಸಂಪನ್ನನು, ಯಾವಪ್ರಕಾರದಲ್ಲಾದರೂ ರಾವಣನನ್ನು ಸಂಹರಿಸಿ ನಿನ್ನನ್ನು ಕರೆದುಕೊಂಡು ಹೋಗಬೇಕೆಂದು ಸಾವಿರಕೋಟಿ ಕಪಿಸೇನೆಯನ್ನು ಕೂಡಿಸಿಧಾನೆ, ಆತನು ಶೀಘ್ರದಲ್ಲಿ ಬಂದು ರಾಕ್ಷಸರನ್ನು ಸಂಹಾರಮಾಡುವನು; ಸುಗ್ರೀವನ ಸಮೀಪದಲ್ಲಿ ಕೆಲವು ಸೇನಾನಾಯಕರಿಧಾರೆ, ಅವರು ಮಹಾಪರಾಕ್ರಮಶಾಲಿಗಳು, ಮಹಾಸತ್ವಶೀಲಸಂಪನ್ನರು, ನೆನದತಾವಿಗೆ ಹೋಗುವಂಥಾವರು, ಅವರಿಗೆ ಕೆಳಗಾದರೂ ಮೇಲೆಯಾದರೂ ಅಡ್ಡಲಾಗಿಯಾದರೂ ದಿಕ್ಕುಗಳಲ್ಲಾದರೂ ಸಂಚರಿಸುವದಕ್ಕೆ ಸಾಮರ್ಥ್ಯವಿಲ್ಲವೆಂಬುದಕ್ಕಿಲ್ಲ; ಅಸಾಧ್ಯವಾದ ಕಾರ್ಯಬಂದಲ್ಲಿಯೂ ಕಾರ್ಯಸಾಧಿತೋ ಆಗದೋ ಎಂಬ ಸಂಶಯಪಡುವವರಲ್ಲ; ಅವರು ವಾಯುವೇಗವುಳ್ಳವರು; ಮಹತ್ತಾದ ಕಾರ್ಯಗಳಲ್ಲಿ ನಿಯೋಗಿಸಲ್ಪಟ್ಟು ಸಮುದ್ರಪರ್ಯಂತವಾದ ಭೂಮಂಡಲವನ್ನು ಸಂಚರಿಸಿದಂಥಾವರು; ಸುಗ್ರೀವನ ಸಮೀಪದಲ್ಲಿರುವ ಕಪಿನಾಯಕರಲ್ಲಿ ನನಿಗಿಂತಲೂ ಬಲವಂತರಾದವರೂ ನನಿಗೆ ಸಮಾನರಾದವರೂ ಅಲ್ಲದೆ ನನಿಗಿಂತಲೂ ಬಲಹೀನರಾದವರಿಲ್ಲ; ನಾನೇ ಸಮುದ್ರವನ್ನು ದಾಟಬಂದಮೇಲೆ ನನಿಗಿಂತಲೂ ಬಲವಂತರಾದವರು ಬರುವರೆಂಬುದಕ್ಕೆ ಸಂದೇಹವೇನು! ಮಹಾಪ್ರತಾಪಶಾಲಿಯಾಗಿ ನನ್ನ ಒಡೆಯನಾದ ಸುಗ್ರೀವನು ಈ ಸಮುದ್ರವನ್ನು ದಾಟುವಂಥಾವರನ್ನು ಕಳುಹಿಸುವನಲ್ಲದೆ ಕಂಡವರನ್ನು ಕಳುಹಿಸನು; ನಿನಗೆ ಸಂದೇಹವು ಬ್ಯಾಡ; ಚಿಂತೆಯನ್ನು ಬಿಡು; ಆ ಕಪಿನಾಯಕರು ಒಬ್ಬೊಬ್ಬರೇ ಲಂಕಾಪಟ್ಟಣವನ್ನೆತ್ತಿಕೊಂಡು ಹೋಗುವದಕ್ಕೆ ಸಮರ್ಥರು, ರಾಮಲಕ್ಷ್ಮಣರು ನನ್ನ ಬೆನ್ನಮೇಲೆ ಹತ್ತಿಕೊಂಡು ಸಮುದ್ರವನ್ನು ದಾಟಬಂದು ತಮ್ಮ ಶರಸಂಧಾನ ಚಾತುರ್ಯದಿಂದ ಲಂಕಾಪಟ್ಟಣವನ್ನು ದಹಿಸಿ ರಾವಣನನ್ನು ಯಮನಪುರಿಯನ್ನೈದಿಸಿ ನಿನ್ನನ್ನು ಕರದುಕೊಂಡು ಅಯೋಧ್ಯಾಪಟ್ಟಣಕ್ಕೆ ಹೋಗುವರು; ಈ ಅರ್ಥದಲ್ಲಿ ಸಂಶಯವಿಲ್ಲ, ಆದಕಾರಣ ನೀನು ಕೆಲವುಕಾಲವು ಕ್ಷಮಿಸಿಕೋ, ನಿನಗೆ ಎಲ್ಲಾಕಾರ್ಯಗಳೂ ಲೇಸಾದೀತು, ನೀನು ಯಜ್ಞಪುರುಷನಂತೆ ಜ್ವಲಿಸುತ್ತಿರುವ ಶ್ರೀರಾಮನನ್ನು ಶೀಘ್ರದಲ್ಲಿ ಕಾಣುವೆ; ರಘುನಾಥನು ರಣರಂಗದಲ್ಲಿ ಪುತ್ರಪೌತ್ರ ಬಂಧುವರ್ಗಸಹಿತನಾದ ರಾವಣನನ್ನು ಸಂಹರಿಸಿದಮೇಲೆ ರಾಹುತುಡುಕಿ ಬಿಟ್ಟ ಚಂದ್ರನೊಡನೆ ರೋಹಿಣೀದೇವಿಯು ಕೂಡುವಂತೆ ನೀನು ಶೀಘ್ರದಲ್ಲಿ ಶ್ರೀರಾಮನೊಡನೆ ಕೂಡುವೆ; ಎಲೈ ಸೀತಾದೇವಿಯೇ, ರಘುನಾಥನಿಂದ ಹತನಾದ ರಾವಣನನ್ನು ಶೀಘ್ರದಲ್ಲಿ ಕಂಡು ಸಂತೋಷವನ್ನು ಪಡೆಯುವೆ, ಲಂಕಾಪಟ್ಟಣದ ಬಾಗಿಲಲ್ಲಿ ಬಿಲ್ಲುಬಾಣಗಳನ್ನು ಧರಿಸಿಕೊಂಡಿರುವ ರಾಮಲಕ್ಷ್ಮಣರನ್ನು ಶೀಘ್ರದಲ್ಲಿ ನೀನು ಕಾಣುವೆ, ಉಗುರು ಕೋರೆದಾಡೆಗಳೇ ಆಯುಧಗಳಾಗುಳ್ಳ ಸಿಂಹಶಾರ್ದೂಲಾದಿಗಳಿಗೆ ಸಮಾನವಾದ ಪರಾಕ್ರಮವುಳ್ಳವರಾಗಿ ಪರ್ವತದಂತೆ ಘನಗಾತ್ರವಾದ ಶರೀರವುಳ್ಳವರಾಗಿ ನೀರುಂಡ ಮೇಘದಂತೆ ತನುಕಾಂತಿಯುಳ್ಳವರಾದ ಕಪಿನಾಯಕರು ಲಂಕಾಪಟ್ಟಣವನ್ನು ಸುತ್ತಿಕೊಂಡು ಬೊಬ್ಬಿಟ್ಟು ಕೂಗುತ ಗರ್ಜಿಸುತ್ತಿರುವದನ್ನು ನೀನು ನೋಡುವೆ; ಸಿಂಹಕ್ಕೆ ಭಯಪಡುವ ಮದಸೊಕ್ಕಿದ ಗಜರಾಜನಂತೆ ಮರ್ಮಸ್ಥಾನಗಳಲ್ಲಿ ಮದನಬಾಣಗಳಿಂದ ತೀಡಲ್ಪಟ್ಟ ರಘುನಾಥನು ನಿನ್ನನ್ಯಾವಾಗ ನೋಡುವದೆಂದು ಹಂಬಲಿಸುತಿಧಾನೆ; ಆದ್ದರಿಂದ ಆತನು ಶೀಘ್ರವಾಗಿ ಬರುವನು; ನಿನ್ನ ಮನಸ್ಸಿನಲ್ಲಿ ಸಂದೇಹವು ಬ್ಯಾಡ, ದುಃಖವನ್ನು ಬಿಡು; ಶಚೀದೇವಿಯು ಇಂದ್ರನನ್ನು ಕಾಣುವಂತೆ ನೀನು ನಿನ್ನ ಪತಿಯಾದ ಶ್ರೀರಾಮನನ್ನು ಕಾಣುವೆ; ಲೋಕದಲ್ಲಿ ರಾಮಲಕ್ಷ್ಮಣರಿಗೆ ಸಮಾನವಾದವರುಂಟೇ! ಅವರಿಬ್ಬರೂ ಕೂಡಿದರೆ ಕಾಡುಕಿಚ್ಚಿನೊಡನೆ ಘಾಳಿಯು ಕೂಡಿದಂತಾಗುವದು; ರಾಮಲಕ್ಷ್ಮಣರು ನಿನ್ನ ಚಿಂತೆಯಿಂದಲೇ ಹಂಬಲಿಸುತಿಧಾರೆ; ಈ ರಾಕ್ಷಸರ ದೇಶದಲ್ಲಿ ನೀನು ಬಹಳ ದಿವಸಗಳಿರುವದಿಲ್ಲ; ಅವರು ಬರುವ ಪರಿಯಂತರ ನೀನು ಕ್ಷಮಿಸಿಕೊಂಡಿರು" ಎಂದು ನುಡಿದನು.

## ೪೦ನೇ ಅಧ್ಯಾಯ.

### ಹನುಮಂತನು ಸೀತಾದೇವಿಗೆ ಧೈರ್ಯ ಹೇಳಿದ್ದು.

ಸೀತಾದೇವಿಯು ಆತನನ್ನು ಕುರಿತು "ಎಲೈ ಕಪಿಶ್ರೇಷ್ಠನೆ, ಲೋಕದಲ್ಲಿ ಮಳೆಯಿಲ್ಲದೆ ಧೂಳಿಯಿಂದ ಬಣಗಿದ ಪೈರು ಮಳೆಯುಂಟಾಗಿ ಸಂತೋಷಪಡುವಂತೆ ನಿನ್ನ ಪ್ರಿಯ ವಚನಗಳಿಂದ ನನ್ನ ಮನಸ್ಸಿಗೆ ಮಹಾ ಸಂತೋಷವಾಯಿತು, ಶ್ರೀರಾಮನ ವಿರಹಶೋಕಾಗ್ನಿಯಿಂದ ಕುಂದಿದ ನನ್ನ ಕರಚರಣಾದಿ ಅಂಗಗಳಿಂದ ನನ್ನ ಮನಸ್ಸುಬಂದಂತೆ ರಘುನಾಥನ ಅಂಗಸಂಗಸುಖವನ್ನು ಹ್ಯಾಗೆ ಪಡೆಯುವದಕ್ಕಾಗುವದೋ ಆಪ್ರಕಾರವಾಗಿ ಕೃಪೆಯನ್ನು ಮಾಡು, ಇನ್ನೊಂದು ಕುರುಹಿನ ಮಾತನ್ನು ಹೇಳುತ್ತೇನೆ ಕೇಳು; ಚಿತ್ರಕೂಟಪರ್ವತದ ಮಣಿ ಶಿಲೆಯಲ್ಲಿ ಕುಳಿತಿದ್ದಾಗ ನನ್ನ ಹಣೆಯಲ್ಲಿದ್ದ ಕಸ್ತೂರಿತಿಲಕವು ಬೆವರು ಹನಿಗಳಿಂದ ತೊಳೆಯಲ್ಪಟ್ಟು ಹೋಗಲು ಶ್ರೀರಾಮನು ಮತ್ತೊಂದು ತಿಲಕವನ್ನಿಟ್ಟನು! ಅಂಥಾ ಸ್ವಾಮಿಯು ರಾಕ್ಷಸರ ಶೆರೆಯಲ್ಲಿರುವ ನನ್ನನ್ನು ಹ್ಯಾಗೆ ಉಪೇಕ್ಷೆ ಮಾಡಿಕೊಂಡಿಧಾನೋ! ಇಷ್ಟುಪರಿಯಂತರ ಈ ಚೂಡಾಮಣಿ ರತ್ನಭೂಷಣವನ್ನು ರಕ್ಷಿಸಿಕೊಂಡಿದ್ದು ಇದನ್ನು ನೋಡುತ ಕೆಲವುಹೊತ್ತು ದುಃಖವನ್ನು ಪರಿಹರಿಸಿಕೊಂಡಿದ್ದೆನು; ಇದನ್ನು ನಿನ್ನ ಕೈಯಲ್ಲಿ ಕೊಟ್ಟು ನಾನು ಹ್ಯಾಗಿರಲಿ! ನಿನ್ನ ಕೂಡೆ ಸಂಭಾಷಣೆ ಮಾಡಿದ್ದನ್ನು ಕಂಡು ಕಾವಲಾಗಿರುವ ರಾಕ್ಷಸಸ್ತ್ರೀಯರು ಅತ್ಯಂತ ಕೋಪಾತಿಶಯದಿಂದ ನನ್ನ ಎದೆಯು ಉಬ್ಬಿ ಒಡೆಯುವಹಾಗೆ ನಿಷ್ಠುರವಚನಗಳನ್ನು ನುಡಿಯುವರು; ಹಾಗಾದರೂ ನೀನು ಹೇಳಿದ ಪ್ರಿಯವಚನಗಳಿಂದ ಒಂದು ತಿಂಗಳ ಪರಿಯಂತರ ಜೀವಿಸಿಕೊಂಡಿರುವೆನು; ಆಮೇಲೆ ಜೀವವಿಡಿದು ನಿಲ್ಲಲಾರೆನು. ಮಹಾಘೋರಸ್ವರೂಪನಾದ ರಾವಣನು ನೀನು ಬಂದು ಮಾತನಾಡಿದ ವೃತ್ತಾಂತವನ್ನು ಕೇಳಿ ನಿನಗೇನಾದರೂ ಉಪದ್ರವಮಾಡಿದರೆ ಆ ದುಷ್ಟನ ಭಯದಿಂದ ಬಾಧೆಪಡುತ್ತಿರುವ ನನ್ನನ್ನು ಕಂಡು ದುಃಖಾತಿಶಯದಿಂದ ಒಂದು ಕ್ಷಣಮಾತ್ರವಾದರೂ ಜೀವವಿಡಿದು ನಿಲ್ಲಲಾರೆನು" ಎಂದು ದೈನ್ಯವಚನಗಳನ್ನು ನುಡಿದಳು

ಹನುಮಂತನು "ಎಲೈ ಸೀತಾದೇವಿಯೇ, ನಿನ್ನ ವಿರಹಶೋಕದಿಂದ ರಘುನಾಥನು ಹಂಬಲಿಸಿದರೆ ಲಕ್ಷ್ಮಣನೂ ದುಃಖಪಡುವನು; ಅವರೆಷ್ಟು ದುಃಖಪಟ್ಟರೂ ಕಾಲವು ಸಂಕೋಚಪಡದು; ಇನ್ನು ಅಲ್ಪಕಾಲದೊಳಗಾಗಿ ದುಃಖದ ಕಡೆಯನ್ನು ಕಾಣುವೆ, ನಿನ್ನನ್ನು ಕಾಣಬೇಕೆಂಬ ವಿರಹವುಳ್ಳ ರಾಮಲಕ್ಷ್ಮಣರು ಸ್ವಲ್ಪಕಾಲದೊಳಗಾಗಿ ಒಂದು ಸಮಸ್ತ ಬಂಧುವರ್ಗ ಸಹಿತನಾದ ರಾವಣನನ್ನು ಕೊಂದು ಲಂಕಾಪಟ್ಟಣವನ್ನು ಭಸ್ಮಮಾಡಿ ನಿನ್ನನ್ನು ಅಯೋಧ್ಯಾಪಟ್ಟಣಕ್ಕೆ ಕರದುಕೊಂಡು ಹೋಗುವರು, ಯಾವ ಕುರುಹನ್ನು ತಕ್ಕೊಂಡುಹೋಗಿ ಕೊಟ್ಟರೆ ಶ್ರೀರಾಮನು ಅತ್ಯಂತ ಹರ್ಷಪಡುವನೋ ಅಂಥಾ ಕುರುಹನ್ನು ಕೊಡು" ಎಂದು ಕೇಳಿದನು.

ಸೀತಾದೇವಿಯು "ಎಲೈ ಹನುಮಂತನೆ, ನಾನು ಕೊಟ್ಟ ಚೂಡಾಮಣಿ ಭೂಷಣವೇ ಶ್ರೀರಾಮನಿಗೆ ಪ್ರಿಯವಾದಂಥಾದ್ದು; ರತ್ನಮಯವಾಗಿ ನನಗೆ ಶಿರೋಭೂಷಣವಾದ ಈ ಚೂಡಾಮಣಿಯನ್ನು ತಕ್ಕೊಂಡುಹೋಗಿ ಆ ಸ್ವಾಮಿಗೆ ಕೊಟ್ಟರೆ ಈ ಭೂಷಣವನ್ನು ಕಂಡಮಾತ್ರದಲ್ಲಿಯೇ ಆತನು ಅತಿಹರ್ಷಪಟ್ಟು ನಿನ್ನ ಮಾತಿನಲ್ಲಿ ಬಹು ವಿಶ್ವಾಸಮಾಡುವನು" ಎಂದು ಹೇಳಿದಳು

ಹನುಮಂತನು ಮಹಾಪ್ರಸಾದವೆಂದು ಅಂಗೀಕರಿಸಿ ಆ ಭೂಷಣವನ್ನು ತೆಗದುಕೊಂಡು ಸೀತಾದೇವಿಗೆ ನಮಸ್ಕರಿಸಿ ಹಿಂದುಗಮನಕ್ಕೆ ಯತ್ನಮಾಡುತ ಮನೋತ್ಸಾಹದಿಂದ ಶರೀರವನ್ನು ಬೆಳೆಸುತಿದ್ದದ್ದನ್ನು ಕಂಡು ಸೀತಾದೇವಿಯು ಕಣ್ಣೀರುತುಂಬಿಕೊಂಡು ಬಿಕ್ಕುತ "ಎಲೈ ಹನುಮಂತನೆ, ಸಿಂಹರಾಜನಂತೆ ಮಹಾ ಬಲಪರಾಕ್ರಮವುಳ್ಳ ರಾಮಲಕ್ಷ್ಮಣರನ್ನೂ ಸಮಸ್ತ ಪ್ರಧಾನರಸಹಿತನಾದ ಸುಗ್ರೀವನನ್ನೂ ಪರಿಣಾಮಸ್ಥಿತಿಯನ್ನು ಕೇಳಿದೆನೆಂದು ಹೇಳು; ಶ್ರೀರಾಮನಿಗೆ ನಾನು ರಾಕ್ಷಸರಿಂದ ಬಾಧೆಪಡುವದನ್ನೂ ಆತನ ವಿರಹಶೋಕದಿಂದ ಹಂಬಲಿಸುವ ವೃತ್ತಾಂತವನ್ನೂ ಹೇಳಿ ಯಾವಪ್ರಕಾರದಲ್ಲಿ ನನ್ನ ವಿರಹಶೋಕಾಗ್ನಿಯು ಶಮನವಾಗುವದೋ ಆಪ್ರಕಾರದಲ್ಲಿ ಮಾಡಲು ಹೇಳು" ಎಂದು ನುಡಿದಳು.

## ೪೧ನೇ ಅಧ್ಯಾಯ.

### ಹನುಮಂತನು ಅಶೋಕವನವನ್ನು ಮುರಿದದ್ದು.

ಈ ಪ್ರಕಾರದಲ್ಲಿ ಸೀತಾದೇವಿಯು ಅನೇಕ ವಿನಯೋಕ್ತಿಗಳಿಂದ ಸನ್ಮಾನಿಸಿ ಕಳುಹಿಸಲು ಹನುಮಂತನು ಆ ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹೋಗಿ ತನ್ನ ಮನಸ್ಸಿನಲ್ಲಿ "ಯಾವಪ್ರಕಾರದಲ್ಲಿಯಾದರೂ ನಾನು ಸಮುದ್ರವನ್ನು ದಾಟಿಬಂದು ಸೀತಾದೇವಿಯನ್ನು ಕಂಡಾಗಲೇ ಕಾರ್ಯವು ಸಾಧ್ಯವಾಯಿತು, ಹಾಗಾದರೂ ಬಂದು ಅಲ್ಪಕಾರ್ಯವು ಶೇಷವಾಗಿದೆ; ರಘುನಾಥನು ಲಕ್ಷ್ಮಣಸಮೇತನಾಗಿ ಸುಗ್ರೀವನ ಸಹಾಯದಿಂದ ದಂಡೆತ್ತಿಬಂದರೆ ಈ ಸಮುದ್ರವನ್ನು ದಾಟುವದೂ ರಾವಣನನ್ನು ಸಂಹರಿಸುವದೂ ಬಂದು ತೃಣಮಾತ್ರವಾಗುವವು; ಆದಕಾರಣ ಸೀತಾದೇವಿಯು ಕಾಣಬಂದಾಗಲೇ ಕಾರ್ಯವು ಸಾಧ್ಯವಾಯಿತು, ಇನ್ನು ನಾನು ಇಲ್ಲಿ ಬಂದದ್ದಕ್ಕೆ ಸಾಮ ದಾನ ಭೇದಗಳೆಂಬ ಮೂರು ಕಾರ್ಯಗಳನ್ನು ಪ್ರಯೋಗಿಸುವದೇ ಕಾರ್ಯವು, ಸಂಧಿಯು ರಾಕ್ಷಸರಲ್ಲಿ ಕೂಡದು, ದಾನೋಪಾಯವನ್ನು ಪ್ರಯೋಗಿಸುವದಕ್ಕೆ ರಾಕ್ಷಸರು ಮಹಾದ್ರವ್ಯಸಂಪನ್ನರು; ಭೇದೋಪಾಯವನ್ನು ಪ್ರಯೋಗಿಸುವದಕ್ಕೆ ಅವರು ಬಲಗರ್ವಿತರು, ಆದ್ದರಿಂದ ನಾನು ನನ್ನ ಪರಾಕ್ರಮವನ್ನನುಸರಿಸಿ ರಾಕ್ಷಸರಲ್ಲಿ ದಂಡೋಪಾಯವನ್ನು ಪ್ರಯೋಗಿಸುವದೇ ಕಾರ್ಯವು. ಈ ಕಾರ್ಯಕ್ಕೆ ಪರಾಕ್ರಮವು ಹೊರ್ತಾಗಿ ಮತ್ತೊಂದುಪಾಯವಿಲ್ಲ, ರಾಕ್ಷಸರು ರಣರಂಗದಲ್ಲಿ ಮಹಾಪ್ರಚಂಡರು, ಮೃದುಗತಿಯನ್ನೈದುವವರಲ್ಲ; ಹಾಗಾದರೂ ಸ್ವಲ್ಪಕಾರ್ಯವನ್ನು ತೊಡಗಿ ಮೊದಲಿನ ಕಾರ್ಯಕ್ಕೆ ವಿಘ್ನವಿಲ್ಲದಹಾಗೆ ಬಹುಸಾಧನಸಂಪತ್ತನ್ನು ಸಾಧಿಸುವವನೇ ಕಾರ್ಯಜ್ಞನು; ಅಲ್ಪಕಾರ್ಯವಾದರೂ ಬಂದು ಸಾಧನದಿಂದಲೇ ಆಗಲಾರದು, ಅಲ್ಪಕಾರ್ಯವನ್ನೂ ದೊಡ್ಡಕಾರ್ಯದಂತೆ ನಡಿಸಲು ಪ್ರವರ್ತಿಸುವವನು ಅನೇಕ ಕಾರ್ಯಸಾಧನದಲ್ಲಿ ದಕ್ಷನಾಗುವನು; ನಾನು ಇಲ್ಲಿ ಬಂದದ್ದರಿಂದ ಕಾರ್ಯನಿಶ್ಚಯವನ್ನು ಕಂಡು ಸುಗ್ರೀವನ ಸಮೀಪಕ್ಕೆ ಹೋಗಬೇಕು; ಯುದ್ಧಕ್ಕೆ ನಿಶ್ಚಯಮಾಡಬೇಕಾದರೆ ದೂತನು ಸ್ವಬಲ ಪರಬಲಗಳನ್ನರಿತರೆ ಒಡೆಯನ ಕಾರ್ಯಸಾಧನವಾಗುವದು; ನಾನು ಇಲ್ಲಿದ್ದುಕೊಂಡು ಪ್ರಯಾಸಪಡದೆ ಬಲಾತ್ಕಾರದಿಂದ ಇಲ್ಲಿರುವ ರಾಕ್ಷಸರ ಕೂಡೆ ಕದನವನ್ನು ಮಾಡಿದೆನಾದರೆ ರಾಕ್ಷಸೇಶ್ವರನಾದ ರಾವಣನು ತನ್ನ ಬಲವನ್ನು ಕಳುಹಿಸಿ ನನ್ನನ್ನು ಹಿಡಿತರಿಸುವನು, ಆಗ ನಾನು ಆತನಕೂಡೆ ಯುದ್ಧವನ್ನು ಮಾಡಿದರೆ ನನ್ನ ಕೂಡೆ ಯುದ್ಧಕ್ಕೆ ಬರುವಾಗಲೆ ಆತನ ಪ್ರಭುಶಕ್ತಿ ಮಂತ್ರಶಕ್ತಿ ಉತ್ಸಾಹಶಕ್ತಿಗಳನ್ನೂ ಆತನ ಬಲವನ್ನೂ ಸತ್ವವನ್ನೂ ಕಂಡು ಮನಸ್ಸಿನಲ್ಲಿ ಸ್ವಸ್ಥವಾಗಿ ಹೋಗುವೆನು, ಈಗ ಫಲಪುಷ್ಪಗಳೂ ವೃಕ್ಷಲತೆಗಳೂ ಉಳ್ಳದ್ದಾಗಿ ಮನೋಹರವಾಗಿ ದೇವೇಂದ್ರನ ಉದ್ಯಾನವನಕ್ಕೆ ಸಮಾನವಾದ ಈ ವನವನ್ನು ಮುರಿದೆನಾದರೆ ಈ ವನದಲ್ಲಿ ಅತ್ಯಂತ ಪ್ರಿಯವುಳ್ಳ ರಾವಣನು ಆ ವೃತ್ತಾಂತವನ್ನು ಕೇಳಿ ಅತ್ಯಂತ ಕೋಪಯುಕ್ತನಾಗಿ ತನ್ನ ಚತುರಂಗಬಲವನ್ನು ಕಳುಹಿಸುವನು; ಆ ರಾಕ್ಷಸರು ತ್ರಿಶೂಲ ಪಟ್ಟಸ ಮೊದಲಾದ ಆಯುಧಗಳನ್ನು ಧರಿಸಿಕೊಂಡು ನನ್ನಮೇಲೆ ಯುದ್ಧಕ್ಕೆ ಬಂದರೆ ಚಂಡವಿಕ್ರಮರಾದ ಆ ರಾಕ್ಷಸರೊಡನೆ ಯುದ್ಧವನ್ನು ಮಾಡಿ ಆ ಬಲವನ್ನು ಸಂಹರಿಸಿ ರಾವಣನ ಬಲಾಬಲಗಳನ್ನು ತಿಳುಕೊಂಡು ಹೋಗುವೆನು" ಎಂದು ನಿಶ್ಚಯಿಸಿ ಪ್ರಳಯಕಾಲದ ಚಂಡಮಾರುತನಂತೆ ಅಪರಿಮಿತ ಬಲಪರಾಕ್ರಮವುಳ್ಳವನಾಗಿ ತನ್ನ ತೊಡೆಗಳ ವೇಗದಿಂದ ಆ ವನದಲ್ಲಿದ್ದ ಮೃಗಗಳನ್ನೂ ಮರಗಳನ್ನೂ ನಾನಾಮೃಗಪಕ್ಷಿಗಳಿಂದ ಇಟ್ಟಣಿಸಿದ್ದ ವೃಕ್ಷಗಳನ್ನೂ ಲತೆಗಳನ್ನೂ ಮುರಿದು ಕೊಳಗಳನ್ನು ಕಲಕಿ ಕೆರೆ ಕಟ್ಟೆ ಕಾಲುವೆಗಳನ್ನು ಒಡೆದು ಕ್ರೀಡಾಪರ್ವತಗಳನ್ನು ಚೂರ್ಣಾಕೃತಿಯಾಗಿ ಮಾಡಿ ಕ್ರೀಡಾಕೊಳಗಳನ್ನು ಹೂಳಿ ಅತ್ಯಂತ ಭಯವನ್ನುಂಟುಮಾಡಿದನು; ಆಗ ಕೂಗಿಕೊಂಡು ಹೋಗುವ ಮೃಗಪಕ್ಷಿಗಳಿಂದಲೂ ಮೊರೆಯುತಿರುವ ತೆರೆಗಳುಳ್ಳ ಒಡೆದ ಕೆರೆಗಳ ಉದಕಪ್ರವಾಹಗಳಿಂದಲೂ ಕಂದಿದ ಲತೆಗಳಿಂದಲೂ ಕಾಂತಿಗುಂದಿದ ತಳಿರುಗಳುಳ್ಳ ವೃಕ್ಷಗಳಿಂದಲೂ ಭಯಂಕರವಾಗಿ ಪ್ರಳಯಕಾಲದ ವಾಯುವಿನಿಂದ ಮುರಿಯಲ್ಪಟ್ಟಂತೆ ಅಶೋಕವನವು ಅತ್ಯಂತ ಅಮಂಗಲ್ಯವಾಗಿ ತೋರುತಿತ್ತು! ಮುರಿದುಹಾಕಿದ ಲತಾಮಂಟಪಗಳಿಂದಲೂ ಚಿತ್ರಮಂ

ಟಪಗಳಿಂದಲೂ ಕ್ರೀಡಾಗೃಹಗಳಿಂದಲೂ ಘೌಳಿಮಂಟಪಗಳಿಂದಲೂ ಆ ವನವು ಮೊದಲಿನ ಸೌಂದರ್ಯವಳಿದು ಭಯಂಕರವಾಗಿತ್ತು ! ಅಶೋಕಲತೆ ಕಿರುವಳ್ಳಿಗಳ ಸಮೂಹವುಳ್ಳದ್ದಾಗಿ ರಾವಣನ ಸ್ತ್ರೀಯರಿಗೆ ಭೋಗಯೋಗ್ಯವಾಗಿ ರಾಕ್ಷಸಸ್ತ್ರೀಯರ ಕಾವಲುಳ್ಳ ಆ ವನಭೂಮಿಯು ಶೋಕವನ್ನುಂಟುಮಾಡುವ ಲತೆಗಳುಳ್ಳದ್ದಾಯಿತು. ಹನುಮಂತನು ಅಶೋಕವನವನ್ನು ಮುರಿದು ರಾವಣನ ಮನಸ್ಸಿಗೆ ಬಹುವ್ಯಥೆಯನ್ನುಂಟುಮಾಡಿ ಒಬ್ಬನೇ ಬಹುಮಂದಿ ರಾಕ್ಷಸರ ಕೂಡೆ ಯುದ್ಧವನ್ನು ಮಾಡಬೇಕೆಂದು ಸನ್ನದ್ಧನಾಗಿ ಆ ವನದ ತೋರಣವನ್ನಾಶ್ರಯಿಸಿಕೊಂಡಿದ್ದನು.

## ೪೨ನೇ ಅಧ್ಯಾಯ

### ಹನುಮಂತನು ಎಂಭತ್ತುಸಾವಿರ ರಾಕ್ಷಸರನ್ನು ಸಂಹರಿಸಿದ್ದು.

ಹನುಮಂತನು ಅಶೋಕವನವನ್ನು ಮುರಿದು ಆ ವನದ ಬಾಗಿಲಲ್ಲಿ ನಿಂತುಕೊಂಡಿರಲು ಆ ವನದಿಂದ ಬೆದರಿ ಓಡಿದ ಮೃಗಪಕ್ಷಿಗಳ ಧ್ವನಿಗಳಿಂದಲೂ ಮುರಿದುಬಿದ್ದ ವೃಕ್ಷಧ್ವನಿಯಿಂದಲೂ ಲಂಕಾಪಟ್ಟಣದಲ್ಲಿದ್ದ ರಾಕ್ಷಸರು ಭಯಪಟ್ಟು ಕಂಗೆಡುತ್ತಿದ್ದರು ; ಆಗ ರಾಕ್ಷಸರ ಮನೆಗಳಲ್ಲಿ ದುರ್ನಿಮಿತ್ತಗಳಾದವು , ಆ ರಾತ್ರಿಯು ಕಳೆದು ಬೆಳಗಾದಮೇಲೆ ಆ ವನಪಾಲಕರಾದ ರಾಕ್ಷಸಸ್ತ್ರೀಯರು ನಿದ್ರೆತಿಳಿದೆದ್ದು ಮರಗಳು ಮುರಿದು ಕೆಡಹಲ್ಪಟ್ಟು ಕೆರೆ ಕಟ್ಟೆ ಕಾಲುವೆಗಳು ಒಡೆದೂ ಕ್ರೀಡಾಕೊಳಗಳು ಕಲಕಲ್ಪಟ್ಟು ಮಹಾ ಭಯಂಕರವಾಗಿದ್ದ ಆ ವನವನ್ನು ನೋಡಿ ಚಂಡವಿಕ್ರಮನಾದ ಹನುಮಂತನನ್ನು ಕಂಡು ಮಹಾ ಭಯಪಟ್ಟರು , ಆಗ ಹನುಮಂತನು ಆ ರಾಕ್ಷಸಸ್ತ್ರೀಯರಿಗೆ ಭಯವಾಗುವಹಾಗೆ ಮಹತ್ತಾದ ಪರ್ವತದಂತೆ ವಿರಾಡ್ರೂಪವನ್ನು ಮಾಡಿಕೊಳ್ಳಲು ಅವರು ಅದ್ಭುತಸ್ವರೂಪನಾದ ಹನುಮಂತನನ್ನು ಕಂಡು ಭಯಪಟ್ಟು ಸೀತಾದೇವಿಯನ್ನು ಕುರಿತು “ ಎಲೈ ಸೀತಾದೇವಿಯೇ, ಇವನ್ಯಾರು ? ಯಾರ ಮಗನು ? ಎಲ್ಲಿಂದ ಬಂದನು ? ಇವನು ಬಂದ ಕಾರಣವೇನು ? ಇವನು ನಿನ್ನ ಕೂಡೆ ಸಂಭಾಷಣೆಮಾಡಿದ ಮಾತೇನು ಹೇಳು ; ನೀನು ಭಯಪಡಬೇಡ ; ನೀನು ಅವನಕೂಡೆ ಆಡಿದ ಮಾತೇನು ? ” ಎಂದು ಕೇಳಿದರು.

ಸೀತಾದೇವಿಯು “ ಎಲೈ ರಾಕ್ಷಸಸ್ತ್ರೀಯರುಗಳಿರಾ, ಇಲ್ಲಿರುವ ರಾಕ್ಷಸರೆಲ್ಲರೂ ಕಾಮರೂಪಿಗಳು , ಅವರ ವರ್ತಮಾನವನ್ನು ವಿಚಾರಿಸುವದಕ್ಕೆ ನನಗೆ ಕಾರಣವೇನು ! ಇಲ್ಲಿ ಯಾರು ಯಾವರೂಪಿನಿಂದಬಂದು ಏನುಮಾಡುತ್ತಾರೆಂಬುದನ್ನು ನೀವೇ ನೋಡಿಕೊಳ್ಳಿ ; ಹಾವಿನ ಹೆಜ್ಜೆಯನ್ನು ಹಾವೇ ಬಲ್ಲದು ; ನಾನು ಈತನನ್ನು ಕಂಡು ಭೀತಿಪಟ್ಟೆನು ; ಈತನು ಕಾಮರೂಪಿಯಾದ ಒಬ್ಬ ರಾಕ್ಷಸನೆಂದಿದ್ದೆನಲ್ಲದೆ ಮತ್ತೊಂದನ್ನರಿಯೆನು ” ಎಂದು ಹೇಳಿದಳು.

ಆ ರಾಕ್ಷಸಸ್ತ್ರೀಯರು ಕೆಲವರನ್ನು ಸೀತಾದೇವಿಗೆ ಕಾವಲಾಗಿರಿಸಿ ಮೊರೆಯಿಟ್ಟುಕೊಂಡು ರಾವಣನ ಸಮೀಪಕ್ಕೆ ಹೋಗಿ “ ಎಲೈ ಜೀಯ, ರಾಕ್ಷಸೇಶ್ವರನೆ, ಅಶೋಕವನಮಧ್ಯದಲ್ಲಿ ಮಹಾ ಭಯಂಕರವಾದ ಒಂದು ಕಪಿಯು ಸೀತಾದೇವಿಯ ಕೂಡೆ ಬಹಳಹೊತ್ತು ಮಾತಾಡಿಕೊಂಡಿತ್ತು ; ನಾವು ಸೀತಾದೇವಿಯನ್ನು ಕರೆದು ಆ ಕಪಿಯಾರೆಂದು ಎಷ್ಟು ಕೇಳಿದರೂ ಹೇಳದೆ ಹೋದಳು ; ಆ ಕಪಿಯು ದೇವೇಂದ್ರನ ದೂತನೋ—ಕುಬೇರನ ದೂತನೋ—ಅಲ್ಲದಿದ್ದರೆ ಸೀತಾದೇವಿಯನ್ನರಸಿಕೊಂಡು ಬರಹೇಳಿ ಕಳುಹಿಸಲು ಸೀತಾದೇವಿಯ ಸಮೀಪಕ್ಕೆ ಬಂದ ರಾಮದೂತನೊ ತಿಳಿಯಲಿಲ್ಲ ; ಅದ್ಭುತಸ್ವರೂಪವುಳ್ಳ ಆ ಕಪಿಯು ನಾನಾವೃಕ್ಷಗಳಿಂದಲೂ ಲತೆಗಳಿಂದಲೂ ಮೃಗಪಕ್ಷಿಗಳಿಂದಲೂ ಬೆಡಕೊಳಗಳಿಂದಲೂ ಮನೋಹರವಾದ ನಿನ್ನ ಆನಂದಕ್ರೀಡಾಯೋಗ್ಯವಾದ ಅಶೋಕವನವನ್ನು ಮುರಿಯಿತು ; ಆ ವನದೊಳಗಾಗಿ ಮುರಿಯದಿರುವ ಮರವು ಒಂದೂ ಇಲ್ಲ ; ಸೀತಾದೇವಿಯಿರುವ ಶಿಂಶುಪಾವೃಕ್ಷ ಒಂದುಮಾತ್ರ (ಶಿಂಶುಪಾವೃಕ್ಷವೆಂದರೆ ಮುಳ್ಳುಬೂರುಗದಮರ) ಆಕೆಯ ರಕ್ಷಣಾರ್ಥವಾಗಿ ಮುರಿಯದೇ ಉಳಿಸಿತೋ ಎಂಬಂತೆ ಉಳಿದಿದೆ ; ವನವೆಲ್ಲವೂ ಮುರಿದು ಬಯಲಾಗಲು ಒಂದು ಮರವು ಎಷ್ಟೆಂದು ಮುರಿಯದೇ ಉಳಿಸಿತೋ

ಏನೋ ತಿಳಿಯಕೂಡಲಿಲ್ಲ; ಸಮಸ್ತ ವನವನ್ನು ಮುರಿದುಹಾಕಿದ ಕಪಿಗೆ ಆ ಮರವನ್ನು ಮುರಿಯುವದರಲ್ಲಿ ಬಳಲಿಕೆಯೇನು! ಆ ಮರದಡಿಯಲ್ಲಿ ಸೀತಾದೇವಿಯು ಇರುವಳೆ, ಆ ಮರವನ್ನು ಮುರಿದರೆ ಆ ದೇವಿಗೆ ಬಾಧೆಯಾಗುವದೆಂದು ಮುರಿಯದೇ ಉಳಿಸಿತಲ್ಲದೆ ಮತ್ತೊಂದಲ್ಲ; ಮನೋಹರವಾದ ತಳಿರೆಲೆಗಳುಳ್ಳ ಆ ಶಿಂಶುಪಾವೃಕ್ಷದಡಿಯಲ್ಲಿ ಸೀತಾದೇವಿ ಇರುವದರಿಂದ ಅವಳ ರಕ್ಷಣಾರ್ಥವಾಗಿ ಆ ಮರವನ್ನು ಉಳಿಸಿತು, ಮಿಕ್ಕ ವನವನ್ನು ನಿರ್ನಾಮವಾಗಿ ಮಾಡಿತು; ಅಂಥಾ ಉಗ್ರಸ್ವರೂಪವುಳ್ಳ ಕಪಿಗೆ ಅತ್ಯಂತ ಉಗ್ರವಾದ ದಂಡನೆಯನ್ನು ನೀನೇ ಮಾಡಬೇಕಲ್ಲದೆ ನಮ್ಮ ಕೈಯಲ್ಲಾಗುವದಿಲ್ಲ; ಆ ಕಪಿಯು ಎರಡು ಅಪರಾಧವನ್ನು ಮಾಡಿತು, ಅಶೋಕವನವನ್ನು ಮುರಿದದ್ದೊಂದು—ಸೀತಾದೇವಿಯಕೂಡೆ ಸಂಭಾಷಣೆಮಾಡಿದ್ದೊಂದು; ವನವನ್ನು ಮುರಿದದ್ದಕ್ಕಾದರೂ ಪರಿಹರಿಸಬಹುದು, ನೀನು ಮನಸ್ಸಿನಲ್ಲಿ ಸ್ತ್ರೀಯಾಗಿ ಪರಿಗ್ರಹಿಸಿದ ಸ್ತ್ರೀಯಕೂಡೆ ಸಂಭಾಷಣೆ ಮಾಡಿದ್ದು ಅಂತಃಪುರದ್ರೋಹವೆನ್ನಿಸಿಕೊಳ್ಳುವುದು, ತನ್ನ ಜೀವವನ್ನೀಗಿಸಿಕೊಳ್ಳುವವನು ಸೀತಾದೇವಿಯ ಕೂಡೆ ಸಂಭಾಷಣೆ ಮಾಡುವನಲ್ಲದೆ ಬದುಕಬೇಕೆಂಬುವನು ಸಂಭಾಷಣೆ ಮಾಡನು" ಎಂದು ನುಡಿದರು.

ಆ ಮಾತನ್ನು ಕೇಳಿ ರಾವಣನು ಪ್ರಳಯಕಾಲಾಗ್ನಿಯಂತೆ ಕೋಪಾತಿಶಯದಿಂದ ಕಣ್ಣುಗಳನ್ನು ತಿರುಗಿಸುತ ದೀಪದಿಂದುರಿದು ಬೀಳುವ ಎಣ್ಣೆಯ ಬಿಂದುಗಳಂತೆ ಕಣ್ಣುಗಳಿಂದ ಕಿಡಿಗಳುದುರುತಿರಲು ಮಹಾಪಟುಭಟರಾಗಿ ತನಿಗೆ ಸರಿಬಲಸ್ಥರಾದ ಎಂಭತ್ತುಸಾವಿರ ರಾಕ್ಷಸರನ್ನು ಹನುಮಂತನನ್ನು ನಿಗ್ರಹಿಸಹೇಳಿ ಕಳುಹಿಸಿದನು; ಆ ರಾಕ್ಷಸರು ಆತನನ್ನು ಹಿಡಿತರಬೇಕೆಂದು ನಾನಾಪ್ರಕಾರವಾದ ಆಯುಧಗಳನ್ನು ಧರಿಸಿಕೊಂಡು ಅಶೋಕವನದ ಬಾಗಿಲಲ್ಲಿದ್ದ ಹನುಮಂತನ ಸಮೀಪಕ್ಕೆ ಪತಂಗದ ಹುಳುಗಳು ಯಜ್ಞಪುರುಷನ ಸಮೀಪಕ್ಕೆ ಬರುವಂತೆ ಬರುತಿದ್ದರು! ಮಹತ್ತಾದ ಗದೆಗಳನ್ನೂ ಚಿನ್ನದ ಕಟ್ಟುಗಳೂ ಲಾಳವಂಡಿಗೆಗಳೂ ಉಳ್ಳ ಈಟಿಗಳನ್ನೂ ದೊಣ್ಣೆಗಳನ್ನೂ ಪಟ್ಟಿಸ ತ್ರಿಶೂಲ ತೋಮರ ಮೊದಲಾದ ಆಯುಧಗಳನ್ನೂ ಧರಿಸಿಕೊಂಡು ಆ ರಾಕ್ಷಸರು ಹನುಮಂತನನ್ನು ಸುತ್ತಿಕೊಂಡರು, ಆಗ ಅತಿತೇಜಸ್ವಿಯಾಗಿ ಪರ್ವತಾಕಾರನಾದ ಹನುಮಂತನು ತನ್ನ ಬಾಲದಿಂದ ನೆಲವನ್ನಪ್ಪಳಿಸಿ ಹೊಡಿದು ಬೊಬ್ಬಿಟ್ಟು ಕೂಗುತ ತನ್ನ ಗರ್ಜನೆಯ ಧ್ವನಿಯಿಂದಲೂ ಬಾಲವನ್ನೆಲಕ್ಕಪ್ಪಳಿಸುವ ಧ್ವನಿಯಿಂದಲೂ ಲಂಕಾಪಟ್ಟಣವನ್ನು ಕಂಗೆಡಿಸುತ ಅಂತರಿಕ್ಷಮಾರ್ಗದಲ್ಲಿ ಹಾರುತಿದ್ದ ಪಕ್ಷಿಗಳನ್ನು ನೆಲಕ್ಕೆ ಕೆಡಹುತ ಕಿಲಕಿಲಾರವಧ್ವನಿಯಿಂದ ಬೊಬ್ಬಿಟ್ಟು ಕೂಗುತ "ಲಕ್ಷ್ಮಣಸಮೇತನಾದ ರಘುನಾಥನು ಜಯಶೀಲನಾಗಲೀ! ರಘುನಾಥನಿಂದ ಪರಿಪಾಲಿಸಲ್ಪಟ್ಟ ಸುಗ್ರೀವನು ಜಯಶೀಲನಾಗಲೀ! ನಾನು ಕೋಸಲದೇಶದ ರಾಯನಾಗಿ ಪುಣ್ಯಪುರುಷನಾದ ಶ್ರೀರಾಮನ ದೂತನು; ಸಮಸ್ತ ಶತ್ರುಗಳನ್ನೂ ಸಂಹರಿಸುವ ಹನುಮಂತನು ನಾನು! ರಾವಣನಂಥಾವರು ಸಾವಿರಮಂದಿಯಾದರು ರಣರಂಗದಲ್ಲಿ ನನಿಗಿದಿರಾಗಿ ನಿಲ್ಲಲಾರರು! ನಾನು ಕಲ್ಲರೆಗಳಿಂದಲೂ ಬೇರುಸಹಿತವಾದ ಮರಗಳಿಂದಲೂ ಲಂಕಾಪಟ್ಟಣವನ್ನು ನಿರ್ನಾಮವಾಗಿ ಮಾಡಿ ಕೃತಾರ್ಥನಾಗಿ ಸೀತಾದೇವಿಗೆ ನಮಸ್ಕರಿಸಿ ಸಮಸ್ತ ರಾಕ್ಷಸರೂ ನೋಡುತ್ತಿರಲು ಸಮುದ್ರವನ್ನು ದಾಟಿಹೋಗುವೆನು!" ಎಂದು ಹುಯಿಲಿಟ್ಟು ಕೂಗುತಿದ್ದನು.

ಆ ಹುಯಿಲಧ್ವನಿಯಿಂದ ಸಮಸ್ತ ರಾಕ್ಷಸರೂ ಕಂಗೆಟ್ಟು ಮಹಾ ಅದ್ಭುತವೆಂದು ಸಂಶಯಪಟ್ಟು ಸಂಧ್ಯಾಕಾಲದ ಮೇಘದೋಪಾದಿಯಲ್ಲಿದ್ದ ಹನುಮಂತನನ್ನು ಕಂಡು "ನಮ್ಮ ಒಡೆಯನಾದ ರಾವಣನು ಕಳುಹಿಸಿದ್ದರಿಂದ ನಾವು ಶಂಕೆಯಿಲ್ಲದೆ ಯುದ್ಧವನ್ನು ಮಾಡಬೇಕು" ಎಂದು ನಿಶ್ಚಯಿಸಿ ಮಹಾವಿಚಿತ್ರವಾದ ಹುಯಿಲುಗಳಿಂದ ಹನುಮಂತನ ಗುರುತನ್ನು ತಿಳಿದು ಬಂದರು; ಆಗ ಮಹಾಬಲವಂತನಾದ ಹನುಮಂತನು ಅಶೋಕವನದ ಬಾಗಿಲ ಕದಕ್ಕೆ ಹಾಕಿದ್ದ ಕಬ್ಬಿಣದ ಲಾಳವಂಡಿಗೆಯನ್ನು ತೆಗೆದುಕೊಂಡು ಮಹತ್ತಾದ ಕೃಷ್ಣಸರ್ಪವನ್ನು ನೋಡಿ ಗರುಡನು ಹೊರಡುವಂತೆ ಅಂತರಿಕ್ಷಮಾರ್ಗಕ್ಕೆ ನೆಗದುಹೋಗಿ ದೇವೇಂದ್ರನು ವಜ್ರಾಯುಧವನ್ನು ತೆಗೆದುಕೊಂಡು ದೈತ್ಯರನ್ನು ಸಂಹರಿಸುವಂತೆ ಆ ರಾಕ್ಷಸರನ್ನು ಸಂಹರಿಸಿದನು; ಹಾಗೆ ಹನುಮಂತನು ರಾವಣನು ಕಳುಹಿಸಿದ ರಾಕ್ಷಸರನ್ನು ಸಂಹರಿಸಿ ಮತ್ತೂ ಬರುವ ರಾಕ್ಷಸರಕೂಡೆ ಯುದ್ಧವನ್ನು ಬಯಸಿ ಅಶೋಕವನದ ಬಾಗಿಲಲ್ಲೇ

ನಿಂತಿದ್ದನು ಆತನಿಂದ ತಪ್ಪಿಸಿಕೊಂಡು ಹೋದ ರಾಕ್ಷಸರು ರಾವಣನ ಸಂಗಡ ಸಮಸ್ತ ರಾಕ್ಷಸರೂ ಒಂದು ಕಪಿಯಿಂದ ಮಡಿದರೆಂದು ಹೇಳಲು ಆತನು ಮೊದಲು ಕಳುಹಿಸಿದ ರಾಕ್ಷಸಬಲವು ಮಡಿದ ವೃತ್ತಾಂತವನ್ನು ಕೇಳಿ ಅತ್ಯಂತ ಕೋಪಯುಕ್ತನಾಗಿ ಸಮರದಲ್ಲಿ ಹಿಮ್ಮೆಟ್ಟದವನಾಗಿ ಅತಿಪರಾಕ್ರಮಶಾಲಿಯಾದ ಪ್ರಹಸ್ತನ ಮಗನನ್ನೂ ಮತ್ತು ಅನೇಕ ಬಲವನ್ನೂ ಕೂಡಿಸಿ ಕಳುಹಿಸಿದನು.

## ೪೩ನೇ ಅಧ್ಯಾಯ.

## ವನಕಿಂಕರರ ವಧೆಯು.

ಆ ಬಳಿಕ ಹನುಮಂತನು ಅನೇಕ ರಾಕ್ಷಸಬಲವನ್ನು ಸಂಹರಿಸಿ ಅಶೋಕವನದ ಬಾಗಿಲಲ್ಲಿ ನಿಂತುಕೊಂಡು ತಾನು ಮುರಿದ ವನವನ್ನು ನೋಡಿ ವನವೆಲ್ಲವನ್ನೂ ಮುರಿದದ್ದರಿಂದ ಅದರ ಮಧ್ಯದಲ್ಲಿದ್ದ ಉಪ್ಪರಿಗೆಯನ್ನು ಮುರಿದುಹಾಕಬೇಕೆಂದು ಯೋಚನೆಮಾಡಿ ಆ ವನಮಧ್ಯದಲ್ಲಿ ಮಹಾಮೇರುಪರ್ವತದ ಕೋಡುಗಲ್ಲಂತೆ ಅತ್ಯಂತ ಉನ್ನತವಾಗಿದ್ದ ಉಪ್ಪರಿಗೆಯನ್ನೇರಿಕೊಂಡು ಉದಯಾಚಲವನ್ನೇರಿದ ಎರಡನೇ ಸೂರ್ಯನಂತೆ ಒಪ್ಪುತ್ತಿರಲು ಆ ಉಪ್ಪರಿಗೆಯು ಸೂರ್ಯಪ್ರಭೆಯಿಂದ ಒಪ್ಪುತಿದ್ದ ಪಾರಿಯಾತ್ರಪರ್ವತವೋ ಎಂಬಂತೆ ರಮಣೀಯವಾಗಿ ತೋರುತಿತ್ತು! ಹನುಮಂತನು ಮಹಾಮಹಿಮೆಯುಳ್ಳದ್ದಾಗಿ ದೊಡ್ಡದಾದ ತನ್ನ ಶರೀರವನ್ನು ಬೆಳೆಸಿ ಭುಜಬಲಪರಾಕ್ರಮವನ್ನು ತೋರಿಸುತ ಬಾಲದಿಂದ ಆ ಉಪ್ಪರಿಗೆಯನ್ನು ಹೊಡೆಯಲು ಆ ಧ್ವನಿಯಿಂದ ಲಂಕಾಪಟ್ಟಣದಲ್ಲಿದ್ದ ರಾಕ್ಷಸರೆಲ್ಲರು ಭಯಪಡುತಿದ್ದರು! ಅಂತರಿಕ್ಷಮಾರ್ಗದಲ್ಲಿ ಸಂಚರಿಸುತಿದ್ದ ಪಕ್ಷಿಗಳು ಕಂಗೆಟ್ಟು ನೆಲಕ್ಕೆ ಬೀಳುತಿದ್ದವು; ಮತ್ತೂ ಹನುಮಂತನು ಲಂಕಾಪಟ್ಟಣವನ್ನು ನೋಡುತ "ಲಕ್ಷ್ಮಣಸಮೇತನಾದ ಶ್ರೀರಾಮನು ಜಯಶೀಲನಾಗಲೀ! ರಘುನಾಥನಿಂದ ಪರಿಪಾಲಿಸಲ್ಪಟ್ಟ ಸುಗ್ರೀವನು ಜಯಶೀಲನಾಗಲೀ! ನಾನು ಸಮಸ್ತ ಶತ್ರುಸೇನೆಗಳಿಗೂ ಪ್ರಳಯಕಾಲಾಗ್ನಿಸ್ವರೂಪನಾದವನು! ಪರಮಪುರುಷಾವತಾರನಾದ ರಘುನಾಥನ ಭಟನು; ಇಂಥಾ ರಾವಣನಂತೆ ಸಾವಿರಮಂದಿಗಳು ಕೂಡಿಕೊಂಡಾದರೂ ರಣರಂಗದಲ್ಲಿ ನನಿಗಿದಿರಾಗಿ ಪ್ರತಿಭಟಿಸಿ ನಿಲ್ಲಲಾರರು; ನಾನು ಗುಂಡುಕಲ್ಲುಗಳಿಂದಲೂ ಬೇರುಸಹಿತವಾದ ಮರಗಳಿಂದಲೂ ಲಂಕಾಪಟ್ಟಣವನ್ನು ನಿರ್ಮೂಲಮಾಡಿ ಆಮೇಲೆ ಸೀತಾದೇವಿಯನ್ನು ಕಂಡು ಅಭಿವಂದಿಸಿ ಕೃತಾರ್ಥನಾಗಿ ಸಮಸ್ತ ರಾಕ್ಷಸರೂ ನೋಡುತ್ತಿರಲು ಸಮುದ್ರವನ್ನು ದಾಟಿಹೋಗುವೆನು" ಎಂದು ನುಡಿದು ಸಿಂಹನಾದವನ್ನು ಮಾಡಿ ಕೂಗಿದನು; ಆಗಲಾ ಉಪ್ಪರಿಗೆಯನ್ನು ಕಾದಿದ್ದ ಅನೇಕಮಂದಿ ರಾಕ್ಷಸರು ತಮ್ಮ ತಮ್ಮ ಆಯುಧಗಳನ್ನು ತೆಗದುಕೊಂಡು ಹನುಮಂತನನ್ನು ಸುತ್ತಿಕೊಂಡು ತಮ್ಮ ಆಯುಧಗಳಿಂದ ಯುದ್ಧವನ್ನು ಮಾಡುತಿದ್ದರು; ಹಾಗೆ ಸುತ್ತಿಕೊಂಡಿದ್ದ ಭಯಂಕರವಾದ ರಾಕ್ಷಸರನ್ನು ಕಂಡು ಹನುಮಂತನು ಅತ್ಯಂತ ಭಯಂಕರವಾದ ರೂಪವನ್ನು ತಾಳಿ ಅತ್ಯಂತ ಕೋಪಾಟೋಪದಿಂದ ಆ ಉಪ್ಪರಿಗೆಯ ಕಂಭವನ್ನು ಕಿತ್ತು ನೂರುಸಾರಿ ತಿರುಗಿಸಲು ಆ ಕಂಭದಲ್ಲಿ ಅಗ್ನಿಯು ಹುಟ್ಟಿ ಉಪ್ಪರಿಗೆಯನ್ನು ದಹಿಸಿತು, ಆ ಉಪ್ಪರಿಗೆಯನ್ನು ಕಾದುಕೊಂಡಿದ್ದ ನೂರುಮಂದಿ ರಾಕ್ಷಸರನ್ನು ಆ ಉರಿಯುವ ಕಂಭದಿಂದ ಸಂಹರಿಸಿ ಅಂತರಿಕ್ಷಮಾರ್ಗಕ್ಕೆ ನೆಗೆದು ರಾಕ್ಷಸರೆಲ್ಲರು ಕೇಳುವಹಾಗೆ "ಸುಗ್ರೀವನ ಬಲದಲ್ಲಿ ನನ್ನಂಥಾವರು ಅನೇಕಸಾವಿರಮಂದಿ ಮಹಾ ಬಲವಂತರು ಸಮಸ್ತ ಭೂಮಂಡಲವನ್ನೂ ಸಂಚರಿಸುತಿಧಾರೆ; ನಮ್ಮಲ್ಲಿ ಕೆಲವರು ಹತ್ತಾನೆಗಳ ಸತ್ವವುಳ್ಳವರೂ ಕೆಲವರು ನೂರಾನೆಗಳ ಸತ್ವಾವುಂಟಾದವರೂ ಕೆಲವರು ಅಪರಿಮಿತವಾದ ಬಲವಿಕ್ರಮವುಳ್ಳವರೂ ಕೆಲವರು ಪ್ರಳಯಕಾಲಾಗ್ನಿಗೆ ಸಮಾನವಾದ ಸತ್ವವುಳ್ಳವರೂ ಕೆಲವರು ವಾಯುದೇವನಿಗೆ ಸಮಾನವಾದ ಬಲವುಳ್ಳವರೂ ಕೆಲವರು ಇಷ್ಟುಅಷ್ಟೆಂದು ಮಿತಿಹೇಳಶಕ್ಯವಲ್ಲದ ಬಲವುಳ್ಳವರೂ ಇಧಾರೆ; ಇವರೆಲ್ಲರೂ ಉಗುರು ಕೋರೆದಾಡೆ

ಗಳೇ ಆಯುಧಗಳಾಗುಳ್ಳವರು ; ಇಂಥಾವರು ನೂರುಸಾವಿರದ ನೂರುಕೋಟಿಯಾಗಿಧಾರೆ ; ಇಷ್ಟು ಕಪಿಸೇನೆಯೊಡನೆ ಕೂಡಿ ಕಪಿನಾಯಕನಾದ ಸುಗ್ರೀವನು ರಾವಣನನ್ನು ಸಂಹರಿಸುವದಕ್ಕೆ ಬರುತ್ತಿಧಾನೆ, ಸುಗ್ರೀವನೊಡನೆ ಕೂಡಿ ಶ್ರೀರಾಮನು ವೈರದಿಂದ ಬರುವದರಿಂದ ಈ ಪಟ್ಟಣವು ನಿಲ್ಲಲಾರದು ; ನೀವೂ ನಿಲ್ಲಲಾರಿರಿ" ಎಂದು ನುಡಿದನು.

## ೪೪ನೇ ಅಧ್ಯಾಯ.

### ಜಂಬುಮಾಲಿಯ ವಧೆಯು.

ಆಗ ಹನುಮಂತನ ಸಂಗಡ ಯುದ್ಧಮಾಡುವದಕ್ಕೆ ರಾವಣನು ಕಳುಹಿಸಿದ ಪ್ರಹಸ್ತನ ಮಗನಾಗಿ ಮಹಾ ಭಯಂಕರವಾದ ಕೋರೆದಾಡೆಗಳುಳ್ಳವನಾಗಿ ಮಹಾ ಮನೋಹರವಾದ ಕುಂಡಲಗಳನ್ನು ಧರಿಸಿ ಕೆಂಪುಗಂಧಾನುಲೇಪನವುಳ್ಳವನಾಗಿ ಕೆಂಪುಹುವ್ವಿನ ಸರಗಳನ್ನೂ ಬಿಲ್ಲುಬಾಣಗಳನ್ನೂ ಧರಿಸಿದವನಾಗಿ ವಟುವಾದ ಕಣ್ಣುಗಳುಳ್ಳವನಾಗಿ ಸಮರದಲ್ಲಿ ಯಾರಿಗೂ ಹಿಮ್ಮೆಟ್ಟದ ಚಂಡವಿಕ್ರಮನಾದ ಜಂಬುಮಾಲಿಯು ಬಿಲ್ಲನ್ನು ತಿರುಗಿಸುತ ಅದರ ಧ್ವನಿಯಿಂದ ದಶದಿಕ್ಕುಗಳೂ ಕಂಗೆಡುತ್ತಿರಲು ಹೇಸರಕತ್ತೆಗಳಿಂದ ಸಜ್ಜುಮಾಡಿದ ರಥವನ್ನೇರಿಕೊಂಡು ಬರುತ್ತಿದ್ದನು ; ಅದನ್ನು ಕಂಡು ಹನುಮಂತನು ಅತಿಹರ್ಷದಿಂದ ಗರ್ಜಿಸುತ್ತಿರಲು ಜಂಬುಮಾಲಿಯು ಅಶೋಕವನದ ಬಾಗಿಲ ಹೊರಲೋವೆಯ ಚಾವಡಿಯಲ್ಲಿ ಕುಳಿತಿದ್ದ ಹನುಮಂತನನ್ನು ಕಂಡು ಅನೇಕವಾದ ಕ್ರೂರ ಅಂಬುಗಳನ್ನು ತನ್ನ ಬಿಲ್ಲಿಗೆ ಹೂಡಿ ಆತನ ಮುಖಕ್ಕೆ ಒಂದನ್ನೂ ಶಿರಸ್ಸಿಗೆ ಒಂದು ಚಿಲುಕಂಬನ್ನೂ ಆತನ ಭುಜಗಳಿಗೆ ಹತ್ತನ್ನೂ ಎಸೆಯಲು ಆ ಅಂಬುಗಳು ತತ್ತಸ್ಥಾನಗಳಲ್ಲಿ ತಾಕಿದವು; ಹಾಗೆ ತಾಕಿದ ಬಾಣದಿಂದ ಘಾಯಪಡೆದ ಹನುಮಂತನ ಮುಖವು ಶರತ್ಕಾಲದ ಸೂರ್ಯಪ್ರಭೆಯಂತೆಯೂ ಪ್ರಾತಃಕಾಲದಲ್ಲಿ ಕೆಂಪಿನ ಚಂದನಬಿಂದುಗಳಿಂದ ಅಂಕಿತವಾದಹಾಗಿರುವ ಕೆಂದಾವರೇ ಕಮಲದಂತೆಯೂ ರಮಣೀಯವಾಗಿ ಒಪ್ಪುತಿತ್ತು ! ಆ ಬಳಿಕ ಹನುಮಂತನು ಅತ್ಯಂತ ಕೋಪಯುಕ್ತನಾಗಿ ಒಂದು ದೊಡ್ಡ ಕಲ್ಲರೆಯನ್ನು ತೆಗೆದುಕೊಂಡು ಜಂಬುಮಾಲಿಯಮೇಲೆ ಹಾಕಲು ಆ ರಾಕ್ಷಸನು ಹತ್ತು ಅಂಬುಗಳನ್ನು ಪ್ರಯೋಗಿಸಲು ಆ ಕಲ್ಲರೆಯು ಮಧ್ಯಮಾರ್ಗದಲ್ಲಿ ಒಡೆದು ಕೆಳಗೆ ಬಿತ್ತು ; ಆ ಕಲ್ಲರೆಯು ವ್ಯರ್ಥವಾದದ್ದನ್ನು ಕಂಡು ಹನುಮಂತನು ಸಮೀಪದಲ್ಲಿದ್ದ ಒಂದು ದೊಡ್ಡ ಮರವನ್ನು ಕಿತ್ತು ತಿರುಗಿಸಿ ಎಸೆಯಲು ಜಂಬುಮಾಲಿಯು ತನ್ನ ಬಿಲ್ಲಿನಲ್ಲಿ ಒಂದೇಸಾರಿ ಅನೇಕ ಬಾಣಗಳನ್ನು ತೊಟ್ಟು ನಾಲ್ಕುಬಾಣಗಳಿಂದ ಆ ಮರವನ್ನು ಕತ್ತರಿಸಿ ಐದು ಅಂಬುಗಳಿಂದ ಹನುಮಂತನ ಭುಜಗಳನ್ನು ನೋಯಿಸಿ ಒಂದು ಬಾಣದಿಂದ ಆತನ ಎದೆಯಲ್ಲಿ ಪೆಟ್ಟಿಕ್ಕಿ ಹತ್ತು ಬಾಣಗಳನ್ನು ಆತನ ಸ್ತನಮಧ್ಯದಲ್ಲಿ ನೆಟ್ಟಿದನು; ಆ ಬಾಣಗಳಿಂದ ನೆಡಲ್ಪಟ್ಟ ಶರೀರವುಳ್ಳ ಹನುಮಂತನು ಅತ್ಯಂತ ಕೋಪಯುಕ್ತನಾಗಿ ಮೊದಲು ಧರಿಸಿದ್ದ ಲಾಳಮಂಡಿಗೆಯನ್ನೆತ್ತಿಕೊಂಡು ಅತಿವೇಗದಿಂದ ತಿರುಗಿಸಿ ಜಂಬುಮಾಲಿಯ ಎದೆಯನ್ನು ಹೊಡೆಯಲು ಆತನು ತನ್ನ ಶಿರಸ್ಸೂ ತೋಳುಗಳೂ ಕಾಲುಗಳೂ ಬಿಲ್ಲೂ ರಥವೂ ಸಾರಧಿಯೂ ರಥಕ್ಕೆ ಕಟ್ಟಿದ ಕತ್ತೆಗಳೂ ಬಾಣಗಳೂ ಸರ್ವಾಂಗಗಳೂ ಚೂರ್ಣವಾಗಿ ಯಮಲೋಕವನ್ನೈದಿದನು !

## ೪೫ನೇ ಅಧ್ಯಾಯ.

### ಸಪ್ತ ಸೇನಾಪತಿಗಳ ವಧೆಯು.

ಜಂಬುಮಾಲಿಯು ಹನುಮಂತನಿಂದ ಯಮಲೋಕವನ್ನೈದಿದ ಬಳಿಕ ರಾವಣನ ಅಪ್ಪಣೆಯಿಂದ ಮಹಾಬಲವಂತರಾಗಿ ಪ್ರಧಾನರ ಮಕ್ಕಳಾದ ಏಳುಮಂದಿಯು ಹನುಮಂತನ ಸಂಗಡ ಯುದ್ಧಕ್ಕೆ ಸನ್ನದ್ಧರಾಗಿ ಬಂದರು ; ಅವರು ತೇಜಸ್ಸಿನಲ್ಲಿ ಸೂರ್ಯನಿಗೆ ಸಮಾನವಾದವರು ; ಬಿಲ್ಲುಗಾರರಾದವರು ; ಮಹಾಬಲವಂತರಾದವರು; ಅತ್ಯಂ

ತ ಸತ್ವಸಾಹಸವುಳ್ಳ ರಾಕ್ಷಸಸೇನೆಯೊಡನೆ ಕೂಡಿದಂಥಾವರು, ಅತ್ಯಂತ ಶಸ್ತ್ರಾಸ್ತ್ರ ವಿದ್ಯಾವಿಶಾರದರು, ಅಂಥಾ ರಾಕ್ಷಸಸೇನಾನಾಯಕರು ಒಬ್ಬೊಬ್ಬರೇ ಹನುಮಂತನನ್ನು ಜಯಿಸುವರೆಂದು ಅನ್ಯೋನ್ಯವು ನುಡಿಯುತ ಸುವರ್ಣಮಯವಾದ ಗವಾಕ್ಷಗಳಿಂದಲೂ ಧ್ವಜಗಳಿಂದಲೂ ಪತಾಕೆಗಳಿಂದಲೂ ಅಲಂಕರಿಸಲ್ಪಟ್ಟ ಕುದುರೆಗಳಿಂದಲೂ ಸಜ್ಜುಮಾಡಲ್ಪಟ್ಟ ಮೇಘದ ಗುಡುಗಿನಂತೆ ಧ್ವನಿಮಾಡುತಿದ್ದ ರಥಗಳನ್ನೇರಿಕೊಂಡು ಚಿನ್ನದ ಮುಲಾಮುಮಾಡಿದ ಬಿಲ್ಲುಗಳನ್ನು ತಿರುಗಿಸುತ ಮಿಂಚಿನೊಡನೆ ಕೂಡಿದ ಮೇಘಗಳಂತೆ ರಮಣೀಯವಾದ ತನುಕಾಂತಿ ಯುಳ್ಳವರಾಗಿ ಅನರ್ಘ್ಯವಾದ ಆಭರಣಗಳನ್ನು ತೊಟ್ಟುಕೊಂಡು ಅಶೋಕವನದ ಬಾಗಿಲಲ್ಲಿದ್ದ ಹನುಮಂತನ ಸಂಗಡ ಯುದ್ಧಕ್ಕೆ ಬಂದರು; ಅವರ ತಾಯಿತಂದೆಗಳೂ ಬಂಧುಗಳೂ ಮೊದಲು ಹನುಮಂತನ ಯುದ್ಧದಲ್ಲಿ ಕೆಟ್ಟು ಮುರಿದೋಡಿದ ರಾಕ್ಷಸರ ವೃತ್ತಾಂತವನ್ನು ಕೇಳಿ ಕೈಗಳನ್ನು ಮುರಿದುಕೊಂಡು ಕಂಗೆಡುತಿದ್ದರು. ಇತ್ತಲಾ ಯುದ್ಧಕ್ಕೆ ಬಂದ ರಾಕ್ಷಸರು ವರ್ಷಾ ಕಾಲದ ಮೇಘವಂತೆ ಶರವರ್ಷಗಳನ್ನು ಕರೆಯುತ್ತಿರಲು ಹನುಮಂತನು ವೇಗದಿಂದ ಅಂತರಿಕ್ಷಮಾರ್ಗದಲ್ಲಿ ವಾಯುವಿನಂತೆ ಸಂಚರಿಸುತ ಅವರು ಪ್ರಯೋಗಿಸಿದ ಬಾಣಗಳನ್ನು ತನ್ನ ಕೈಗಳಿಂದ ತೊಲಗಿಸುತ ಆ ಸೇನೆಗಳನ್ನು ಬೆದರಿಸಿ ಚದರಿಸಿ ಅಂಗೈಪೆಟ್ಟುಗಳಿಂದ ಕೆಲವರನ್ನೂ ಪಾದಘಾತಗಳಿಂದ ಕೆಲವರನ್ನೂ ಮುಷ್ಟಿಘಾತಗಳಿಂದ ಕೆಲವರನ್ನೂ ಉಗುರುಗಳಿಂದ ಶೀಳಿ ಕೆಲವರನ್ನೂ ಎದೆಯಿಂದ ನೂಕಿ ಕೆಲವರನ್ನೂ ತೊಡೆಗಳಿಂದ ಒತ್ತಿ ಕೆಲವರನ್ನೂ ಸಂಹರಿಸಿದನು, ಆತನ ಗರ್ಜನೆಯ ಧ್ವನಿಗೆ ಬೆದರಿ ಕಂಗೆಟ್ಟು ಅನೇಕರು ಬಿದ್ದರು; ಹೀಗೆ ಅನೇಕ ರಾಕ್ಷಸರು ಬೀಳಲು ಉಳಿದ ರಾಕ್ಷಸರು ಕಂಗೆಟ್ಟು ನಾನಾದಿಕ್ಕಿಗೆ ಹುಯ್ಲಿಟ್ಟು ಕೂಗಿಕೊಂಡು ಓಡುತಿದ್ದರು; ರಥ ಕುದುರೆಗಳು ಘಾಯಪಡೆದು ಬಿದ್ದವು, ಆತನ ಮುಷ್ಟಿಘಾತದಿಂದ ಮುರಿದ ರಥ ಛತ್ರ ಧ್ವಜ ಪತಾಕೆಗಳಿಂದ ರಣಭೂಮಿಯು ಪರಿಪೂರ್ಣವಾಗಿತ್ತು! ರಕ್ತಪ್ರವಾಹಗಳು ನದಿಗಳಂತೆ ಹರಿಯುತ್ತಿರಲು ಲಂಕಾಪಟ್ಟಣವು ಅತಿ ಭಯಂಕರವಾಗಿ ತೋರುತಿತ್ತು! ಮಹಾ ಬಲವಂತನಾದ ಹನುಮಂತನು ರಾವಣನ ಪ್ರಧಾನರ ಮಕ್ಕಳನ್ನೂ ಅನೇಕಮಂದಿ ರಾಕ್ಷಸಸೇನೆಯನ್ನೂ ಸಂಹರಿಸಿ ಮುಂದೆ ಬರುವ ರಾಕ್ಷಸರಸಂಗಡ ಯುದ್ಧಮಾಡಬೇಕೆಂದು ಅಶೋಕವನದ ಬಾಗಿಲಮುಂದೆಶೆಯಲ್ಲಿದ್ದನು.

---

## ೪೬ ನೇ ಅಧ್ಯಾಯ

## ಪಂಚಸೇನಾಪತಿಗಳ ವಧೆಯು.

ಈಪ್ರಕಾರದಲ್ಲಿ ಹನುಮಂತನು ತನ್ನ ಮಂತ್ರಿಗಳ ಮಕ್ಕಳನ್ನೂ ಅನೇಕ ಸೇನೆಗಳನ್ನೂ ಸಂಹರಿಸಿದ ವೃತ್ತಾಂತವನ್ನು ಕೇಳಿ ರಾವಣನು ಅತ್ಯಂತ ಚಿಂತಾಕ್ರಾಂತನಾಗಿ ವಿರೂಪಾಕ್ಷನು ಯೂಪಾಕ್ಷನು ದುರ್ಧರ್ಷನು ಪ್ರಘಸನು ಭಾಸಕರ್ಣನು ಎಂಬ ಐದುಮಂದಿ ಸೇನಾನಾಯಕರನ್ನು ಕರೆದು "ಎಲೈ ಸೇನಾನಾಯಕರಿರಾ, ನೀವೆಲ್ಲರು ಮಹಾ ಬಲವಂತರು; ಯುದ್ಧರಂಗದಲ್ಲಿ ಹನುಮಂತನನ್ನು ಹಿಡಿತರುವದಕ್ಕೆ ಸಮರ್ಥರು, ನೀವು ಚತುರಂಗ ಬಲಗಳನ್ನು ಕೂಡಿಕೊಂಡು ಅತ್ಯಂತ ಜಾಗ್ರತೆಯಾಗಿ ಬಹುಪ್ರಯತ್ನಗಳಿಂದ ದೇಶಕಾಲಗಳನ್ನರಿತು ಯುದ್ಧಮಾಡಿ ಹನುಮಂತನಿಗೆ ತಕ್ಕ ನಿಗ್ರಹವನ್ನು ಮಾಡಿ; ಆತನ ಯುದ್ಧಚಾತುರ್ಯವನ್ನು ನೋಡಿದರೆ ಆತನು ಕಪಿಯಲ್ಲ, ನೋಡಿದರೆ ಮಹಾ ಬಲಪರಾಕ್ರಮವುಳ್ಳವನಾಗಿ ಅತ್ಯದ್ಭುತವಾದ ದಿವ್ಯವಿಗ್ರಹವಾಗಿ ಕಾಣುತ್ತಾನೆ; ಯಕ್ಷ ಗಂಧರ್ವ ಕಿನ್ನರ ಕಿಂಪುರುಷ ನಾಗ ಸುರ ಋಷಿಗಳು ಕೂಡಿ ತಪಸ್ಸನ್ನು ಮಾಡಿ ತಮ್ಮ ತಪೋಬಲದಿಂದ ನಮ್ಮನ್ನು ನಿಗ್ರಹಿಸುವದಕ್ಕೋಸ್ಕರ ಈ ದಿವ್ಯವಿಗ್ರಹವನ್ನು ಧರಿಸಿರುವಹಾಗಿದೆ; ಈ ಅರ್ಥದಲ್ಲಿ ಸಂದೇಹವಿಲ್ಲ; ಆದಕಾರಣ ಕಪಿಯೆಂದು ಉದಾಶೀನ ಮಾಡಬೇಡಿ; ಸರ್ವಪ್ರಯತ್ನಗಳಿಂದಲೂ ಹಿಡಿತನ್ನಿ; ನಾನು ಅನೇಕವಾದ ಪರಾಕ್ರಮವುಳ್ಳ ಕಪಿನಾಯಕರನ್ನು ಕಂಡಿರುವೆನು; ವಾಲಿ ಸುಗ್ರೀವ ಜಾಂಬವರಿಗೂ ಅವರ ಸೇನಾಪತಿಯಾದ ನೀಲನಿಗೂ ಇಂಥಾ ಬಲವೂ ಇಂಥಾ ಉತ್ಸಾಹವೂ ಇಂಥಾ ಬುದ್ಧಿಯೂ ರೂಪವೂ ಯುದ್ಧಚಾತುರ್ಯಾದಿ ಗುಣಗಳೂ ಇಲ್ಲ, ಇಂಥಾ

ಅದ್ಭುತವಾದ ಸತ್ವಬಲಗಳನ್ನೆಲ್ಲಿಯೂ ಕಾಣಲಿಲ್ಲ, ನೀವು ಬಹುಯತ್ನದಿಂದ ಈತನನ್ನು ನಿಗ್ರಹಮಾಡಬೇಕಲ್ಲದೆ ಅಲ್ಪಯತ್ನದಿಂದ ಸಾಧ್ಯವಾಗುವದಿಲ್ಲ, ದೇವೇಂದ್ರನಸಮೇತವಾಗಿ ಸಮಸ್ತದೇವಾಸುರ ಮಾನವರು ಸ್ವರ್ಗಮರ್ತ್ಯಪಾತಾಳಗಳೆಂಬ ಮೂರು ಲೋಕಗಳಲ್ಲಿರುವವರೆಲ್ಲರೂ ಕೂಡಿ ಬಂದು ರಣರಂಗದಲ್ಲಿ ನನ್ನ ಸಮ್ಮುಖದಲ್ಲಿ ನಿಲ್ಲಲಾರರು, ಹಾಗಾದರೂ ಸಮರದಲ್ಲಿ ಜಯವನ್ನು ಬಯಸುವವನು ಸರ್ವಪ್ರಯತ್ನದಿಂದಲೂ ತನ್ನ ಶರೀರವನ್ನು ರಕ್ಷಿಸಿಕೊಳ್ಳಬೇಕು, ತನ್ನನ್ನು ರಕ್ಷಿಸಿಕೊಳ್ಳದೆ ಪರರನ್ನು ಕೊಲ್ಲುವದು ಭಂಟತನವಲ್ಲವೆಂಬ ರಾಜನೀತಿಯುಂಟು; ಯುದ್ಧದಲ್ಲಿ ಜಯವು ಸಿದ್ಧಿಯಾಗುವುದಕ್ಕೆ ಅದು ಬಲ್ಲವರ ಅಧೀನವಲ್ಲ” ಎಂದು ಹೇಳಿದನು.

ಆ ಮಾತನ್ನು ಕೇಳಿದ ಅವರೈವರೂ ಯಜ್ಞಪುರುಷನಂತೆ ತೇಜಸ್ಸುಳ್ಳವರಾಗಿ ರಥ ಗಜ ತುರಗ ಪದಾತಿ ಚತುರಂಗಬಲವನ್ನು ಕೂಡಿ ಅತ್ಯಂತ ನಿಶಿತವಾದ ಆಯುಧಗಳನ್ನು ಧರಿಸಿಕೊಂಡು ಬಂದು ಕಿರಣಗಳೊಡನೆ ಕೂಡಿ ಉದಯವಾಗುವ ಸೂರ್ಯನಂತೆ ತನುಕಾಂತಿಯುಳ್ಳವನಾಗಿ ಮಹಾಸತ್ವವುಳ್ಳವನಾಗಿ ಮಹಾಬುದ್ಧಿವಂತನಾಗಿ ಅತ್ಯಂತ ಉತ್ಸಾಹಶಕ್ತಿಯುಳ್ಳವನಾಗಿ ಮಹಾಭುಜಬಲಪರಾಕ್ರಮವುಳ್ಳವನಾಗಿ ಅಶೋಕವನದ ಬಾಗಿಲಮುಂದಿದ್ದ ಚಾವಡಿಯಲ್ಲಿ ಕುಳಿತುಕೊಂಡಿದ್ದ ಅತ್ಯದ್ಭುತವಾದ ಶರೀರವುಳ್ಳ ಹನುಮಂತನನ್ನು ಕಂಡು ಸುತ್ತಿಮುತ್ತಿಕೊಂಡರು. ಆ ಬಳಿಕ ದುರ್ಧರ್ಷನು ಐದು ಮುಖಗಳುಳ್ಳ ಐದು ಶರಗಳನ್ನು ಒಂದೇಸಾರಿ ಪ್ರಯೋಗಿಸಿ ಹನುಮಂತನ ಶಿರಸ್ಸನ್ನು ಹೊಡೆಯಲು ಆ ಬಾಣಗಳಿಂದ ಶಿರಸ್ಸಿನಮೇಲೆ ಘಾಯಪಡೆದ ಹನುಮಂತನು ಬೊಬ್ಬಿಟ್ಟು ಕೂಗುತ ಆಕಾಶಮಾರ್ಗಕ್ಕೆ ನೆಗೆದು ಮತ್ತೂ ದುರ್ಧರ್ಷನು ಅನೇಕ ಬಾಣಗಳನ್ನು ಕರೆದು ಅಟ್ಟಿಕೊಂಡು ಹೋಗಲು ಶರತ್ಕಾಲದಲ್ಲಿ ಮಳೆಯನ್ನು ಸುರಿಯುವ ಮೇಘಗಳಿಂದ ಬರುವ ಹನಿಗಳಂತೆ ಬರುತಿದ್ದ ಚಂಡಮಾರುತಗಳನ್ನು ತನ್ನ ಕೈಗಳಿಂದ ತೊಲಗಿಸುತ ಮತ್ತೂ ದುರ್ಧರ್ಷನು ತನ್ನನ್ನು ಅಡ್ಡಕಟ್ಟಿಕೊಂಡು ಅಟ್ಟಿಕೊಂಡು ಬರಲು ಅಂತರಿಕ್ಷಮಾರ್ಗದಲ್ಲಿ ಉನ್ನತವಾಗಿ ನೆಗೆದುಹೋಗಿ ಸಿಡಿಲಸಮೂಹವು ಪರ್ವತದಮೇಲೆ ಬೀಳುವಂತೆ ದುರ್ಧರ್ಷನಮೇಲೆ ಬಿದ್ದು ಹೊಡೆದು ಅಪ್ಪಳಿಸಲು ದುರ್ಧರ್ಷನು ತನ್ನ ರಥವು ಮುರಿಯಲ್ಪಟ್ಟು ಭೂಮಿಯಮೇಲೆ ಬಿದ್ದು ಯಮಲೋಕವನ್ನೈದಿದನು; ಆಗ ವಿರೂಪಾಕ್ಷನೂ ಯೂಪಾಕ್ಷನೂ ದೊಣ್ಣೆಗಳನ್ನು ಹನುಮಂತನ ಎದೆಗೆ ಸಂಧಾನಮಾಡಲಾಗಿ ಆತನು ಘಾಯಪಡೆದು ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ಗರುಡನು ಭೂಮಿಗೆ ಇಳಿದು ಬರುವಂತೆ ಇಳಿದು ಬಂದು ದೊಡ್ಡ ಚಂದನಮರವನ್ನು ಬೇರುಸಹಿತವಾಗಿ ಕಿತ್ತುಕೊಂಡು ಅಂತರಿಕ್ಷಮಾರ್ಗಕ್ಕೆ ಹೋಗಿ ವಿರೂಪಾಕ್ಷಯೂಪಾಕ್ಷರನ್ನು ಹೊಡೆದನು; ಅದರಿಂದ ಅವರಿಬ್ಬರೂ ಭೂಮಿಯಮೇಲೆ ಬಿದ್ದು ಶರೀರವನ್ನು ಬಿಟ್ಟರು. ಆ ಮೇಲೆ ಪ್ರಘಸನು ಆ ಮೂವರು ಸೇನಾನಾಯಕರು ಬಿದ್ದದ್ದನ್ನು ಕಂಡು ಹಾಸ್ಯಮಾಡುತ ಹನುಮಂತನನ್ನು ಅಟ್ಟಿಕೊಂಡನು; ಭಾಸಕರ್ಣನು ತ್ರಿಶೂಲವನ್ನು ತೆಗೆದುಕೊಂಡು ಮತ್ತೊಂದುದಿಕ್ಕಿನಲ್ಲಿ ಹನುಮಂತನನ್ನಟ್ಟಿಕೊಂಡನು; ಪ್ರಘಸನು ಪಟ್ಟಿಸದಿಂದಲೂ ಭಾಸಕರ್ಣನು ತ್ರಿಶೂಲದಿಂದಲೂ ಹಾಕಲು ಹನುಮಂತನು ಶರೀರವೆಲ್ಲವೂ ರಕ್ತದಿಂದ ನೆನೆದು ಪ್ರಾತಃಕಾಲದ ಬಾಲಸೂರ್ಯನಂತೆ ಒಪ್ಪುತ ಅತ್ಯಂತ ಕೋಪಯುಕ್ತನಾಗಿ ಮೃಗಪಕ್ಷಿ ಸರ್ಪಸಹಿತವಾದ ಪರ್ವತದ ಕೋಡುಗಲ್ಲುಗಳನ್ನು ಕಿತ್ತು ಆ ರಾಕ್ಷಸರಮೇಲೆ ಹಾಕಲು ಅವರು ಚೂರ್ಣೀಕೃತವಾದ ಸರ್ವಾಂಗವುಳ್ಳವರಾಗಿ ಭೂಮಿಯಮೇಲೆ ಬಿದ್ದು ಪ್ರಾಣಗಳನ್ನು ಬಿಟ್ಟರು; ಈಪ್ರಕಾರದಲ್ಲಿ ಮಹಾಬಲವಂತನಾದ ಹನುಮಂತನು ಆ ಐದುಮಂದಿ ಸೇನಾನಾಯಕರನ್ನೂ ಯಮಮಂದಿರಕ್ಕೆ ಕಳುಹಿಸಿ ಉಳಿದ ರಾಕ್ಷಸಸೇನೆಯನ್ನು ಆನೆಯಿಂದ ಆನೆಯನ್ನೂ ಕುದುರೆಯಿಂದ ಕುದುರೆಯನ್ನೂ ಕಾಲಾಳುಗಳಿಂದ ಕಾಲಾಳುಗಳನ್ನೂ ರಥಗಳಿಂದ ರಥಗಳನ್ನೂ ಪೆಟ್ಟಿಕ್ಕಿ ದೇವೇಂದ್ರನು ಅಸುರರನ್ನು ಸಂಹರಿಸುವಂತೆ ಸಮಸ್ತ ರಾಕ್ಷಸಬಲವನ್ನೂ ಸಂಹರಿಸಿದನು. ಆ ಬಳಿಕ ರಥ ಗಜ ತುರಗ ಕಾಲಾಳುಗಳಿಂದಲೂ ಮುರಿದುಬಿದ್ದ ಛತ್ರ ಚಾಮರ ಧ್ವಜ ಪತಾಕೆಗಳಿಂದಲೂ ಆ ರಣಭೂಮಿಯು ಪರಿಪೂರ್ಣವಾಗಿರಲು ಹನುಮಂತನು ಪ್ರಳಯಕಾಲದಲ್ಲಿ ಪ್ರಜೆಗಳು ಕ್ಷಯವಾಗಲು ಕಾಲವು ಒಂದೇ ಉಳಿಯುವಂತೆ ಒಬ್ಬನೇ ಮೊದಲಹಾಗೆ ಅಶೋಕವನದ ಬಾಗಿಲ ತೋರಣವನ್ನಾಶ್ರಯಿಸಿಕೊಂಡಿದ್ದನು.

## ೪೭ ನೇ ಅಧ್ಯಾಯ.

## ಅಕ್ಷಯನ ವಧೆ.

ಈಪ್ರಕಾರವಾಗಿ ಹನುಮಂತನು ರಾಕ್ಷಸಸೇನಾಪತಿಗಳೈದುಮಂದಿಯನ್ನು ಚತುರಂಗಬಲಸಹಿತವಾಗಿ ಸಂಹರಿಸಿದ ವೃತ್ತಾಂತವನ್ನು ಕೇಳಿ ರಾವಣನು ಅತ್ಯಂತ ಕೋಪಾಟೋಪದಿಂದ ಸಮೀಪದಲ್ಲಿದ್ದ ಸಮರೋದ್ಧತನಾದ ಅಕ್ಷಯಕುಮಾರನನ್ನು ಕ್ರೂರದೃಷ್ಟಿಯಿಂದ ನೋಡಲು ಪ್ರತಾಪಶಾಲಿಯಾದ ಅಕ್ಷಯಕುಮಾರನು ರಾವಣನ ದೃಷ್ಟಿಸಂಜ್ಞೆಮಾತ್ರದಿಂದಲೇ ಹನುಮಂತನ ಸಂಗಡ ಯುದ್ಧಕ್ಕೆ ಕಳುಹಿಸಿದನೆಂದು ತಿಳಿದು ಸುವರ್ಣಮಯವಾಗಿ ಅತ್ಯಂತ ವಿಚಿತ್ರವಾದ ಧನುಸ್ಸನ್ನು ತೆಗೆದುಕೊಂಡು ಬ್ರಾಹ್ಮಣರು ಮಂತ್ರಪೂರ್ವಕವಾಗಿ ಹೋಮವನ್ನು ಮಾಡುವಾಗ ಹವಿಸ್ಸಿಗೆ ಯಜ್ಞಪುರುಷನು ಬರುವಂತೆ ಯುದ್ಧಸನ್ನದ್ಧನಾಗಿ ಬಾಲಸೂರ್ಯನಂತೆ ಪ್ರಕಾಶಮಾನವಾಗಿ ಹೊಳೆಯುತ್ತಿದ್ದ ಸುವರ್ಣಮಯವಾದ ಗವಾಕ್ಷಗಳಿಂದ ರಮಣೀಯವಾದ್ದಾಗಿ ಬಹುಕಾಲವು ಮಾಡಿದ ತಪಸ್ಸಿನ ಫಲದಿಂದ ಸಂಪಾದಿಸಲ್ಪಟ್ಟಂಥಾದ್ದಾಗಿ ರತ್ನಖಚಿತವಾದ ಧ್ವಜಪತಾಕೆಗಳಿಂದ ಅಲಂಕರಿಸಲ್ಪಟ್ಟಂಥಾದ್ದಾಗಿ ಸಮಸ್ತವಾದ ದೇವಾಸುರರಿಗೂ ತಡೆಯುವದಕ್ಕೆ ಅಸಾಧ್ಯವಾದ್ದಾಗಿ ವಾಯುವೇಗವುಳ್ಳಂಥಾದ್ದಾಗಿ ಅಂತರಿಕ್ಷಮಾರ್ಗದಲ್ಲಿ ಚರಿಸುವಂಥಾ ರಥವನ್ನೇರಿಕೊಂಡು ಎಂಟು ಅಲಗುಗಳಿಂದ ಮಹಾಭಯಂಕರವಾದ ತೋಮರವನ್ನು ಧರಿಸಿಕೊಂಡು ಸೂರ್ಯನ ಕಿರಣದಂತೆ ಹೊಳೆಯುತ್ತಿದ್ದ ಸುವರ್ಣಾಭರಣಗಳನ್ನು ಧರಿಸಿಕೊಂಡು ಅಪರಿಮಿತವಾದ ಪರಾಕ್ರಮವುಳ್ಳವನಾಗಿ ರಥಚಕ್ರಧ್ವನಿಗಳಿಂದಲೂ ಆನೆಗಳ ಬೃಂಹಿತಧ್ವನಿಗಳಿಂದಲೂ ಅಶ್ವಗಳ ಹೇಷಾರವಗಳಿಂದಲೂ ಕಾಲಾಳುಗಳ ಕೈಚಪ್ಪಳಾರವಗಳಿಂದಲೂ ಸಮಸ್ತ ಭೂಮಂಡಲವೂ ಆಕಾಶವೂ ಕಂಗೆಡಲು ಚತುರಂಗಬಲಸಮೇತನಾಗಿ ಅಶೋಕವನದ ಬಾಗಿಲಮುಂದೆ ಶಿಯಲ್ಲಿ ಜಗಲಿಯಮೇಲಿದ್ದ ಹನುಮಂತನನ್ನು ಕಂಡು ಆತನ ಪರಾಕ್ರಮಾತಿಶಯವನ್ನೂ ಸಂಚಾರವೇಗವನ್ನೂ ಬಲಗರ್ವವನ್ನೂ ನೋಡಿ ಆಶ್ಚರ್ಯಪಟ್ಟು ಹೇಮಂತಕಾಲದಲ್ಲಿ ಸೂರ್ಯಪ್ರಭೆಯು ಹೆಚ್ಚುವಂತೆ ಕೋಪಾಗ್ನಿಯಿಂದ ಹೆಚ್ಚಿದ ಪರಾಕ್ರಮವುಳ್ಳವನಾಗಿ ಯುದ್ಧರಂಗದಲ್ಲಿ ಯಾರಿಗೂ ತಡೆಯಲು ಶಕ್ಯವಲ್ಲದ ಪರಾಕ್ರಮವುಳ್ಳವನಾಗಿ ಸಮಸ್ತ ಶತ್ರುಗಳನ್ನೂ ಜಯಿಸುವ ಬಲಗರ್ವಿತನಾದ್ದರಿಂದ ಅತ್ಯಂತ ಕೋಪಾಟೋಪದಿಂದ ಕೂರಲಗುಗಳುಳ್ಳ ಮೂರು ಅಂಬುಗಳನ್ನೆಸೆದನು; ಆ ಬಾಣಗಳು ಅತಿವೇಗದಿಂದ ಬರುವದನ್ನು ಕಂಡು ಹನುಮಂತನು ಲೀಲಾಮಾತ್ರದಿಂದ ಅವುಗಳನ್ನು ತನ್ನ ಕೈಗಳಿಂದಲೇ ತೊಲಗಿಸಿದನು; ಹೀಗೆ ಅಕ್ಷಯಕುಮಾರನೂ ಹನುಮಂತನೂ ಅತ್ಯದ್ಭುತವಾದ ಯುದ್ಧಮಾಡುತ್ತಿದ್ದ ಸಮಯದಲ್ಲಿ ಭೂಕಂಪವಾಯಿತು; ಸೂರ್ಯನು ತಪಿಸಿದನು, ವಾಯುದೇವನು ಚರಿಸಲಂಜಿದನು, ಪರ್ವತಗಳು ಕಂಪಿಸಿದವು, ಅಂತರಿಕ್ಷಮಾರ್ಗದಲ್ಲಿ ಅವರ ಕೋಲಾಹಲಧ್ವನಿಯಿಂದ ಪ್ರತಿಧ್ವನಿ ಹುಟ್ಟಿತು; ಸಮುದ್ರವು ಅಲ್ಲೋಲಕಲ್ಲೋಲವಾಗಿ ನಡುಗಿತು; ಆ ಬಳಿಕ ಬತ್ತಳಿಕೆಯಿಂದ ಬಾಣಗಳನ್ನು ತೆಗೆಯುವದರಲ್ಲಿಯೂ ಬಿಲ್ಲಿನಲ್ಲಿ ತೊಡುವದರಲ್ಲಿಯೂ ಗುರಿತಪ್ಪದೇ ಪ್ರಯೋಗಿಸುವದರಲ್ಲಿಯೂ ಅತ್ಯಂತ ಚಾತುರ್ಯವುಳ್ಳವನಾದ ಅಕ್ಷಯಕುಮಾರನು ಮೂರು ಅಂಬುಗಳನ್ನು ಹನುಮಂತನಮೇಲೆ ಪ್ರಯೋಗಿಸಲು ಆತನು ಮಸ್ತಕದಲ್ಲಿ ಘಾಯಪಡೆದು ಕಣ್ಣುಗಳಲ್ಲಿ ರಕ್ತವು ತುಂಬಿ ಅಸ್ತಮಯದಲ್ಲಿ ಕಂಗೊಳಿಸುವ ಸೂರ್ಯಮಂಡಲದಂತೆ ಒಪ್ಪುತಿದ್ದನು! ಮತ್ತು ಅಕ್ಷಯಕುಮಾರನು ವಿಷವನ್ನುಗುಳುವ ಸರ್ಪದಹಾಗೆ ಅತಿ ಭಯಂಕರವಾಗಿ ಸುವರ್ಣಮಯವಾದ ಗಿಣ್ಣುಗಳುಳ್ಳ ಬಾಣಗಳನ್ನು ಸಂಧಾನಮಾಡಿ ಪ್ರಯೋಗಿಸಲು ಆತನ ಹಸ್ತವೇಗವನ್ನು ನೋಡಿ ಹನುಮಂತನು ಅತ್ಯಂತ ಸಂತೋಷಯುಕ್ತನಾಗಿ ಸಮರಕ್ಕಭಿಮುಖನಾಗಿ ತನ್ನ ಬಲವೀರ್ಯಗಳಿಂದ ಹೆಚ್ಚಿದ ಕೋಪವುಳ್ಳವನಾಗಿ ಮಂದರಗಿರಿಪರ್ವತದ ಅಗ್ರಭಾಗದಲ್ಲಿದ್ದ ಸೂರ್ಯನಂತೆ ಹೊಳೆಯುತ ತನ್ನ ನೇತ್ರಾಗ್ನಿಯಿಂದ ಸಮಸ್ತ ಬಲವಾಹನಸಹಿತನಾದ ಅಕ್ಷಯಕುಮಾರನನ್ನು ದಹಿಸುವಂತೆ ನೋಡುತಿದ್ದನು; ಆ ಸಮಯದಲ್ಲಿ ಕಾರ್ಮುಕವೆಂಬ ಗುಡುಗುಗಳುಳ್ಳವನಾಗಿ ಶರಗಳೆಂಬ ಮಳೆಯುಳ್ಳವನಾಗಿ ಕಾಲಮೇಘದಂತೊಪ್ಪುತ ಅಕ್ಷಯಕುಮಾರನು ಹನುಮಂತನೆಂಬ ಪರ್ವತದಮೇಲೆ ಶರವರ್ಷಗಳೆಂಬ ಮಳೆಯನ್ನು ಕರೆಯುತ್ತಿದ್ದನು, ಹನುಮಂತನು ತೇಜೋಬಲವುಳ್ಳವನಾಗಿ ಬಿಲ್ಹಿಡಿದು ಚಂಡವಿಕ್ರಮನಾದ ಅಕ್ಷಯಕುಮಾರನನ್ನು

ನೋಡುತ ಆತನು ಪ್ರಳಯಕಾಲದಮೇಘದ ಗುಡುಗಿನಂತೆ ಗರ್ಜಿಸುತ ಬಾಲ್ಯಾವಸ್ಥೆಯಿಂದ ಯುದ್ಧಗರ್ವಿತನಾಗಿ ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ಮದ್ದಾನೆಯು ಹುಲ್ಲುಕೊಚ್ಚಿದ ಕಪ್ಪಿನಲ್ಲಿ ಬೀಳುವಂತೆ ತನ್ನ ಇದಿರಾಗಿ ಬಂದು ಅನೇಕ ಬಾಣಗಳನ್ನು ಪ್ರಯೋಗಿಸಲು ಆ ಬಾಣಗಳನ್ನು ತಪ್ಪಿಸಿಕೊಂಡು ಅಂತರಿಕ್ಷಮಾರ್ಗಕ್ಕೆ ನೆಗೆದು ಹೋಗಿ ಮತ್ತೂ ಆತನು ಹಿಂವಟ್ಟ ಪರ್ವತದಮೇಲೆ ಕಲ್ಲುಮಳೆಯನ್ನು ಕರೆಯುವಂತೆ ತನ್ನಮೇಲೆ ಬಾಣಗಳನ್ನು ಬಿಡಲು ಆ ಬಾಣಗಳನ್ನು ತನ್ನ ಕೈಗಳಿಂದ ಮುರಿದು ಚಂಡವಿಕ್ರಮನಾಗಿ ಬಾಣಗಳ ಮಧ್ಯದಲ್ಲಿ ವಾಯುವಿನಂತೆ ಅತಿವೇಗದಿಂದ ಸಂಚರಿಸುತ ಅಕ್ಷಯಕುಮಾರನ ಹಸ್ತವೇಗವನ್ನು ನೋಡಿ ಆಶ್ಚರ್ಯಪಡುತ ಮತ್ತೂ ಆತನಿಂದ ಮೂರಂಬುಗಳಿಂದ ಭುಜಮಧ್ಯದಲ್ಲಿ ಘಾದಪಡೆದು ತನ್ನ ಮನಸ್ಸಿನಲ್ಲಿ "ಕಟಕಟಾ! ಈತನು ಬಾಲಕನಾದರೂ ಈತನ ಸಮರವು ದೊಡ್ಡದು, ಮರ್ಮಸ್ಥಾನಗಳನ್ನು ತಿಳಿದು ಶರಸಂಧಾನ ಮಾಡುತ್ತಾನೆ, ಈತನು ಮಹಾ ಶಸ್ತ್ರಾಸ್ತ್ರವಿದ್ಯಾಕುಶಲನು; ನಾನಾಚಿತ್ರಯುದ್ಧ ಪ್ರವೀಣನು, ಮಹಾತ್ಮನು, ಮಹಾ ಪರಾಕ್ರಮಿಯು; ಯುದ್ಧದಲ್ಲಿ ಸಾವಧಾನವುಳ್ಳವನು, ಈತನ ಗುಣಚಾರಿತ್ರಗಳನ್ನು ನೋಡಿದರೆ ನಾಗ ಗಂಧರ್ವ ಯಕ್ಷ ಕಿನ್ನರ ಕಿಂಪುರುಷರಿಗೂ ಪೂಜ್ಯನು; ಪರಾಕ್ರಮೋತ್ಸವಗಳಲ್ಲಿ ಹೊತ್ತುಹೊತ್ತಿಗೆ ಹೆಚ್ಚುತ್ತಿರುವನು, ನನ್ನ ಸಮ್ಮುಖದಲ್ಲಿ ನಿಂತು ನನ್ನನ್ನೇ ನೋಡುತಲಿದ್ದಾನೆ, ದೇವಾಸುರರಿಗೂ ಕಂಪವನ್ನು ಹುಟ್ಟಿಸುವ ಸಮರ್ಥನು, ಈತನ ಪರಾಕ್ರಮಾತಿಶಯವನ್ನು ನೋಡಿದರೆ ಕೊಲ್ಲುವುದಕ್ಕೆ ಮನಸ್ಸು ಬರಲಿಲ್ಲ, ಹಾಗಾದರೂ ನಾನು ಉಪೇಕ್ಷೆಮಾಡಿ ಬಿಟ್ಟೆನಾದರೆ ನನ್ನನ್ನು ಜರೆದು ನುಡಿಯುವನು, ಅದಲ್ಲದೆ ಈತನಿಗೆ ಹೊತ್ತುಹೊತ್ತಿಗೂ ಪರಾಕ್ರಮವು ಹೆಚ್ಚುತ್ತಿದೆ; ಆದ್ದರಿಂದ ಈತನನ್ನು ಕೊಲ್ಲುವುದೇ ಬುದ್ಧಿಯಲ್ಲದೆ ಉಳಿಸುವದು ಬುದ್ಧಿಯಲ್ಲ, ಹೆಚ್ಚುತ್ತಿರುವ ಕಿಚ್ಚನ್ನು ತಗ್ಗಿಸಬೇಕಲ್ಲದೆ ಉಪೇಕ್ಷೆಮಾಡಿ ಉಳಿಯಿಸಬಾರದು" ಎಂದು ಯೋಚನೆ ಮಾಡಿ ಆ ಶತ್ರುವಿನ ಯುದ್ಧಚಾತುರ್ಯವನ್ನು ವಿಚಾರಿಸಿ ತನ್ನ ಕಾರ್ಯವು ಜಯವಾಗುವ ಸಮಯದಲ್ಲಿ ಅಂತರಿಕ್ಷಮಾರ್ಗದಿಂದ ರಥಾರೂಢನಾಗಿ ಯುದ್ಧಮಾಡುತಿದ್ದ ಅಕ್ಷಯಕುಮಾರನಮೇಲೆ ಸಿಡಿಲು ಬಿದ್ದಂತೆ ಅಂಗೈಯಿಂದ ಅಪ್ಪಳಿಸಿ ಹೊಡೆದನು; ಅದರಿಂದ ಅಕ್ಷಯಕುಮಾರನು ತನ್ನ ರಥದ ಅಚ್ಚು ಮೂಕು ಭಂಡಿ ಅರೆಸಿಲುಗಳು ಮುರಿಯಲು ಕುದುರೆಗಳ ಕಾಲುಗಳು ಮುರಿದು ನುಗ್ಗುನುಚ್ಚಾಗಲು ಭೂಮಿಯಲ್ಲಿ ಬಿದ್ದು ಎದ್ದು ಖಡ್ಗ ಬಿಲ್ಲುಬಾಣಗಳನ್ನು ಧರಿಸಿಕೊಂಡು ಮುನೀಶ್ವರನಾದವನು ತಪೋಯೋಗಸಾಮರ್ಥ್ಯದಿಂದ ಮೊದಲಿನ ಶರೀರವನ್ನು ಬಿಟ್ಟು ದಿವ್ಯದೇಹವನ್ನು ಪಡೆದು ಸ್ವರ್ಗಲೋಕಕ್ಕೆ ಹೋಗುವಂತೆ ಗರುಡ ವಾಯು ದೇವ ಸಿದ್ಧರು ಸಂಚರಿಸುವ ಅಂತರಿಕ್ಷಮಾರ್ಗದಲ್ಲಿ ಸಂಚರಿಸುವವನ್ನು ಕಂಡು ಹನುಮಂತನು ಅತಿವೇಗದಿಂದ ಹೋಗಿ ಆತನ ಕಾಲುಗಳನ್ನು ಹಿಡಿದು ಗರುಡನು ಸರ್ಪವನ್ನು ಭೂಮಿಯಮೇಲೆ ಹಾಕಿ ಹೊಡೆಯುವಂತೆ ಅನೇಕಬಾರಿ ಭೂಮಿಯಮೇಲೆ ಅಪ್ಪಳಿಸಿ ಹೊಡೆದನು, ಅದರಿಂದ ಅಕ್ಷಯಕುಮಾರನು ಕೈಕಾಲು ತೊಡೆ ನಡುವು ಎದೆ ಕೊರಳು ಮೊದಲಾದ ಸರ್ವಾಂಗಗಳೂ ಮುರಿದು ಭೂಮಿಯಮೇಲೆ ಬಿದ್ದು ಯಮಲೋಕವನ್ನು ಸೇರಿದನು! ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ಅಕ್ಷಯಕುಮಾರನೂ ಹನುಮಂತನೂ ಯುದ್ಧಮಾಡುವದನ್ನು ನೋಡುತಿದ್ದ ಯಕ್ಷಗಂಧರ್ವ ಕಿನ್ನರ ಕಿಂಪುರುಷ ದೇವರ್ಷಿ ಮೊದಲಾದ ಸಮಸ್ತ ವೃಂದಾರಕರೂ ಅತ್ಯಂತ ಆಶ್ಚರ್ಯಪಟ್ಟು ಹನುಮಂತನನ್ನು "ಜಯಜಯಾ!" ಎಂದು ಕೊಂಡಾಡುತಿದ್ದರು! ಹನುಮಂತನು ದೇವೇಂದ್ರನ ಕುಮಾರನಿಗೂ ನಳಕೂಬರನಿಗೂ ಸಮಾನವಾದ ಪರಾಕ್ರಮವುಳ್ಳ ಅಕ್ಷಯಕುಮಾರನನ್ನು ಸಂಹರಿಸಿ ಜಯಶೀಲನಾಗಿ ಪೂರ್ವದಲ್ಲಿದ್ದ ಅಶೋಕವನದ ಬಾಗಿಲಮುಂದೆಸೆಯ ಚಾವಡಿಯನ್ನು ಸೇರಿದನು!

## ೪೮ ನೇ ಅಧ್ಯಾಯ.

### ಹನುಮಂತನು ಬ್ರಹ್ಮಾಸ್ತ್ರದಿಂದ ಕಟ್ಟುಬಿದ್ದದ್ದು.

ಆ ಬಳಿಕ ಹನುಮಂತನು ಅಕ್ಷಯಕುಮಾರನನ್ನು ಸಂಹರಿಸಿದ್ದನ್ನು ಕೇಳಿ ರಾವಣನು ಚಿಂತಾಕ್ರಾಂತನಾಗಿ ಅತ್ಯಂತ ಕೋಪಾಟೋಪದಿಂದ ತನ್ನ ಹಿರಿಯಮಗನಾದ ಇಂದ್ರಜಿತ್ತನ್ನು ಕರೆದು "ಎಲೈ ಇಂದ್ರಜಿತ್ತನೇ ಕೇಳು; ನೀನು ಸಮಸ್ತ ಶಸ್ತ್ರಾಸ್ತ್ರಗಳ ಪ್ರಯೋಗವನ್ನು ಬಲ್ಲವನು; ಪಟುಭಟರೆಲ್ಲರಿಗೂ ಸಮರ್ಥನಾದವನು;

ಸಮಸ್ತ ದೇವಾಸುರರೂ ನಿನ್ನ ಯುದ್ಧಚಾತುರ್ಯವನ್ನು ಬಲ್ಲರು; ನೀನು ಬ್ರಹ್ಮದೇವನನ್ನು ಆರಾಧನೆಮಾಡಿ ಬ್ರಹ್ಮಾಸ್ತ್ರವನ್ನು ಪಡೆದಿದ್ದೀ, ಸುರಾಸುರ ಮಾನವರಾದಿಗೂ ಯುದ್ಧದಲ್ಲಿ ನಿನ್ನ ಬ್ರಹ್ಮಾಸ್ತ್ರವ ಸಹಿಸುವದಕ್ಕೆ ಶಕ್ತರಲ್ಲ; ಮೂರುಲೋಕದೊಳಗಾಗಿ ನಿನ್ನ ಕೂಡೆ ಯುದ್ಧಕ್ಕೆ ಬರುವ ಹಿಮ್ಮತ್ತುಳ್ಳವನಿಲ್ಲ, ನೀನು ಅಸಹಾಯಶೂರನು, ನಿನ್ನ ಭುಜಬಲಪರಾಕ್ರಮವನ್ನು ಬ್ರಹ್ಮದೇವನ ವರವು ರಕ್ಷಣೆಮಾಡುವದು, ನೀನು ಮಹಾಬುದ್ಧಿವಂತನು, ದೇಶಕಾಲ ವರ್ತಮಾನಗಳನ್ನು ಬಲ್ಲ ನಿನಗೆ ಯುದ್ಧರಂಗದಲ್ಲಿ ಅಶಕ್ಯವಾದ ಕಾರ್ಯವಿಲ್ಲ; ಮಂತ್ರಾಲೋಚನೆಯಲ್ಲಿ ನೀನು ಅರಿಯದ ಕಾರ್ಯವಿಲ್ಲ, ಮೂರುಲೋಕದೊಳಗಾಗಿ ನಿನ್ನ ಬ್ರಹ್ಮಾಸ್ತ್ರಬಲವನ್ನೂ ನಿನ್ನ ಸತ್ವಸಾಹಸಗಳನ್ನೂ ಅರಿಯದವರಿಲ್ಲ; ನಿನ್ನ ಪರಾಕ್ರಮವೂ ನಿನ್ನ ಶಸ್ತ್ರಬಲವೂ ನಿನ್ನ ತಪಸ್ಸಾಮರ್ಥ್ಯವೂ ಒಂದಕ್ಕೊಂದು ಅನುಗುಣವಾದಂಥಾವು, ಯುದ್ಧರಂಗದಲ್ಲಿ ನಿನ್ನ ಮನಸ್ಸು ಯಾವಾಗಲೂ ಕುಗ್ಗದು. ಇದು ನಿಶ್ಚಯವು; ಈಗಿನ ವರ್ತಮಾನವನ್ನು ನೋಡಿದರೆ ಸಮಸ್ತ ಸೇನೆಗಳೂ ಮಡಿಯುವವಹಾಗಿದೆ, ಜಂಬುಮಾಲಿಯೂ ಪ್ರಧಾನರಕುಮಾರರೈದುಮಂದಿಯೂ ನಿನ್ನ ತಮ್ಮನಾದ ಅಕ್ಷಯಕುಮಾರನೂ ಅವರ ಸಂಗಡ ಹೋದ ಚತುರಂಗಬಲಗಳೂ ಹನುಮಂತನೊಬ್ಬನಿಂದ ಸಂಹರಿಸಲ್ಪಟ್ಟರು, ಅವರೊಬ್ಬರಲ್ಲಿಯು ನನ್ನ ಮನಸ್ಸಿಗೆ ತೃಪ್ತಿಯಾದ ಸತ್ವಸಾಹಸಗಳಿಲ್ಲ; ಅಂಥಾ ಸತ್ವಸಾಹಸಗಳು ನಿನ್ನಲ್ಲಿ ಉಂಟು, ಈ ವರ್ತಮಾನವನ್ನು ತಿಳಿದು ಆ ಕಪಿಯ ಮಹಿಮೆಯನ್ನೂ ಸತ್ವಸಾಹಸಗಳನ್ನೂ ನಿನ್ನ ಸಾಮರ್ಥ್ಯವನ್ನೂ ವಿಚಾರಿಸಿ ನಿನ್ನ ಸತ್ವಬಲಗಳಿಗೆ ತಕ್ಕ ಕಾರ್ಯಗಳನ್ನು ಮಾಡು, ಸಮಸ್ತ ಶತ್ರುಸಂಹಾರಕನಾದ ನೀನು ಸಮಿಾಪದಲ್ಲಿದ್ದುಕೊಂಡು ನಿನ್ನ ಬಲಗಳನ್ನು ಯುದ್ಧಕ್ಕೆ ಕಳುಹಿಸಿ ಶತ್ರುವಿಗೆ ಹ್ಯಾಗೆ ಪರಾಜಯವಾಗುವದೋ ಹಾಗೆ ಕಾರ್ಯವನ್ನು ಮಾಡು. ಎಲೈ ಇಂದ್ರಜಿತ್ತನೇ, ನಿನ್ನ ಬಲವನ್ನೂ ಶತ್ರುಬಲವನ್ನೂ ವಿಚಾರಿಸಿಕೊಂಡು ಕಾರ್ಯವನ್ನು ತೊಡಗು; ರಾಕ್ಷಸರನ್ನು ಹುಲ್ಲೇಹಿಂಡಿನಂತೆ ಕೊಲ್ಲುವ ಹನುಮಂತನ ಕೂಡೆ ನಿನಗೆ ಯುದ್ಧವು ಬಂದಲ್ಲಿ ಈ ಸೇನೆಗಳು ನಿನ್ನನ್ನು ರಕ್ಷಿಸಲಾರವು; ನೀನು ಈ ಸ್ವಲ್ಪವಾದ ಆರು ಅಲಗುಗಳುಳ್ಳ ವಜ್ರಾಯುಧವನ್ನು ತೆಗೆದುಕೊಂಡು ಹೋಗಿ ಆತನ ಕೂಡೆ ಯುದ್ಧವನ್ನು ಮಾಡಬೇಡ; ಹನುಮಂತನ ಗತಿವೇಗವನ್ನು ಇಷ್ಟುಅಷ್ಟೆಂದು ಹೇಳುವದಕ್ಕೆ ಶಕ್ಯವಲ್ಲ, ಆತನು ಯಜ್ಞಪುರುಷನಿಗೆ ಸಮಾನನಾದವನು; ಶಸ್ತ್ರಾಸ್ತ್ರಗಳಿಂದ ಸಂಹರಿಸುವದಕ್ಕೆ ಸಾಧ್ಯವಾದವನಲ್ಲ, ಆತನ ಮಹಿಮೆಯನ್ನೂ ನಿನ್ನ ದಿವ್ಯಧನುಸ್ಸಿನ ಬಲವನ್ನೂ ವಿಚಾರಿಸಿಕೊಂಡು ನಿನ್ನ ಮನಸ್ಸಿಗೆ ತೋರುವಹಾಗೆ ಕಾರ್ಯವನ್ನು ತೊಡಗು, ಮೊದಲೇ ನಮ್ಮ ಬಲವು ಕ್ಷಯವಾಗಿದೆ, ಈ ವರ್ತಮಾನವನ್ನು ತಿಳಿದೂ ನಿನ್ನನ್ನು ಯುದ್ಧಕ್ಕೆ ಕಳುಹಿಸುವದು ಯುಕ್ತವಲ್ಲ, ಆದರೂ ರಾಜನೀತಿಯನಾಶ್ರಯಿಸಿ ನಿನ್ನನ್ನು ಸಂಗ್ರಾಮಕ್ಕೆ ಕಳುಹಿಸುತ್ತೇನೆ; ನೀನು ನಾನಾಶಸ್ತ್ರಾಸ್ತ್ರಗಳಿಂದಲೂ ಅವಶ್ಯವಾಗಿ ಯುದ್ಧವನ್ನು ಮಾಡಿ ಜಯವನ್ನು ಪಡೆ" ಎಂದು ಹೇಳಿದನು.

ರಾವಣನ ವಾಕ್ಯವನ್ನು ಕೇಳಿ ಮಹಾಪ್ರಸಾದವೆಂದು ಅಂಗೀಕರಿಸಿ ಯುದ್ಧವನ್ನು ಮಾಡಬೇಕೆಂದು ನಿಶ್ಚಯಿಸಿ ತಾವರೇ ಕಮಲದ ಎಸಳಿನಂತೆ ವಿಶಾಲವಾದ ಕಣ್ಣುಗಳುಳ್ಳ ಇಂದ್ರಜಿತ್ತನು ತನ್ನ ಬಲವನ್ನು ಕೂಡಿಕೊಂಡು ಸಮರದಲ್ಲಿ ಉತ್ಸಾಹಶಕ್ತಿಯುಳ್ಳವನಾಗಿ ಹುಣ್ಣಿಮೆಯಲ್ಲಿ ಚಂದ್ರನನ್ನು ಕಂಡ ಸಮುದ್ರರಾಜನಂತೆ ಮನೋಹರ್ಷವುಳ್ಳವನಾಗಿ ಗರುತ್ಮಂತನಿಗೆ ಸಮಾನವಾದ ವೇಗವುಳ್ಳದ್ದಾಗಿ ನಾಲ್ಕು ಕೋರೆದಾಡೆಗಳುಳ್ಳ ನಾಲ್ಕು ಸರ್ಪಗಳಿಂದ ಸಜ್ಜುಮಾಡಲ್ಪಟ್ಟ ರಥವನ್ನೇರಿಕೊಂಡು ಅತಿವೇಗದಿಂದ ಹನುಮಂತನಿದ್ದೆಡೆಗೆ ಬರುತಿದ್ದನು, ಆತನ ರಥದ ಘೇಂಕಾರಧ್ವನಿಯನ್ನೂ ಬಿಲ್ಲಿನ ನಾರಿಯ ಝೇಂಕಾರಧ್ವನಿಯನ್ನೂ ಕೇಳಿ ಹನುಮಂತನು ಅತ್ಯಂತ ಸಂತುಷ್ಟಚಿತ್ತನಾಗಿ ಯುದ್ಧಸನ್ನಾಹವನ್ನು ಮಾಡಿಕೊಳ್ಳುತಿದ್ದನು, ರಣಪಂಡಿತನಾದ ಇಂದ್ರಜಿತ್ತನು ಬಿಲ್ಲುಬಾಣಗಳನ್ನು ತೆಗೆದುಕೊಂಡು ಹನುಮಂತನಿಗಿದಿರಾಗಿ ಬರುತ್ತಿರಲು ಕೆಂಧೂಳುಕವಿದು ನಾನಾದಿಕ್ಕುಗಳೂ ಭಯಂಕರವಾಗಿದ್ದವು; ಮೃಗಗಳು ಭಯಂಕರವಾಗಿ ಕೂಗುತಿದ್ದವು; ಅವರಿಬ್ಬರ ಯುದ್ಧವನ್ನು ನೋಡಬೇಕೆಂದು ಸುರಾಸುರ ಗಂಧರ್ವ ಯಕ್ಷ ಕಿನ್ನರ ಕಿಂಪುರುಷರು ಅಂತರಿಕ್ಷಮಾರ್ಗದಲ್ಲಿ ಬಂದಿದ್ದರು; ಅತಿ ವೇಗದಿಂದ ಯುದ್ಧಸನ್ನಾಹವನ್ನು ಮಾಡಿಕೊಂಡು ಬರುತಿದ್ದ ಇಂದ್ರಜಿತ್ತನ್ನು ಕಂಡು ಹನುಮಂತನು ಗರ್ಜಿಸಲು ರಥದಮೇಲಿದ್ದ ಇಂದ್ರಜಿತ್ತನು

ಸಿಡಿಲಧ್ವನಿಯಂತೆ ಧ್ವನಿಯುಳ್ಳ ಬಿಲ್ಲನ್ನು ತಿರುಗಿಸುತ ಬರುತ್ತಿದ್ದನು, ಆ ಬಳಿಕ ಅವರಿಬ್ಬರೂ ದೇವಾಸುರರಂತೆ ಹೆಚ್ಚಿದ ವೈರವುಳ್ಳವರಾಗಿ ಶಂಕಾತಂಕಗಳಿಲ್ಲದೆ ಯುದ್ಧಸನ್ನದ್ಧರಾಗಿರಲು ಇಂದ್ರಜಿತ್ತನು ಚಿನ್ನದ ಮುಲಾಮುಳ್ಳ ವಾಗಿ ಅತ್ಯಂತ ಕೂರಲಗುಳ್ಳ ಅಂಬುಗಳನ್ನು ಹನುಮಂತನಮೇಲೆ ಪ್ರಯೋಗಿಸಿದನು, ಆತನು ಇಂದ್ರಜಿತ್ತಿನ ರಥಧ್ವನಿಯನ್ನೂ ಭೇರೀಮೃದಂಗ ನಿಸಪ್ಪಳ ಮೊದಲಾದ ವಾದ್ಯಧ್ವನಿಗಳನ್ನೂ ಆತನ ಬಿಲ್ಲುನಾರಿಯ ಠಣಾರುಧ್ವನಿ ಯನ್ನೂ ಕೇಳಿ ಅತ್ಯಂತ ಉನ್ನತವಾಗಿ ಬೆಳೆದು ಆ ಅಂಬುಗಳಿಗೆ ಗುರಿಯಾಗದೆ ತನ್ನ ಶರೀರವನ್ನು ತಪ್ಪಿಸಿ ಕೊಂಡು ಮತ್ತೂ ಉದ್ದವಾಗಿ ಬೆಳೆದು ತನ್ನ ಕೈಗಳನ್ನು ನೀಡಿ ಮೇಲಕ್ಕೆ ನೆಗೆಯುತ ಬರುತಿದ್ದ 'ಬಾಣಗಳ ನ್ನಿಡಿದು ಮುರಿಯುತಿದ್ದನು, ಹೀಗೆ ಅವರಿಬ್ಬರೂ ಯುದ್ಧಕೌಶಲದಿಂದ ನೋಡುವದಕ್ಕೆ ಅತ್ಯದ್ಭುತವಾಗಿ ಯುದ್ಧ ಮಾಡಿದರು; ಆ ರಾಕ್ಷಸನು ಹನುಮಂತನಮೇಲೆ ಲಂಘಿಸಿ ತನ್ನ ಬಾಣದ ಪೆಟ್ಟುಗಳನ್ನು ತಪ್ಪಿಸಿಕೊಳ್ಳುವುದ ನ್ನು ಕಾಣಲಿಲ್ಲ, ಹನುಮಂತನು ಇಂದ್ರಜಿತ್ತಿನ ಶರಸಂಧಾನವೇಗವನ್ನು ಕಾಣಲಿಲ್ಲ, ಹೀಗೆ ಇಬ್ಬರೂ ದೇವಾ ಸುರರಿಗೆ ಸಮಾನವಾಗಿ ಅತ್ಯದ್ಭುತವಾದ ಯುದ್ಧವನ್ನು ಮಾಡುತ್ತಿರಲು ಇಂದ್ರಜಿತ್ತು ತಾನು ಪ್ರಯೋಗಿಸಿದ ಬಾಣ ಗಳೆಲ್ಲವೂ ಗುರಿತಪ್ಪಿ ವ್ಯರ್ಥವಾಗುತ್ತಿರುವದನ್ನು ಕಂಡು ಅತ್ಯಂತ ಚಿಂತಾಕ್ರಾಂತನಾಗಿ ಹನುಮಂತನನ್ನು ಬ್ರಹ್ಮಾ ಸ್ತ್ರಪ್ರಯೋಗದಿಂದಲೇ ನಿಗ್ರಹಿಸಬೇಕಲ್ಲದೆ ಮತ್ತೊಂದುಪಾಯವಿಲ್ಲವೆಂದು ನಿಶ್ಚಯಿಸಿ ಬ್ರಹ್ಮಾಸ್ತ್ರವನ್ನು ಪ್ರ ಯೋಗಿಸಿದನು ಆ ಬಳಿಕ ಹನುಮಂತನು ಬ್ರಹ್ಮಾಸ್ತ್ರದಿಂದ ಕಟ್ಟುಬಿದ್ದು ಕೈಕಾಲುಗಳನ್ನಾಡಿಸುವುದಕ್ಕೂ ಸಮರ್ಥನಲ್ಲದೇ ಭೂಮಿಯಮೇಲೆ ಬಿದ್ದು ಕೆಲವುಹೊತ್ತಿಗೆ ಅದು ಬ್ರಹ್ಮಾಸ್ತ್ರವೆಂದು ತಿಳಿದು ತನ್ನ ಮನಸ್ಸಿನಲ್ಲಿ "ಪೂರ್ವದಲ್ಲಿ ಬ್ರಹ್ಮದೇವರ ಸಂಗಡ ಆತನ ಅಸ್ತ್ರಕ್ಕೆ ಮೂರೂಮುಕ್ಕಾಲು ಘಳಿಗೆಗಳು ಕಟ್ಟುಪಟ್ಟಿರುವದಾಗಿ ಮಾತುಕೊಟ್ಟಿನು, ಆದ್ದರಿಂದ ಆ ಮಾತನ್ನು ಮೀರಬಾರದು; ಇದಕ್ಕೇನು ಮಾಡಬೇಕು!" ಎಂದು ಚಿಂತಾ ಕ್ರಾಂತನಾಗಿ ಇಂದ್ರಜಿತ್ತಿನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವರು ವರವನ್ನು ಕೊಟ್ಟ ವೃತ್ತಾಂತವನ್ನು ವಿಚಾರಿಸಿ "ಬ್ರಹ್ಮಾಸ್ತ್ರದಿಂದ ಕಟ್ಟಲ್ಪಟ್ಟ ನನಿಗೆ ಲೋಕಗುರುವಾದ ಬ್ರಹ್ಮದೇವರ ಕೃಪೆಯಿಂದ ಬಿಡಿಸಿಕೊಳ್ಳುವ ಸಾಮ ರ್ಥ್ಯವುಂಟು, ಹಾಗಾದರೂ ಆ ದೇವರ ಆಜ್ಞೆಯನ್ನು ಮೀರಬಾರದು, ಬ್ರಹ್ಮಾಸ್ತ್ರದಿಂದ ಕಟ್ಟಿಗೊಳಗಾದ ರೂ ನನಿಗೆ ಕಟ್ಟುಪಟ್ಟೆನೆಂಬ ಭಯವಿಲ್ಲ; ಬ್ರಹ್ಮದೇವರ ಕೃಪೆಯಿಂದಲೂ ದೇವೇಂದ್ರನ ಕೃಪೆಯಿಂದಲೂ ನನ್ನ ತಂದೆಯಾದ ವಾಯುದೇವನ ಕೃಪೆಯಿಂದಲೂ ಬ್ರಹ್ಮಾಸ್ತ್ರಬಂಧನದಿಂದ ಬಿಡಿಸಿಕೊಳ್ಳುವದಕ್ಕೆ ಕೂಡುವದಾದರೂ ಈಗ ಈ ರಾಕ್ಷಸರು ನನ್ನನ್ನು ಹಿಡಿದುಕೊಂಡು ಹೋಗುವದೇ ನನಿಗೆ ಉತ್ತಮವಾದ ಕಾರ್ಯವು, ಈ ನೆವದಿಂದ ಲಾದರೂ ರಾವಣನ ಸಂಗಡ ಸಂಭಾಷಣೆ ಮಾಡಬಹುದು; ರಾಕ್ಷಸರು ನನ್ನನ್ನು ಹಿಡಿದುಕೊಂಡು ಹೋಗಲೀ; ಇಂದ್ರಜಿತ್ತು ನನಿಗೆ ಬ್ರಹ್ಮಾಸ್ತ್ರದಿಂದ ಬಿಡಿಸಿಕೊಳ್ಳುವ ಪಾಟಿ ಸಾಮರ್ಥ್ಯವುಂಟೆಂಬುದನ್ನು ತಿಳಿಯದೆ ನನ್ನ ಮೇಲೆ ಈ ಅಸ್ತ್ರವನ್ನು ಪ್ರಯೋಗಿಸಿದನೇ ಅಲ್ಲದೆ ತಿಳಿದು ಪ್ರಯೋಗಿಸಿದವನಲ್ಲ" ಎಂದು ನಿಶ್ಚಯಿಸಿ ಅಷ್ಟರೊ ಳಗಾಗಿ ಮೂರೂಮುಕ್ಕಾಲು ಘಳಿಗೆಗಳು ತುಂಬಿ ಬ್ರಹ್ಮಾಸ್ತ್ರದ ಕಟ್ಟು ಸಡಲಿದ್ದನ್ನು ತಿಳಿದು ಕಟ್ಟುಪಟ್ಟವನಹಾ ಗೆಯೇ ಕೈಕಾಲುಗಳನ್ನು ಚಲನಮಾಡದೆ ಆ ರಾಕ್ಷಸರು ಬೆದರಿಸುತ್ತಿದ್ದರೂ ಸುಮ್ಮನೇ ಇದ್ದನು. ಆ ರಾಕ್ಷ ಸರು ಹನುಮಂತನು ಕೈಕಾಲಾಡಿಸದೇ ಇದ್ದದ್ದನ್ನು ನೋಡಿ ಅವಶ್ಯವಾಗಿ ಶಿಕ್ಕಿದನೆಂದೆಣಿಸಿ ನಾರಶೀರೆ ಸಣಬಿನ ಹಗ್ಗ ಆಚಕದನಾರೂ ಮೊದಲಾದವನ್ನು ತಂದು ಹೆಡಕಟ್ಟುಕಟ್ಟಿದರು ಹೀಗೆ ಯಾವಬಗೆಯಲ್ಲಾದರೂ ರಾವಣ ನನ್ನು ಚನ್ನಾಗಿ ನೋಡಬೇಕೆಂದು ಅವರು ಕಟ್ಟುವ ಕಟ್ಟುಗಳಿಗೆ ಬಳಗಾಗಿ ಸುಮ್ಮನೇ ಇದ್ದ ಹನುಮಂತನನ್ನು ಕಂಡು ಇಂದ್ರಜಿತ್ತು ಆತನಿಗೆ ಬ್ರಹ್ಮಾಸ್ತ್ರದ ಕಟ್ಟು ಸಡಲಿದ್ದನ್ನು ತಿಳಿದು "ಕಟಕಟಾ! ನಾನು ಬ್ರಹ್ಮಾಸ್ತ್ರದಿಂ ದ ಕಟ್ಟು ಸಾಧ್ಯಮಾಡಿದ್ದು ವ್ಯರ್ಥವಾಯಿತು; ಇವರು ಬ್ರಹ್ಮಾಸ್ತ್ರದ ಕಟ್ಟು ಸಡಲಿದ್ದನ್ನು ತಿಳಿಯಲಿಲ್ಲ, ಇ ನ್ನೊಂದು ಅಸ್ತ್ರವನ್ನು ಪ್ರಯೋಗಿಸಿ ಕಟ್ಟೋಣವೆಂದರೆ ಮೊದಲಿನ ಅಸ್ತ್ರದ ಕಟ್ಟು ಏನಾಯಿತೆಂದು ಎಲ್ಲರೂ ಸಂಶಯಪಡುವರು, ಹನುಮಂತನೂ ತಾನು ಬ್ರಹ್ಮಾಸ್ತ್ರದ ಕಟ್ಟಿನಿಂದ ಬಿಡುಗಡೆಯೈದಿದ್ದನ್ನರಿಯದೆ ಈ ರಾಕ್ಷಸ ರ ಕಟ್ಟಿಗೊಳಗಾಗಿ ಇತ್ತಲಾ ಅತ್ತಲಾ ಎಳದರೂ ಸಹಿಸಿಕೊಂಡಿಧಾನೆ" ಎಂದು ಚಿಂತಿಸುತಿದ್ದನು

ಆ ಬಳಿಕ ಆ ರಾಕ್ಷಸರು ದೊಣ್ಣೆಗಳಿಂದ ಹೊಡೆಯುತಲು ಮುಷ್ಟಿಗಳಿಂದ ಗುದ್ದುತಲೂ ಹನುಮಂತನನ್ನು ಇಂದ್ರಜಿತ್ತಿನ ಸಮೀಪಕ್ಕೆ ಎಳೆದುಕೊಂಡು ಹೋಗಲು ಆತನು ಹನುಮಂತನು ಮೊದಲು ಬ್ರಹ್ಮಾಸ್ತ್ರದ ಕಟ್ಟಿಗೊಳಗಾಗಿ ಆಮೇಲೆ ಸಣಬು ಮೊದಲಾದ ಹಗ್ಗಗಳ ಕಟ್ಟುಗಳಿಂದ ಮುದಸೊಕ್ಕಿದ ಆನೆಯು ಕಟ್ಟುಪಟ್ಟಂತೆ ಕಟ್ಟಿಗೊಳಗಾಗಿಧಾನೆ ಎಂದು ರಾವಣನ ಸಂಗಡ ಹೇಳಲು ಕಲವು ರಾಕ್ಷಸರನ್ನು ಕಳುಹಿಸಿ ಹನುಮಂತನನ್ನು ಕಟ್ಟಿಸಿಕೊಂಡು ಜಯಸ್ತನಾಗಿ ಸಮಸ್ತ ರಾಕ್ಷಸಬಲವನ್ನೂ ಕೂಡಿಕೊಂಡು ಲಂಕಾಪಟ್ಟಣದ ರಾಜಬೀದಿಯಲ್ಲಿ ಹೋಗುತಿರಲು ಅಲ್ಲಲ್ಲಿ ರಾಕ್ಷಸರು ಗುಂಪುಕೂಡಿ ಹನುಮಂತನನ್ನು ನೋಡಿ "ಇವನ್ಯಾರು? ಎತ್ತಲಿಂದ ಬಂದನು? ಇವನಿಗಿಲ್ಲಿ ಕಾರ್ಯವೇನು? ಹ್ಯಾಗೆ ಸಿಕ್ಕಿದನು?" ಎಂದು ನುಡಿಯುತಿದ್ದರು, ಕೆಲವರು "ಇವನನ್ನು ಕೊಂದು ಭಕ್ಷಣಮಾಡೀ" ಎಂದು ಅಲ್ಲಲ್ಲಿ ನುಡಿಯುತಲಿದ್ದರು. ಈಪ್ರಕಾರದಲ್ಲಿ ಇಂದ್ರಜಿತ್ತು ರಾಜಬೀದಿಯನ್ನು ದಾಟಿ ಅರಮನೆಯ ಸಮೀಪಕ್ಕೆ ಹೋಗಿ ಆಸ್ಥಾನಮಂಟಪದಲ್ಲಿ ಒಡ್ಡೋಲಗದಲ್ಲಿದ್ದ ರಾವಣನ ಬಳಿಗೆ ಹೋಗಿ ಕೈಮುಗಿದು ಕಟ್ಟುಪಟ್ಟಿದ್ದ ಹನುಮಂತನನ್ನು ಆತನ ಸನ್ನಿಧಿಗೆ ಒಪ್ಪಿಸಿದನು. ಆಗ ಕಟ್ಟುಪಟ್ಟಿದ್ದ ಹನುಮಂತನು ಅನೇಕ ತೇಜೋಬಲಯುಕ್ತನಾದ ಸೂರ್ಯನಹಾಗೆ ಪ್ರಕಾಶಿಸುತ ಕೋಪಾಟೋಪದಿಂದ ಕಣ್ಣುಗಳನ್ನು ತಿರುಗಿಸುತಿದ್ದ ರಾವಣನನ್ನು ಕಂಡನು ಆತನು ಕುಲಶೀಲ ವಯೋವೃದ್ಧರಾದ ತನ್ನ ಮಂತ್ರಿಗಳನ್ನು ಕುರಿತು "ಎಲೈ ಮಂತ್ರಿಗಳಿರಾ, ಈ ಕಪಿಯನ್ನು ಮೊದಲು ಕಂಡಿಲ್ಲ, ಇವನ್ಯಾರು? ಎಲ್ಲಿಂದ ಬಂದನು? ಯಾವ ಕಾರ್ಯವನ್ನು ಕುರಿತು ಬಂದನು? ಇವನನ್ನು ಕೇಳೀ' ಎಂದು ನುಡಿದನು

ಆ ಮಂತ್ರಿಗಳು ತನ್ನ ವೃತ್ತಾಂತವನ್ನು ಕೇಳಲು ಹನುಮಂತನು ತನ್ನ ವೃತ್ತಾಂತವನ್ನೂ ತಾನು ಬಂದ ಕಾರ್ಯವನ್ನೂ ಸವಿಸ್ತಾರವಾಗಿ ಹೇಳಿ ತಾನು ಸುಗ್ರೀವನ ದೂತನೆಂತಲೂ ಲಂಕಾಪಟ್ಟಣವನ್ನು ನೋಡಿ ಹೋಗುವದಾಗಿಯೂ ಹೇಳಿದನು.

## ೪೯ ನೇ ಅಧ್ಯಾಯ.

### ರಾವಣನ ಒಡ್ಡೋಲಗ ವರ್ಣನೆ.

ಆ ಬಳಿಕ ಹನುಮಂತನು ರಾವಣನ ಅತ್ಯದ್ಭುತವಾದ ಕೃತ್ಯಗಳನ್ನು ಸ್ಮರಿಸಿ ಕೋಪಾಟೋಪದಿಂದ ಆತನನ್ನು ನೋಡಿದನು: ರಾಕ್ಷಸೇಶ್ವರನಾದ ರಾವಣನು ಅನೇಕವಾದ ಮುತ್ತಿನಮಣಿಗಳಿಂದ ಅಲಂಕರಿಸಲ್ಪಟ್ಟ ಕಾಂತಿವತ್ತಾಗಿ ಅನರ್ಘ್ಯವಾಗಿ ಸುವರ್ಣಮಯವಾದ ಕಿರೀಟವನ್ನು ಧರಿಸಿ ದೇದೀಪ್ಯಮಾನನಾಗಿ ಒಪ್ಪುತ ಮನೋಹರವಾದ ರತ್ನಗಳಿಂದ ಕೆತ್ತಲ್ಪಟ್ಟ ಅನರ್ಘ್ಯಗಳಾದ ಸುವರ್ಣಾಭರಣಗಳಿಂದ ಅಲಂಕೃತನಾಗಿ ಚಿನ್ನದ ಸರಗುಗಳುಳ್ಳ ಪೀತಾಂಬರವಸ್ತ್ರಗಳನ್ನುಟ್ಟುಕೊಂಡು ದಿವ್ಯಗಂಧಾನುಲೇಪನ ಮಾಡಿಕೊಂಡು ವಿಶಾಲವಾಗಿ ಮನೋಹರವಾಗಿ ಕೆಂಪಾದ ಕಣ್ಣುಗಳಿಂದ ರಮಣೀಯವಾಗಿ ಒಪ್ಪುತ ತೀಕ್ಷ್ಣವಾದ ಕೋರೆದಾಡೆಗಳಿಂದಲೂ ಘನಗಾತ್ರವಾದ ತುಟಿಗಳಿಂದಲೂ ಪ್ರಕಾಶಮಾನಗಳಾದ ದಶಶಿರಸ್ಸುಗಳಿಂದಲೂ ತೇಜಸ್ವಿಯಾಗಿ ನಾನಾಪ್ರಕಾರವಾದ ಸರ್ಪಗಳುಳ್ಳ ಕೋಡುಕಲ್ಲುಗಳಿಂದ ರಮಣೀಯವಾದ ಮಂದರಗಿರಿ ಪರ್ವತವನ್ನು ಒಪ್ಪುತ ಅಂಜನಗಿರಿಪರ್ವತಕ್ಕೆ ಸಮಾನವಾದ ತನುಕಾಂತಿಯುಳ್ಳವನಾಗಿ ಮುತ್ತಿನ ಸರಗಳನ್ನು ಧರಿಸಿ ಬೆಳ್ಳಕ್ಕಿಗಳ ಸಾಲುಗಳಿಂದ ಒಪ್ಪುತಿದ್ದ ನೀಲಮೇಘದಂತೆ ಪ್ರಕಾಶಿಸುತಿದ್ದನು! ಗಂಧದಿಂದ ಲೇಪಿಸಲ್ಪಟ್ಟ ಬಾಹುಪುರಿಗಳಿಂದ ಘನಗಾತ್ರವಾಗಿ ಉರುಟಾಗಿ ಐದು ಹೆಡೆಗಳುಳ್ಳ ಸರ್ಪಗಳಂತೆ ಒಪ್ಪುತ್ತಿದ್ದ ತೋಳುಗಳುಳ್ಳವನಾಗಿ ಅನರ್ಘ್ಯವಾದ ರತ್ನಕಂಬಳಿಗಳಿಂದ ಅಲಂಕರಿಸಲ್ಪಟ್ಟ ಸ್ಫಟಿಕಮಣಿಮಯವಾದ ಸಿಂಹಾಸನದಲ್ಲಿ ಕುಳಿತುಕೊಂಡು ಬೀಸಣಿಗೆ ಚಾಮರಗಳಿಂದ ಸೇವೆಮಾಡುತಿದ್ದ ಸರ್ವಾಭರಣಭೂಷಿತೆಯರಾದ ಸ್ತ್ರೀಯರಿಂದ ಅಲಂಕರಿಸಲ್ಪಟ್ಟವನಾಗಿ ಮಂತ್ರಾಲೋಚನೆಯಲ್ಲಿ ಪ್ರವೀಣರಾಗಿ ನೀತಿಶಾಸ್ತ್ರತತ್ವಜ್ಞರಾಗಿ ಸಮೀಪದಲ್ಲಿ ಕುಳಿತಿದ್ದ ಪ್ರಹಸ್ತ ದುರ್ಧರ ಮಹಾಪಾರ್ಶ್ವ ನಿಕುಂಭರೆಂಬ ನಾಲ್ವರು ಪ್ರಧಾನರಿಂದ ಕೂಡಿ ನಾಲ್ಕು

ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಮೂರ್ತಿವತ್ತಾದ ಭೂಮಂಡಲದಂತೆಯೂ ಬುದ್ಧಿವಂತರಾಗಿ ಮಂತ್ರವಿಚಾರ ಕುಶಲರಾದ ಮತ್ತು ಅನೇಕ ಮಂತ್ರಿಗಳಿಂದಲೂ ಕಾರ್ಯನಿಪುಣರಾದ ಪ್ರಧಾನರಿಂದಲೂ ಸೇವಿಸಲ್ಪಟ್ಟು ದೇವತೆಗಳನ್ನು ಕೂಡಿರುವ ದೇವೇಂದ್ರನಂತೆಯೂ ಮಹಾಮೇರುಪರ್ವತದ ಕೋಡುಕಲ್ಲುಗಳ ಮಧ್ಯದಲ್ಲಿರುವ ನೀರುಂಡ ಮೇಘದಂತೆಯೂ ಒಪ್ಪುತ ಒಡ್ಡೋಲಗದಲ್ಲಿದ್ದನು ! ಮಹಾಪರಾಕ್ರಮಿಯಾದ ಹನುಮಂತನು ಇತ್ತ ಅತ್ತ ಎಳೆಯುತ್ತಿದ್ದ ರಾಕ್ಷಸರಬಾಧೆಗೊಳಗಾದವನಾದರೂ ರಾವಣನನ್ನು ನೋಡಿ ಆಶ್ಚರ್ಯಪಟ್ಟು ಆತನ ತೇಜಸ್ಸಿಗೆ ಸರಿಯಾದ ತೇಜಸ್ಸಿಲ್ಲವೆಂದೆಣಿಸಿ ತನ್ನ ಮನಸ್ಸಿನಲ್ಲಿ "ಕಟಕಟಾ ! ಈ ರಾವಣನ ಆಕಾರವನ್ನೂ ಧೈರ್ಯವನ್ನೂ ಸತ್ವವನ್ನೂ ಕಾಂತಿಯನ್ನೂ ರಾಜಲಕ್ಷಣಗಳನ್ನೂ ಏನೆಂದು ಹೇಳಲಿ ! ಈತನಲ್ಲಿ ಅಧರ್ಮವು ಬಹಳವಾಗಿಲ್ಲದಿದ್ದಪಕ್ಷದಲ್ಲಿ ದೇವಲೋಕಕ್ಕೂ ಒಡೆಯನಾಗಿ ದೇವೇಂದ್ರನಿಗೂ ರಕ್ಷಕನಾಗುವನು, ಈತನ ಲೋಕವಿರುದ್ಧವಾದ ಕೃತ್ಯಗಳಿಂದ ಸಮಸ್ತ ಲೋಕಗಳೂ ದೇವಾಸುರರೂ ಭಯಪಡುತಲಿಧಾರೆ, ಈತನು ಕೋಪಿಸಿಕೊಂಡರೆ ಸಮಸ್ತ ಜಗತ್ತನ್ನೂ ಸಮುದ್ರದಲ್ಲಿ ಮುಳುಗಿಸಿ ಬಿಡುವನು !" ಎಂದು ಅಪರಿಮಿತವಾದ ಸತ್ವಸಾಹಸಗಳುಳ್ಳ ರಾವಣನ ಮಹಿಮೆಯನ್ನು ಕಂಡು ಅತಿವಿಸ್ಮಯದಿಂದಿದ್ದನು.

## ೫೦ನೇ ಅಧ್ಯಾಯ

### ರಾವಣನು ಹನುಮಂತನನ್ನು ಯಾರೆಂದು ಕೇಳಿದ್ದು

ಆ ಬಳಿಕ ಸಮಸ್ತ ಲೋಕಗಳನ್ನೂ ಗೋಳಾಡಿಸುವಂಥಾ ರಾವಣನು ಕೋಪಾಟೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡು ತನ್ನ ಮನಸ್ಸಿನಲ್ಲಿ ಸಂಶಯಪಟ್ಟು ತನ್ನ ಪ್ರಧಾನರನ್ನು ಕುರಿತು "ಎಲೈ ಪ್ರಹಸ್ತನೇ, ಈತನ ಪರಾಕ್ರಮವನ್ನೂ ಧೈರ್ಯವನ್ನೂ ಸಾಹಸವನ್ನೂ ಕಾಂತಿಯನ್ನೂ ನೋಡಿದರೆ ಕಪಿನಾಯಕನಹಾಗಿಲ್ಲ; ಸಾಕ್ಷಾತ್ ನಂದೀಶ್ವರನೇ ಕೈಲಾಸದಿಂದ ಬಂದಿರಬೇಕು, ಪೂರ್ವದಲ್ಲಿ ನಾನು ಕೈಲಾಸಪರ್ವತವನ್ನು ಕಿತ್ತೆತ್ತಬೇಕೆಂದು ಅಲುಗಾಡಿಸಿದ ಸಮಯದಲ್ಲಿ ಪರಮೇಶ್ವರನ ಸಮೀಪದಲ್ಲಿದ್ದ ಪಾರ್ವತೀದೇವಿಯು ಬೆದರಿದಳು, ಆಗ ನಂದೀಶ್ವರನು ನನ್ನನ್ನು ಶಪಿಸಿದನು; ಆತನೇ ಈ ರೂಪದಿಂದ ಬಂದಿರಬೇಕು; ಅಲ್ಲದಿದ್ದರೆ ಈತನು ಬಾಣಾಸುರನಾಗಿರಬೇಕು. ಇವನ್ಯಾರು ? ಎಲ್ಲಿಂದ ಬಂದನು ? ಇಲ್ಲಿಗೆ ಬಂದ ಕಾರಣವೇನು ? ಅಶೋಕವನವನ್ನು ಮುರಿದುದರಿಂದ ಈತನಿಗಾದ ಲಾಭಕಾರ್ಯವೇನು ? ಆ ವನದಲ್ಲಿದ್ದ ರಾಕ್ಷಸಸ್ತ್ರೀಯರನ್ನು ಏನುಕಾರಣದಿಂದ ಬೆದರಿಸಿದನು ? ಅತಿಪ್ರಯಾಸದಿಂದ ಈ ಪಟ್ಟಣಕ್ಕೆ ಯಾಕೆ ಬಂದನು ? ಬಂದರೂ ಯಾಕೆ ಯುದ್ಧವನ್ನು ಮಾಡಿದನು ? ಈ ಪ್ರಶ್ನೆಗಳನ್ನು ಅಜ್ಞಾನಿಯಾದ ವಾನರನನ್ನು ಕೇಳು" ಎಂದು ಆಜ್ಞಾಪಿಸಿದನು.

ಪ್ರಹಸ್ತನು ಹನುಮಂತನನ್ನು ಕುರಿತು "ಎಲೈ ವಾನರನೇ, ಸ್ವಲ್ಪಹೊತ್ತು ಆಯಾಸವನ್ನು ತೀರಿಸಿಕೊಳ್ಳು; ಅಂಜಬೇಡ; ನಿನಗೆ ಒಳ್ಳೇದಾಗುವದು; ದೇವೇಂದ್ರನು ಕಳುಹಿಸಲು ಆತನ ದೂತನಾಗಿ ಇಲ್ಲಿಗೆ ಬಂದೆಯೊ! ಕುಬೇರನು ಕಳುಹಿಸಲು ಆತನ ದೂತನಾಗಿ ಲಂಕಾಪಟ್ಟಣಕ್ಕೆ ಬಂದೆಯೊ ? ನಿನ್ನ ರೂಪವು ವಾನರರೂಪವಾಗಿದೆ; ಯಮನ ಸೇವಕನಾಗಿ ಬಂದೆಯೊ ? ವರುಣನ ಬೇಹುಗಾರನಾಗಿ ಬಂದೆಯೊ ? ಬೇಹುಗಾರವೇಷದಿಂದ ಈ ಪಟ್ಟಣಕ್ಕೆ ಬಂದ ಕಾರಣವೇನು ? ನಾರಾಯಣನು ರಾವಣನನ್ನು ಜಯಿಸಬೇಕೆಂದು ಕಳುಹಿಸಲು ನೀನು ಆತನ ಬೇಹುಗಾರನಾಗಿ ಬಂದೆಯೊ ? ನಿನ್ನ ಸಾಹಸವನ್ನು ನೋಡಿದರೆ ದಿವ್ಯಪುರುಷನಾದವನಲ್ಲದೆ ವಾನರನಲ್ಲವೆಂದು ತೋರುತ್ತದೆ; ಯಥಾರ್ಥವಾಗಿ ನೀನು ಬಂದ ಕಾರ್ಯವನ್ನು ಹೇಳಿದರೆ ನಿನ್ನನ್ನು ಬಿಡಿಸುವೆನು; ಸುಳ್ಳುಹೇಳಿದರೆ ನಿನ್ನ ಪ್ರಾಣಗಳಿಗೆ ಹಾನಿಬರುವದು; ಈ ಪಟ್ಟಣಕ್ಕೆ ಬರುವದಕ್ಕೆ ಕಾರ್ಯವೇನಿದ್ದರೂ ಹೇಳು" ಎಂದು ಕೇಳಿದನು

ಆ ಮಾತುಗಳನ್ನು ಕೇಳಿ ಹನುಮಂತನು ರಾವಣನನ್ನು ನೋಡಿ "ಎಲೈ ರಾವಣನೆ, ನಾನು ದೇವೇಂದ್ರನ ದೂತನೂ ಅಲ್ಲ—ಯಮನ ದೂತನೂ ಅಲ್ಲ—ವರುಣನ ದೂತನೂ ಅಲ್ಲ—ಕುಬೇರನ ದೂತನೂ ಅಲ್ಲ—ನಾರಾ

ಯಣನು ಕಳುಹಿಸಿದ ದೂತನೂ ಅಲ್ಲ! ನನ್ನ ಜಾತಿಯು ವಾನರಜಾತಿಯು, ಅಶೋಕವನವನ್ನಾವಕಾರಣದಿಂದ ಮುರಿದೆನೆಂದರೆ, ನಿನ್ನ ದರ್ಶನವು ಮಹಾ ದುರ್ಘಟವಾದ್ದರಿಂದ ಏನಾದರೂ ಬಂದು ದುರ್ಜನವನ್ನು ಮಾಡಿದರೆ ನನ್ನನ್ನು ಹಿಡಿತರಿಸುವೆಯೆಂಬ ನೆವದಿಂದ ಮುರಿದೆನು, ಆಮೇಲೆ ರಾಕ್ಷಸರು ನನ್ನನ್ನು ಕೊಲ್ಲುವದಕ್ಕೆ ಬರಲು ನಾನು ನನ್ನ ಶರೀರರಕ್ಷಣೆಗೋಸ್ಕರ ಅವರ ಕೂಡೆ ಯುದ್ಧವನ್ನು ಮಾಡಿದೆನು, ನಾನು ಬ್ರಹ್ಮಾಸ್ತ್ರ ವರುಣಾಸ್ತ್ರ ಮೊದಲಾದ ಅಸ್ತ್ರಗಳ ಕಟ್ಟಿಗೊಳಗಾಗುವವನಲ್ಲ, ನನಗೆ ಬ್ರಹ್ಮದೇವರ ವರವುಂಟು, ಈಗ ನಿನ್ನನ್ನು ಕಾಣಬೇಕೆಂದು ಈ ಅಸ್ತ್ರಕ್ಕೊಳಗಾಗಿ ಈ ರಾಕ್ಷಸರ ಬಾಧೆಗೊಳಗಾಗಿದ್ಧೇನೆ, ಲಂಕಾಪಟ್ಟಣಕ್ಕೆ ಬಂದು ಕಾರ್ಯವನ್ನು ಕುರಿತು ಬಂದೆನು, ನಾನು ರಘುನಾಥನ ದೂತನು " ಎಂದು ಹೇಳಿದನು

---

## ೫೧ ನೇ ಅಧ್ಯಾಯ

### ಹನುಮಂತನು ರಾವಣನಿಗೆ ತಾನು ಬಂದ ಕಾರ್ಯವನ್ನು ಹೇಳಿದ್ದು

"ಎಲೈ ರಾವಣನೆ ಕೇಳು. ನನ್ನನ್ನು ಸುಗ್ರೀವನು ಕಳುಹಿಸಲಾಗಿ ಆತನ ಆಜ್ಞೆಯಿಂದ ನಿನ್ನ ಪಟ್ಟಣಕ್ಕೆ ಬಂದೆನು, ನಿನ್ನ ಒಡಹುಟ್ಟಿದ ಸುಗ್ರೀವನು ನಿನ್ನ ಪರಿಣಾಮಸ್ಥಿತಿಯನ್ನು ಕೇಳಿಬರಹೇಳಿದನು; ಆತನು ಹೇಳಿಕಳುಹಿಸಿದ ಧರ್ಮಾರ್ಥಗರ್ಭಿತವಾಗಿ ಇಹಲೋಕ ಪರಲೋಕ ಸಾಧನವಾದ ಮಾತನ್ನು ಕೇಳು. ದಶರಥಮಹಾರಾಯನೆಂಬ ಒಬ್ಬ ರಾಯನಿದ್ದನು, ಆತನಿಗೆ ಹೇರಳವಾದ ಗಜತುರಗ ರಥಪದಾತಿಗಳೆಂಬ ಚತುರಂಗ ಬಲವಿದ್ದವು, ಆತನು ತಂದೆಯುಮರ್ಯಾದೆಯಲ್ಲಿ ಸಮಸ್ತಲೋಕಕ್ಕೂ ರಕ್ಷಕನಾಗಿ ದೇವೇಂದ್ರನಿಗೆ ಸಮಾನವಾದ ಮಹಿಮೆಯುಳ್ಳವನಾಗಿದ್ದನು, ಆತನಿಗೆ ಮಹಾ ಭುಜಬಲಪರಾಕ್ರಮವುಳ್ಳ ಜ್ಯೇಷ್ಠಪುತ್ರನಾದ ರಘುನಾಥನೆಂಬ ಕುಮಾರನಾದನು; ಆತನು ತನ್ನ ತಂದೆಯ ಆಜ್ಞೆಯಿಂದ ತಮ್ಮನಾದ ಲಕ್ಷ್ಮಣನನ್ನೂ ತನ್ನ ಪಟ್ಟದರಾಣಿಯಾದ ಸೀತಾದೇವಿಯನ್ನೂ ಕೂಡಿಕೊಂಡು ದಂಡಕಾರಣ್ಯಕ್ಕೆ ಬಂದು ಆಹಾರನಿಯಮವನ್ನು ಮಾಡಿಕೊಂಡು ಧರ್ಮಮಾರ್ಗವನ್ನನುಸರಿಸಿಕೊಂಡಿರುವ ಸಮಯದಲ್ಲಿ ಆತನ ಸ್ತ್ರೀಯಾದ ಸೀತಾದೇವಿಯನ್ನು ಯಾರೋ ಮೋಸಮಾಡಿ ಅಪಹರಿಸಿಕೊಂಡು ಹೋದರು, ಆ ದೇವಿಯು ವಿದೇಹರಾಜ್ಯಾಧಿಪತಿಯಾಗಿ ಮಹಾತ್ಮನಾದ ಜನಕರಾಯನ ಮಗಳು, ಶ್ರೀರಾಮನು ತನ್ನ ತಮ್ಮನಾದ ಲಕ್ಷ್ಮಣಸಮೇತನಾಗಿ ತನ್ನ ಸ್ತ್ರೀಯಾದ ಸೀತಾದೇವಿಯನ್ನರಸಿಕೊಂಡು ಋಷ್ಯಮೂಕಪರ್ವತಕ್ಕೆ ಬಂದು ಸುಗ್ರೀವನೊಡನೆ ಸಖ್ಯವನ್ನು ಮಾಡಿಕೊಂಡು ಆತನ ಶತ್ರುವಾದ ವಾಲಿಯನ್ನು ಕೊಂದು ರಾಜ್ಯವನ್ನು ಆತನಿಗೆ ಕೊಟ್ಟು ಪಟ್ಟವನ್ನು ಕಟ್ಟಿದನು, ಸುಗ್ರೀವನು ಸೀತಾದೇವಿಯನ್ನರಸಿ ತಂದುಕೊಡುವದಾಗಿ ಪ್ರತಿಜ್ಞೆಯನ್ನು ಮಾಡಿದನು, ವಾಲಿಯನ್ನು ನೀನು ಬಲ್ಲೆ; ಅಂಥಾ ವಾಲಿಯನ್ನು ರಣರಂಗದಲ್ಲಿ ಬಂದೇ ಬಾಣದಿಂದ ಲೀಲಾಮಾತ್ರದಲ್ಲಿ ಶ್ರೀರಾಮನು ಕೊಂದನು, ಸತ್ಯಸಂಧನಾದ ಸುಗ್ರೀವನು ಸೀತಾದೇವಿಯನ್ನರಸಿ ಕಾಣಬೇಕೆಂದು ವ್ಯಗ್ರಚಿತ್ತನಾಗಿ ಅನೇಕಸಾವಿರಮಂದಿ ಕಪಿನಾಯಕರನ್ನು ಕಳುಹಿಸಿದನು, ನಾನಾದಿಕ್ಕುಗಳಲ್ಲಿಯೂ ಊರ್ಧ್ವಲೋಕ ಪಾತಾಳಲೋಕಗಳಲ್ಲಿಯೂ ನಾನಾದ್ವೀಪಾಂತರಗಳಲ್ಲಿಯೂ ಹುಡುಕುತಿಧಾರೆ, ಅವರಲ್ಲಿ ಕೆಲವರು ಗರುಡನಿಗೆ ಸಮಾನವಾದ ವೇಗವುಳ್ಳವರು; ಕೆಲವರು ವಾಯುವಿಗೆ ಸಮಾನವಾದ ವೇಗವುಳ್ಳವರು, ನಾನು ಅಂತರಿಕ್ಷಮಾರ್ಗದಲ್ಲಿ ಸಂಚರಿಸುವ ಮಹಾಬಲವಂತನಾದ ವಾಯುವಿಗೆ ಪುತ್ರನಾದ ಹನುಮಂತನು, ನಾನು ಸೀತಾದೇವಿಯನ್ನು ಹುಡುಕುವನಿಮಿತ್ತವಾಗಿ ನೂರುಗಾವುದದಾರಿ ಅಗಲವಾದ ಸಮುದ್ರವನ್ನು ದಾಟಿ ಇಲ್ಲಿಗೆ ಬಂದೆನು; ನಾನಾದಿಕ್ಕುಗಳಲ್ಲಿಯೂ ಹುಡುಕಿ ಅಶೋಕವನದಲ್ಲಿ ಆ ದೇವಿಯನ್ನು ಕಂಡೆನು; ನೀನು ಧರ್ಮವೇ ಪರಮಪುರುಷಾರ್ಥವೆಂದು ವಿಚಾರಿಸಿ ತಪಸ್ಸಿನಿಂದ ಚಿರಂಜೀವತ್ವವನ್ನು ಪಡೆದೆ; ಹಾಗೆ ಚಿರಂಜೀವಿಯಾದ ನಿನಗೆ ಪರಸ್ತ್ರೀಯರಲ್ಲಿ ಮನಸ್ಸನ್ನಿಡುವುದು ಒಳ್ಳೇದಲ್ಲ, ನಿನ್ನಂಥಾ ಬುದ್ಧಿವಂತರು ಮೂಲಚ್ಛೇದನಮಾಡುವ ಸರ್ವಜನವಿರುದ್ಧವಾದ ಕಾರ್ಯಗಳಲ್ಲಿ

ಪ್ರವರ್ತಿಸರು, ದೇವಾಸುರರಲ್ಲಿಯಾದರೂ ಶ್ರೀರಾಮನ ಕೋಪಕ್ಕನುಗುಣವಾಗಿ ಲಕ್ಷ್ಮಣನಿಂದ ಎಸೆಯಲ್ಪಡುವ
ಬಾಣಗಳಿಗಿದಿರಾಗಿ ನಿಲ್ಲುವವರ್ಯಾರು! ಮೂರುಲೋಕಗಳಲ್ಲಿಯಾದರು ಮಹಾತ್ಮನಾದ ಶ್ರೀರಾಮನಿಗೆ ದ್ರೋಹವನ್ನೆ
ಣಿಸಿ ಸುಖದಲ್ಲಿರುವವರ್ಯಾರು! ನನ್ನ ಮಾತು ಕಾಲಕ್ಕೆ ಹಿತವಾಗಿ ಧರ್ಮಕ್ಕೆ ಅನುಗುಣವಾದಂಥಾದ್ದೆಂದು ವಿಚಾರಿಸಿ
ಶ್ರೀರಾಮನ ವಶಕ್ಕೆ ಸೀತಾದೇವಿಯನ್ನೊಪ್ಪಿಸು, ನಾನು ಸೀತಾದೇವಿಯನ್ನು ಕಂಡು ಅತಿ ದುರ್ಲಭವಾದ ಕಾರ್ಯ
ವನ್ನು ಸಾಧ್ಯಮಾಡಿದೆನು; ಇನ್ನುಮುಂದಣ ಕಾರ್ಯವನ್ನು ಶ್ರೀರಾಮನೇ ಮಾಡುವನು, ಅತ್ಯಂತ ದುಃಖಾಕ್ರಾಂತೆ
ಯಾದ ಸೀತಾದೇವಿಯನ್ನು ಕಂಡೆನು; ಆ ದೇವಿಯು ಐದು ಹೆಡೆಗಳುಳ್ಳ ಸರ್ಪವೆಂದು ತಿಳಿಯದೆ ಶರೆಯಿಟ್ಟಿದ್ದೀ,
ವಿಷದೊಡನೆ ಮಿಶ್ರವಾದ ಅನ್ನವನ್ನು ಭೋಜನಮಾಡುವವನಂತೆ ದೇವಾಸುರರೊಳಗಾಗಿ ಸೀತಾದೇವಿಯನ್ನಪಹ
ರಿಸಿ ದಕ್ಕಿಸಿಕೊಳ್ಳುವ ಸಮರ್ಥನಿಲ್ಲ, ನಿನ್ನ ಪ್ರಾಣಗಳಿಗೆ ಹಾನಿಬರುವಹಾಗೆ ತಪಸ್ಸಿನಿಂದ ಸಂಪಾದಿಸಿದ ಧರ್ಮ
ವನ್ನು ವ್ಯರ್ಥಮಾಡಿಕೊಳ್ಳುವುದು ನ್ಯಾಯವಲ್ಲ, ಸಮಸ್ತವಾದ ದೇವಾಸುರರಿಂದಲೂ ನಿನಗೆ ಲಯವಿಲ್ಲದಹಾಗೆ
ತಪಸ್ಸಿನಿಂದ ಸಂಪಾದಿಸಿದ್ದನ್ನು ನೀನೇ ಬಲ್ಲೆ; ಆ ತಪಸ್ಸಿನ ಫಲಕ್ಕೆ ನೀನೇ ಕಾರಣವಾದವನು, ನೀನು ದೇವಾ
ಸುರಸಮೂಹದಿಂದ ಸಾವಿಲ್ಲದಹಾಗೆ ಬೇಡಿಕೊಂಡೆ, ಸುಗ್ರೀವನು ದೇವಾಸುರ ಮಾನವರೊಳಗೆ ಒಬ್ಬನಲ್ಲ, ಅಂ
ಥಾವನು ನಿನ್ನಮೇಲೆ ದಂಡೆತ್ತಿಬಂದು ಯುದ್ಧಮಾಡಿದರೆ ನಿನ್ನ ಪ್ರಾಣಗಳನ್ನುಳಿಸಿಕೊಳ್ಳುವ ಉಪಾಯವೇ
ನು! ಪೂರ್ವದಲ್ಲಿ ಮಾಡಿದ ಧರ್ಮವು ಈಗ ಮಾಡುವ ಅಧರ್ಮಫಲವನ್ನು ಕೆಡಿಸುವದೆಂದೆಣಿಸಬೇಡ, ಧರ್ಮ
ವು ಧರ್ಮಫಲವನ್ನು ಕೊಡುವಹಾಗೆಯೇ ಅಧರ್ಮವೂ ತನ್ನ ಫಲವನ್ನು ಅನುಭವಮಾಡಿಸದೆ ಬಿಡದು, ನೀನು
ಪೂರ್ವದಲ್ಲಿ ಮಾಡಿದ ಅಪರಿಮಿತವಾದ ಧರ್ಮಫಲವನ್ನು ಅನುಭವಿಸುತಿದ್ದೆ; ಈಗ ಮಾಡಿದ ಅಧರ್ಮಫಲವನ್ನು
ಶೀಘ್ರದಲ್ಲೇ ನೀನು ಅನುಭವಿಸಲುಳ್ಳವನು; ಈ ಅರ್ಥದಲ್ಲಿ ಸಂಶಯವಿಲ್ಲ; ನಿನ್ನ ಕಾರ್ಯಸ್ಥಿತಿಯನ್ನು ವಿಚಾರಿಸು;
ಜನಸ್ಥಾನದಲ್ಲಿ ಬಹುಮಂದಿ ರಾಕ್ಷಸರನ್ನೂ ಆಮೇಲೆ ವಾಲಿಯನ್ನೂ ಕೊಂದು ರಘುನಾಥನು ಸುಗ್ರೀವನೊಡನೆ
ಮಿತ್ರತ್ವಮಾಡಿಕೊಂಡಿರುವದನ್ನು ತಿಳಿದು ನಿನಗೆ ಹಿತವಾದ ಕಾರ್ಯವನ್ನು ಯೋಚಿಸು, ನಾನೊಬ್ಬನೇ ನನ್ನ
ಮನಸ್ಸುಬಂದಂತೆ ಅನೇಕ ಕುದುರೆ ರಥ ಸಹಿತವಾದ ಈ ಪಟ್ಟಣವನ್ನು ನಿರ್ನಾಮವಾಗಿ ಮಾಡಲಾಪ್ರವೆನು;
ಇದು ನಿಶ್ಚಯವು, ಶ್ರೀರಾಮನು ಸಮಸ್ತ ಕಪಿನಾಯಕರ ಸಮಕ್ಷಮದಲ್ಲಿ ತನ್ನ ದೇವಿಯನ್ನಪಹರಿಸಿಕೊಂಡು
ಹೋದ ಶತ್ರುವನ್ನು ಸಂಹರಿಸದೇ ಬಿಡುವದಿಲ್ಲವೆಂದು ಪ್ರತಿಜ್ಞೆಯನ್ನು ಮಾಡಿ ಇದ್ದಾನೆ; ಸಾಕ್ಷಾತ್ ದೇವೇಂದ್ರ
ನಾದರೂ ಆತನಿಗೆ ಅಪಕಾರವನ್ನು ಮಾಡಿದರೆ ಜೀವವಂತನಾಗಿ ಬದುಕುವದಿಲ್ಲ; ಇನ್ನು ನಿನ್ನಂಥಾವರಪಾಡೇನು!
ಈಗ ನಿನ್ನ ವಶದಲ್ಲಿ ಶರೆಯಿರುವ ಸೀತಾದೇವಿಯನ್ನು ಕೇವಲ ಮನುಷ್ಯಸ್ತ್ರೀಯೆಂದು ತಿಳಿಯಬೇಡ, ಆಕೆಯು
ಲಂಕಾಪಟ್ಟಣವನ್ನು ವಿನಾಶಮಾಡುವ ಕಾಳರಾತ್ರಿಯೆಂದು ತಿಳಿ! ಇನ್ನು ಬಹುಮಾತುಗಳಿಂದ ಕಾರ್ಯವೇನು!
ಸಾಕ್ಷಾತ್ ಯಮಪಾಶವೇ ಸೀತಾದೇವಿಯ ಸ್ವರೂಪವಾಗಿ ಬಂದು ನಿನ್ನ ಕೊರಳನ್ನು ಸುತ್ತಿಕೊಂಡಿದೆಯೆಂದು
ವಿಚಾರಿಸಿ ತಕ್ಕಹಾಗೆ ನಡಿ; ಸೀತಾದೇವಿಯ ತೇಜಸ್ಸಿನಿಂದಲೂ ಶ್ರೀರಾಮನ ಕೋಪಾಗ್ನಿಯಿಂದಲೂ ನಿನ್ನ ಅರ
ಮನೆ ಉಪ್ಪರಿಗೆ ಶಯ್ಯಾಗೃಹ ಮೊದಲಾಗಿ ಲಂಕಾಪಟ್ಟಣವು ದಹನವಾಗುವದು, ನಿನ್ನ ಪುತ್ರಮಿತ್ರ ಸ್ತ್ರೀಯ
ರನ್ನೂ ಒಡಹುಟ್ಟಿದವರನ್ನೂ ಭೋಗಗಳನ್ನೂ ಲಂಕಾಪಟ್ಟಣವನ್ನೂ ನಾಶವನ್ನೈದಿಸಬೇಡ! ಎಲೈ ರಾಕ್ಷಸೇ
ಶ್ವರನೆ, ಶ್ರೀರಾಮನ ದೂತನಾದ ನನ್ನ ಮಾತನ್ನು ಕೇಳಿ ಸತ್ಯವೆಂದೇ ತಿಳಿ; ಪರಮಪುರುಷಾವತಾರನಾಗಿ ಮಹಾ
ತ್ಮನಾದ ರಘುನಾಥನು ಚರಾಚರಾತ್ಮಕವಾದ ಸಮಸ್ತ ಲೋಕಗಳೆಲ್ಲವನ್ನೂ ಸಂಹರಿಸಿ ತಿರಿಗೂ ಸೃಷ್ಟಿಸುವದಕ್ಕ
ಸಮರ್ಥನು; ದೇವಾಸುರ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷ ಗರುಡ ಗಂಧರ್ವ ನಾಗಾದಿ ಸಮಸ್ತ ಪ್ರಾಣಿ
ಗಳಲ್ಲಿಯೂ ಶ್ರೀರಾಮನಿಗೆ ಸರಿಯಾದವರು ಮೊದಲು ಇದ್ದವರಲ್ಲಿಯೂ ಇಲ್ಲ; ಮುಂದೆ ಹುಟ್ಟುವವರಲ್ಲಿಯೂ
ಕಾಣುವದಕ್ಕೆ ಶಕ್ಯವಲ್ಲ; ಸಾಕ್ಷಾತ್ ಪರಮಪುರುಷ ಸ್ವರೂಪನಾಗಿ ಸಮಸ್ತ ಲೋಕನಾಯಕನಾದ ವಿಷ್ಣು
ವಿಗೆ ಸಮಾನವಾದ ಪರಾಕ್ರಮವುಳ್ಳ ಶ್ರೀರಾಮನ ಕೂಡೆ ವಿರೋಧವನ್ನು ಮಾಡಿಕೊಂಡಿರುವ ನಿನಗೆ ಜೀವಿ
ರುವುದು ದುರ್ಲಭವು! ಎಲೈ ರಾಕ್ಷಸೇಶ್ವರನೆ, ದೇವ ದಾನವ ಗಂಧರ್ವ ಯಕ್ಷ ಕಿನ್ನರ ಕಿಂಪುರುಷಾದಿಗಳಲ್ಲಿ

ಯಾರೂ ಆತನ ಇದಿರಾಗಿ ನಿಲ್ಲುವವರಿಲ್ಲ, ಶ್ರೀರಾಮನು ಕೊಲ್ಲುವದಕ್ಕೆಣಿಸಿದಾಗ ದೇವಾಸುರರಾದರೂ ಬಿಡಿಸಿ ಕೊಳ್ಳುವದಕ್ಕೆ ಸಮರ್ಥರಲ್ಲ; ಹ್ಯಾಗೆಂದರೆ.

"ಬ್ರಹ್ಮಾಸ್ವಯಂಭೂಶ್ಚತುರಾನನೋವಾ । ರುದ್ರಸ್ತ್ರಿನೇತ್ರಸ್ತ್ರಿಪುರಾಂತಕೋವಾ ॥
ಇಂದ್ರೋಮಹೇಂದ್ರಸ್ಸುರನಾಯಕೋವಾ । ತ್ರಾತುಂನಶಕ್ತಾಯುಧಿರಾಮವಧ್ಯಂ ॥

"ಬ್ರಹ್ಮಾಸ್ವಯಂಭೂಶ್ಚತುರಾನನೋವಾ ಎಂಬ ಬ್ರಹ್ಮವಾಚಕವಾದ ಮೂರು ಪದಗಳಲ್ಲಿ ಬ್ರಹ್ಮ ಅಂದರೆ: ಸರ್ವವ್ಯಾಪಕನು; ಸ್ವಯಂಭೂ ಅಂದರೆ: ಕಾರಣಾಂತರರಹಿತನು, ಚತುರಾನನ ಅಂದರೆ. ನಾಲ್ಕುಮುಖಗಳಿಂದ ಕಾರ್ಯವನ್ನು ನಿರ್ವಾಹಮಾಡುವನು! ರುದ್ರಸ್ತ್ರಿನೇತ್ರ ಸ್ತ್ರಿಪುರಾಂತಕೋವಾ ಎಂಬ ಮೂರು ಶಬ್ದಗಳಲ್ಲಿ ರುದ್ರ ಅಂದರೆ, ಭಕ್ತಜನರ ದುಃಖವನ್ನು ಪರಿಹರಿಸುವವನು; ತ್ರಿನೇತ್ರ ಅಂದರೆ. ಸೂರ್ಯಚಂದ್ರಾಗ್ನಿರೂಪಗಳಾದ ಮೂರು ನೇತ್ರಗಳುಳ್ಳವನು, ತ್ರಿಪುರಾಂತಕ ಅಂದರೆ. ತ್ರಿಪುರರಾಕ್ಷಸರ ಸಂಹಾರಕನು! ಇಂದ್ರೋಮಹೇಂದ್ರಸ್ಸುರನಾಯಕೋವಾ ಎಂಬ ಮೂರು ಶಬ್ದಗಳಲ್ಲಿ ಇಂದ್ರ ಅಂದರೆ. ಪರಮೈಶ್ವರ್ಯಯುಕ್ತನು, ಮಹೇಂದ್ರ ಅಂದರೆ: ದುರ್ಘಟವಾದ ಪರಾಕ್ರಮವುಳ್ಳ ವೃತ್ರಾಸುರನನ್ನು ಕೊಂದವನು, ಸುರನಾಯಕ ಅಂದರೆ; ಸಮಸ್ತ ದೇವತಾಧಿಪತಿಯಾದ ವಜ್ರಾಯುಧಪಾಣಿಯು! ತ್ರಾತುಂನಶಕ್ತಾಯುಧಿರಾಮವಧ್ಯಂ ಅಂದರೆ; ಇಂಥಾ ಅಪರಿಮಿತವಾದ ಪರಾಕ್ರಮವುಳ್ಳ ದೇವತೆಗಳಾದರೂ ರಣರಂಗದಲ್ಲಿ ಶ್ರೀರಾಮನು ಕೊಲ್ಲುತ್ತಿರುವವನನ್ನು ಸಂರಕ್ಷಿಸುವದಕ್ಕೆ ಸಮರ್ಥರಲ್ಲ!" ಎಂದು ನುಡಿದನು.

## ೫೦ ನೇ ಅಧ್ಯಾಯ.

### ವಿಭೀಷಣನು ಹನುಮಂತನನ್ನು ಕೊಲ್ಲದಹಾಗೆ ರಾವಣನಿಗೆ ನೀತಿ ಹೇಳಿದ್ದು.

ಈಪ್ರಕಾರದಲ್ಲಿ ಹನುಮಂತನು ದೈನ್ಯದಿಂದಲೂ ರಮಣೀಯವಾದ ಶಬ್ದಾರ್ಥಗಳಿಂದಲೂ ಸ್ಪಷ್ಟವಾಗಿ ನುಡಿಯಲು ರಾವಣನು ಅತ್ಯಂತ ಕೋಪಯುಕ್ತನಾಗಿ ಕಣ್ಣುಗಳನ್ನು ತಿರುಗಿಸುತ ತನ್ನ ಪ್ರಧಾನರನ್ನು ಕರದು ಹನುಮಂತನಿಗೆ ಆಜ್ಞೆಯನ್ನು ಮಾಡಲು ಅಪ್ಪಣೆ ಕೊಟ್ಟನು. ಆಗ ವಿಭೀಷಣನು ಕಾರ್ಯಸ್ಥಿತಿಯನ್ನು ಚಿಂತಿಸಿ ಆಜ್ಞೆಯನ್ನು ಮಾಡಬಾರದೆಂದು ಹೇಳಿದರೆ ಬಹುದುರಾಗತಕಾರ್ಯವನ್ನು ಮಾಡಿದ ಹನುಮಂತನಮೇಲೆ ರಾವಣನು ಕೋಪಯುಕ್ತನಾಗಿದ್ದದ್ದರಿಂದ ಅದು ಸಮಯವಲ್ಲವೆಂದು ಕ್ಷಣಮಾತ್ರವು ಸುಮ್ಮನಿದ್ದು ಕಾರ್ಯಗಳ ಗುರು ಲಘುಗಳನ್ನು ಯೋಚಿಸಿಕೊಂಡು ರಾವಣನ ಕೋಪವು ತಗ್ಗಾಗುವಾಗ ಹನುಮಂತನಿಗೆ ಆಜ್ಞೆಮಾಡಬಾರದೆಂದು ಒಡಂಬಡಿಕೆ ಹೇಳುವದೇ ಕಾರ್ಯವೆಂದು ನಿಶ್ಚಯಿಸಿಕೊಂಡು ರಾವಣನನ್ನು ಸಂತವಿಡುತ ಕಾಲೋಚಿತವಾದ ನುಡಿಜಾಣ್ಮೆಯಿಂದ "ಎಲೈ ರಾವಣೇಶ್ವರಾ, ಕೋಪವನ್ನು ಸ್ವಲ್ಪ ಕ್ಷಮಿಸಿಕೊಂಡು ಪ್ರಸನ್ನನಾಗು, ಮುಖ ತಿರುಗಿ ನೋಡು; ನನ್ನದೊಂದು ಮಾತನ್ನು ಲಾಲಿಸಿ ಕೇಳು; ಸತ್ಪುರುಷರಾದ ಧೊರೆಗಳು ಪರಸ್ಥಳದಿಂದ ಬಂದ ದೂತರನ್ನು ಕೊಲ್ಲರು; ದೂತರನ್ನು ಹಿಂಸೆಮಾಡುವುದು ಧರ್ಮವಿರುದ್ಧವಲ್ಲದೆ ಲೋಕವಿರುದ್ಧವಾಗಿರುವುದು; ಈ ಕಪಿಯನ್ನು ಕೊಲ್ಲುವುದು ನಿನಗೆ ಉಚಿತವಲ್ಲ, ನೀನು ಧರ್ಮಜ್ಞನು; ಸಮಸ್ತ ಧರ್ಮರಹಸ್ಯವನ್ನೂ ಬಲ್ಲವನು; ಪರರು ಮಾಡಿದ ಉಪಕಾರವನ್ನು ಮರೆಯದವನು; ಸಮಸ್ತ ಪ್ರಾಣಿಗಳ ತಾರತಮ್ಯಗಳನ್ನೂ ಬಲ್ಲವನು, ನಿನ್ನಂಥಾವನು ಅವಿವೇಕದಿಂದ ದೋಷಕ್ಕೊಳಗಾದರೆ ಕೀರ್ತಿಯು ವ್ಯರ್ಥವಾಗುವದು; ಆದಕಾರಣ, ಎಲೈ ರಾಕ್ಷಸೇಶ್ವರನೆ, ನೀನು ಯುಕ್ತಾಯುಕ್ತಗಳನ್ನು ವಿಚಾರಿಸಿ ಈ ದೂತನಿಗೆ ದಂಡನೆಯನ್ನು ಮಾಡಿಸು" ಎಂದು ನುಡಿದನು.

ಆ ಮಾತುಗಳನ್ನು ಕೇಳಿ ರಾವಣನು ಅತ್ಯಂತ ರೋಷಯುಕ್ತನಾಗಿ "ಎಲೈ ವಿಭೀಷಣನೇ ಕೇಳು; ಪಾಪಿಗಳನ್ನು ಕೊಂದವರಿಗೆ ಪಾಪವಿಲ್ಲ; ಆದಕಾರಣ ಪಾಪವನ್ನು ಮಾಡಿದ ಹನುಮಂತನನ್ನು ಕೊಲ್ಲದೇ ಬಿಡೆನು" ಎಂದು ನುಡಿದನು.

ದುರ್ಜನರಿಂದ ನುಡಿಯಲು ಯೋಗ್ಯವಾಗಿ ಬಹುದೋಷಗಳಿಗೆ ಆಸ್ಪದವಾಗಿ ಅಧರ್ಮಸಾಧನವಾದ ರಾವಣನ ಮಾತನ್ನು ಕೇಳಿ ಸಮಸ್ತ ಧರ್ಮಾತ್ಮರಿಗೂ ಉತ್ತಮನಾಗಿ ಬುದ್ಧಿಸಂಪನ್ನನಾದ ವಿಭೀಷಣನು ಪರಮಾರ್ಥ ತತ್ವ ವಿಚಾರಸಾಧನವಾದ ಮಧುರ ವಾಕ್ಯಗಳಿಂದ "ಎಲೈ ಲಂಕಾಧಿಪತಿಯಾದ ರಾವಣೇಶ್ವರನೆ, ಧರ್ಮಾರ್ಥಸಾಧನವಾದ ನನ್ನದೊಂದು ಮಾತನ್ನು ಕೇಳು: ಸತ್ಪುರುಷರಾದವರು ಪರರಾಜ್ಯದಿಂದ ಬಂದ ದೂತರನ್ನು ಕೊಲ್ಲಬಾರದೆಂದು ಪ್ರಸಂಗಕಾಲಗಳಲ್ಲಿ ನೀನೇ ಹೇಳುತಿರುವೆ, ಕಾರ್ಯಸ್ಥಿತಿಯನ್ನು ನೋಡಿದರೆ ಈತನು ನಮಗೆ ಬಲವಂತನಾದ ಶತ್ರುವೆಂಬುದರಲ್ಲಿ ಸಂಶಯವಿಲ್ಲ, ಈತನು ನಮಗೆ ಮತ್ಯಾರೂ ಮಾಡದ ಅಪಕಾರವನ್ನು ಮಾಡಿದನು, ಹಾಗಾದರೂ ದೂತರನ್ನು ಕೊಲ್ಲಬಾರದು; ಅವರ ಅಪರಾಧಾನುಸಾರವಾಗಿ ಅನೇಕಪ್ರಕಾರವಾದ ದಂಡನೆಗಳುಂಟು ಅಂಗ ವಿಕಾರಮಾಡುವದೊಂದು, ಚಬುಕಿನಿಂದ ಹೊಡಿಸುವದೊಂದು, ಮುಂಡನಮಾಡುವದೊಂದು, ಸಂದಿಗಳಲ್ಲಿ ತಿವಿಯಿಸುವದೊಂದು—ಇವು ಮೊದಲಾದ ದಂಡನೆಗಳನ್ನು ಮಾಡುವದಲ್ಲದೆ ಆಜ್ಞೆಮಾಡುವದನ್ನೆಲ್ಲಿಯೂ ಕಂಡದಿಲ್ಲ! ಎಲೈ ರಾವಣೇಶ್ವರಾ, ಧರ್ಮಾರ್ಥರಹಸ್ಯಗಳನ್ನರಿತು ಸರ್ವಜ್ಞನಾದ ನಿನ್ನಂಥಾವನು ದೂತರಮೇಲೆ ಕೋಪಿಸುವದ್ಯಾವ ಕಾರ್ಯವು! ಸತ್ವಬಲಸಂಪನ್ನರಾದರೂ ಕ್ಷುದ್ರವಿಷಯಗಳಲ್ಲಿ ಕೋಪಮಾಡರು, ಧರ್ಮಶಾಸ್ತ್ರಪ್ರವೀಣರಲ್ಲಿ ನಿನಗೆ ಸರಿಯಾದವರ್ಯಾರು! ಸಮಸ್ತ ದೇವಾಸುರಸಮೂಹಗಳಲ್ಲಿ ನಿನಗಾದರೂ ಉತ್ತಮರಿಲ್ಲ, ಈ ಕಪಿಯನ್ನು ಆಜ್ಞೆ ಮಾಡುವದರಿಂದ ವಿಶೇಷ ಪ್ರಯೋಜನವೇನು! ಈತನಿಗೆ ಮಾಡುವ ಆಜ್ಞೆಯನ್ನು ಈತನನ್ನು ಕಳುಹಿಸಿದವನಿಗೆ ಮಾಡಬೇಕಲ್ಲದೆ ಈತನ ಗುಣಾಗುಣಗಳನ್ನು ವಿಚಾರಿಸ ಕೆಲಸವಿಲ್ಲ, ಬಂದಕಾರ್ಯವನ್ನು ವಂಚನೆಯಿಲ್ಲದೆ ಯಥಾರ್ಥವಾಗಿ ಹೇಳಿದ ದೂತನನ್ನು ಕೊಲ್ಲಬಾರದು; ಈತನು ಹೊರ್ತಾಗಿ ಖೇಚರಮಾರ್ಗಗಲ್ಲಿ ಸಂಚರಿಸುವ ಸಮರ್ಥರು ಅವರಲ್ಲಿ ಮತ್ತೊಬ್ಬರಿಲ್ಲದ್ದರಿಂದ ಈತನನ್ನು ಕೊಲ್ಲಬಾರದು; ಈಗ ದೇವೇಂದ್ರಾದಿ ದೇವತೆಗಳ ವೃತ್ತಾಂತಗಳನ್ನು ತಿಳಿಯುವದಕ್ಕೆ ಯತ್ನಮಾಡಬೇಕು; ರಾಮಲಕ್ಷ್ಮಣರು ಮಹಾ ದುರುಳರಾಗಿ ಯುದ್ಧಮಾಡಬೇಕೆಂದು ಬಹುಯತ್ನಮಾಡಿಕೊಂಡಿಧಾರೆ, ಹನುಮಂತನಿಲ್ಲದೆ ಅವರು ಇಲ್ಲಿಗೆ ಸಮುದ್ರವನ್ನುದಾಟಿ ಬರಲಾರರು, ಅವರಿಲ್ಲಿಗೆ ಬರದಿದ್ದರೆ ನಾವು ಅವರಕೂಡೆ ಯುದ್ಧಮಾಡಿ ಶತ್ರುಕ್ಷಯವನ್ನು ಮಾಡುವದಕ್ಕೆ ಶಕ್ಯವಲ್ಲ; ಆದಕಾರಣ ಈ ಕಪಿಯನ್ನು ಕೊಲ್ಲಬಾರದು, ಈ ಕಪಿಯನ್ನು ಕೊಲ್ಲುವುದರಿಂದ ನಮಗೆ ಯಾವಕಾರ್ಯವೂ ಸಾಧ್ಯವಾಗುವದಿಲ್ಲವಾದ್ದರಿಂದ ಕೀರ್ತಿಯು ಬರುವದಿಲ್ಲ; ಪ್ರಸಿದ್ಧವಾದ ಲೋಕಾಪವಾದ ಬಂದೇ ಬರುವುದು; ನೀನು ಪರಾಕ್ರಮೋತ್ಸಾಹವುಳ್ಳ ದೇವಾಸುರರಿಗೂ ಅಸಾಧ್ಯನಾದವನು; ಯುದ್ಧವನ್ನು ಮಾಡಬೇಕೆಂಬ ಉತ್ಸಾಹವುಳ್ಳ ವೀರರಾಕ್ಷಸಭಟರ ಉತ್ಸಾಹವನ್ನು ಕೆಡಿಸುವುದು ರಾಜನೀತಿಯಲ್ಲ, ನಿನ್ನ ಸಮೀಪದಲ್ಲಿರುವ ಪಟುಭಟರು ರಾಜಕಾರ್ಯನಿರ್ವಾಹಕರು; ಮಹಾಶೂರರು, ಅನೇಕ ಶೌರ್ಯಗುಣಗಳುಳ್ಳವರಾಗಿ ಸತ್ಕುಲದಲ್ಲಿ ಜನಿಸಿದವರು; ಮನೋಹರ್ಷವುಳ್ಳವರು; ಸಮಸ್ತ ಆಯುಧಪಾಣಿಗಳಿಗೂ ಉತ್ತಮರಾದವರು; ಇಂಥಾ ಪಟುಭಟರು ನಿನ್ನ ವಶದಲ್ಲಿ ಅನೇಕ ಕೋಟಿಮಂದಿ ಇಧಾರೆ! ಎಲೈ ರಾವಣೇಶ್ವರನೆ, ಇಂಥಾ ನಿನ್ನ ಪಟುಭಟರನ್ನು ಕಳುಹಿಸಿದರೆ ಅವರು ನಿನ್ನ ಪ್ರಭಾವವನ್ನು ಪರರಾಜ್ಯದಲ್ಲಿ ಪ್ರಕಟಮಾಡಿ ಮೂಢರಾದ ರಾಮಲಕ್ಷ್ಮಣರನ್ನು ಹಿಡಿತರುವರು" ಎಂದು ಬಡಂಬಡಿಕೆಯನ್ನು ಹೇಳುತಿದ್ದನು.

---

## ೫೩ನೇ ಅಧ್ಯಾಯ

### ರಾವಣನು ಹನುಮಂತನ ಬಾಲಕ್ಕೆ ಬೆಂಕಿ ಹತ್ತಿಸಿದ್ದು.

ಆ ಬಳಿಕ ರಾವಣನು ವಿಭೀಷಣನು ದೇಶಕಾಲಗಳನ್ನರಿತು ತನಿಗೆ ಬುದ್ಧಿಹೇಳಿದನೆಂದೂ ಅದು ತನಿಗೆ ಹಿತೋಪದೇಶವಲ್ಲದೆ ಮತ್ತೊಂದಲ್ಲವೆಂದೂ ವಿಚಾರಿಸಿ ಹರ್ಷದಿಂದ ವಿಭೀಷಣನನ್ನು ಕುರಿತು "ಎಲೈ ವಿಭೀಷಣನೆ, ನೀನು ಹೇಳಿದ ಮಾತು ಸತ್ಯವು; ದೂತರ ಕೊಲೆಯು ಲೋಕದಲ್ಲಿ ನಿಷಿದ್ಧವು, ಈ ಕಪಿಗೆ ಪ್ರಾಣಹಿಂಸೇ ಹೊರ್ತಾಗಿ ಮತ್ತೊಂದಾಜ್ಞೆಯನ್ನು ಅವಶ್ಯವಾಗಿ ಮಾಡಬೇಕು; ಕಪಿಗಳಿಗೆ ಬಾಲವೇ ಮುಖ್ಯವಾದ ಭೂಷಣವು; ಆದ್ದ

ಲಿಂದ ಇವರ ಬಾಲವನ್ನು ಸುಟ್ಟುಬಿಟ್ಟರೆ ಮೋಟುಬಾಲವುಳ್ಳವನಾಗಿ ಮಹಾ ದೈನ್ಯಭಾವದಿಂದ ತನ್ನ ಊರಿಗೆ ಹೋದರೆ ಬಂಧುವರ್ಗ ಮಿತ್ರವರ್ಗ ಸಮ್ಬಂಧಿ ಜ್ಞಾತಿ ಮೊದಲಾದವರು ನೋಡಿ ಹಾಸ್ಯಮಾಡುವರು, ಆದ್ದರಿಂದ ಈತನ ಬಾಲಕ್ಕೆ ವಸ್ತ್ರಗಳನ್ನು ಸುತ್ತಿ ಎಣ್ಣೆಹುಯಿದು ಅಗ್ನಿಜ್ವಾಲೆಯಲ್ಲಿ ಹತ್ತಿಸಿ ತೋಳನ್ನು ಕಟ್ಟಿ ಹಿಡಿದು ಕೊಂಡು ಕೇರಿಕೇರಿಯಲ್ಲಿಯೂ ತಿರಿಗಿಸಿಕೊಂಡು ಬರಲೀ'' ಎಂದು ನುಡಿದು ಅದೇಪ್ರಕಾರಕ್ಕೆ ಆಜ್ಞಾಪಿಸಿದನು. ಆ ಬಳಿಕ ಕ್ರೂರಕರ್ಮಿಗಳಾದ ಕಲವು ರಾಕ್ಷಸರು ಲಂಕಾಪಟ್ಟಣದಲ್ಲಿದ್ದ ಜೀರ್ಣವಸ್ತ್ರಗಳನ್ನು ತಂದು ಹನುಮಂತನ ಬಾಲಕ್ಕೆ ಸುತ್ತಿ ಆ ಬಾಲವು ಒಣಗಿದ ವನವನ್ನು ದಹಿಸುವ ಯಜ್ಞೇಶ್ವರನಂತೆ ಹೊತ್ತುಹೊತ್ತಿಗೂ ಹೆಚ್ಚುತ್ತಿರಲು ಮತ್ತು ಅರುವೆಗಳನ್ನು ತಂದು ಸುತ್ತಿ ಎಣ್ಣೆಯಿಂದ ನೆನೆಯಿಸಿ ಅಗ್ನಿಜ್ವಾಲೆಯಿಂದ ಹತ್ತಿಸಿದರು, ಆಗ ಹನುಮಂತನು ಉರಿಯುತಿದ್ದ ಬಾಲದಿಂದ ಸಮೀಪದಲ್ಲಿದ್ದ ರಾಕ್ಷಸರನ್ನು ಕೆಡಹಿ ಅತ್ಯಂತ ಕೋಪಯುಕ್ತನಾಗಿ ಎಳೇ ಬಿಸಲುಕಾಂತಿಯಿಂದ ಸುತ್ತುವರಿಯಲ್ಪಟ್ಟ ಬಾಲಸೂರ್ಯನಂತೆ ಒಪ್ಪುತಿದ್ದನು! ಆ ರಾಕ್ಷಸರು ಅತ್ಯಂತ ಸಂತೋಷದಿಂದ ನೋಡುತಿದ್ದರು! ಆಗ ರಾಕ್ಷಸರಿಂದ ಕಟ್ಟಿ ಹಿಡಿಯಲ್ಪಟ್ಟ ಹನುಮಂತನು ತನ್ನ ಮನಸ್ಸಿನಲ್ಲಿ ತತ್ಕಾಲೋಚಿತವಾಗಿ ''ಈಗ ಕಟ್ಟಲ್ಪಟ್ಟಿದ್ದರೂ ರಾಕ್ಷಸರು ನನ್ನನ್ನು ಬಾಧೆಪಡಿಸುವುದಕ್ಕೆ ಸಮರ್ಥರಲ್ಲ, ಈ ಕಟ್ಟನ್ನು ಬಿಡಿಸಿಕೊಂಡು ನೆಗೆದು ಹೋಗಿ ಈ ಪಟ್ಟಣವೆಲ್ಲವನ್ನೂ ದಹಿಸಿಬಿಟ್ಟೇನು, ನನ್ನ ಸ್ವಾಮಿಯಾದ ರಘುನಾಥನ ಆಜ್ಞೆಯಿಂದ ಆತನಿಗೆ ಹಿತಾರ್ಥವಾಗಿ ಸಂಚರಿಸುತಿರುವ ನನ್ನನ್ನು ರಾಕ್ಷಸರು ಕೊಲ್ಲಲು ಸ್ವಾಮಿಕಾರ್ಯಾರ್ಥವಾಗಿ ಶರೀರವನ್ನು ಬಿಟ್ಟೆನಾದರೆ ನನಗೆ ಪುಣ್ಯಲೋಕವುಂಟಾಗುವದು; ನಾನೊಬ್ಬನೇ ಯುದ್ಧರಂಗದಲ್ಲಿ ಸಮಸ್ತ ರಾಕ್ಷಸರನ್ನೂ ಸಂಹರಿಸಬಲ್ಲೆನು, ಶ್ರೀರಾಮನು ಲಂಕಾಪಟ್ಟಣವು ಸಶೇಷವಾಗಿರುವದನ್ನು ನೋಡಲಿ, ಈ ರಾಕ್ಷಸರು ತಮ್ಮ ಮನಸ್ಸುಬಂದಂತೆ ನನ್ನನ್ನು ಕಟ್ಟಿಹಾಕಲಿ, ನನ್ನ ಬಾಲವನ್ನು ಸುಡಲಿ, ಇವರು ನನಗೆಷ್ಟು ಬಾಧೆಯನ್ನು ಮಾಡಿದರೂ ನನ್ನ ಮನಸ್ಸಿಗೆ ಲೇಶಮಾತ್ರವಾದರೂ ಬಳಲಿಕೆ ಇಲ್ಲ'' ಎಂದು ಯೋಚನೆಮಾಡುತ ರಾಕ್ಷಸರು ತನ್ನನ್ನು ಕಟ್ಟಿ ಭೇರಿ ನಿಸ್ಸಾಳ ಮೊದಲಾದ ವಾದ್ಯಧ್ವನಿಗಳಿಂದ ಬೊಬ್ಬಿಟ್ಟು ಕೂಗುತ ಕುಣಿಯಿಸುತ ಕೇರಿಕೇರಿಗೂ ತಿರುಗಿಸುತಿರಲು ಸಂತೋಷಪಡುತ ಸ್ವಲ್ಪವಾದರೂ ಮನಸ್ಸಿನಲ್ಲಿ ವೇದನೆಯಿಲ್ಲದೆ ಲಂಕಾಪಟ್ಟಣದಲ್ಲಿದ್ದ ವಿಮಾನಗಳನ್ನೂ ಅಲ್ಲಲ್ಲಿ ಒಟ್ಟುಗೂಡಿಕೊಂಡು ನೋಡುತಿದ್ದ ರಾಕ್ಷಸರಿಂದ ಇಟ್ಟಣಿಸಿದ್ದ ಚೌಬೀದಿಗಳನ್ನೂ ರಾಜಬೀದಿಗಳನ್ನೂ ಶೃಂಗಾರಮಂಟಪಗಳನ್ನೂ ಮನೆಗಳನ್ನೂ ನೋಡುತಿದ್ದನು! ಆತನನ್ನು ಕಟ್ಟಿ ಹಿಡಿದುಕೊಂಡು ಹೋಗುತಿದ್ದ ರಾಕ್ಷಸರು ''ರಾಮದೂತನಾದ ಹನುಮಂತನನ್ನು ದಂಡನೆಮಾಡಿ ಕೇರಿಕೇರಿಯಲ್ಲಿಯೂ ಮೆರಗಣೆಮಾಡುತಿದ್ದೇವ!'' ಎಂದು ಸಾರಿಕೊಂಡು ಹೋಗುತಿದ್ದರು.

ಇತ್ತಲ ಅಶೋಕವನದಲ್ಲಿ ಸೀತಾದೇವಿಗೆ ಕಾವಲಾಗಿದ್ದ ರಾಕ್ಷಸಸ್ತ್ರೀಯರು ಆಕೆಗೆ ದುಃಖವನ್ನುಂಟುಮಾಡಬೇಕೆಂದೆಣಿಸಿ ''ಎಲೈ ಸೀತಾದೇವಿಯೆ, ನಿನ್ನ ಕೂಡೆ ಮಾತನಾಡಿಹೋದ ಹನುಮಂತನ ಬಾಲಕ್ಕೆ ವಸ್ತ್ರಗಳನ್ನು ಸುತ್ತಿ ಎಣ್ಣೆಯಲ್ಲದ್ದಿ ಬೆಂಕಿ ಹತ್ತಿಸಿ ಕೇರಿಕೇರಿಗೂ ತಿರುಗಿಸುತಿಧಾರೆ'' ಎಂದು ಹೇಳಿದರು

ಕರ್ಣಕಠೋರವಾದ ಆ ಮಾತನ್ನು ಕೇಳಿ ಸೀತಾದೇವಿಯು ಹನುಮಂತನ ಬಾಲವು ಸುಡದೆ ಇರುವಹಾಗೆ ತನ್ನ ಅಂತರಂಗದಲ್ಲಿ ಯಜ್ಞಪುರುಷನ ಸ್ತೋತ್ರವನ್ನು ಮಾಡುತ ''ನಾನು ಪತಿಶೇವೆಯನ್ನು ಮಾಡಿಕೊಂಡು ಆಹಾರನಿಯಮ ಮಾಡಿಕೊಂಡು ತಪಸ್ಸಿನಲ್ಲಿ ನಿಷ್ಠೆಯುಳ್ಳವಳಾಗಿರುವದೂ ಶ್ರೀರಾಮನು ಏಕಪತ್ನೀವ್ರತವುಳ್ಳವನಾಗಿರುವದೂ ಸತ್ಯವಾದರೆ ಯಜ್ಞಪುರುಷನು ಹನುಮಂತನಿಗೆ ಶೈತ್ಯವಾಗಿ ತೋರಲಿ! ಧೈರ್ಯಪುರುಷನಾದ ಶ್ರೀರಾಮನ ಕೃಪೆಯು ನನಗುಂಟಾಗಿ ಆತನಿಂದ ನನಗಿನ್ನೂ ಭೋಗಾದೃಷ್ಟವಿದ್ದರೆ ಯಜ್ಞಪುರುಷನು ಹನುಮಂತನಿಗೆ ಶೈತ್ಯವಾಗಿ ತೋರಲಿ! ನನ್ನ ಶೀಲಸ್ವಭಾವದಿಂದ ನನಗೆ ಶ್ರೀರಾಮನ ದರ್ಶನಭಾಗ್ಯವುಂಟಾಗುವದೆಂಬ ಪಕ್ಷದಲ್ಲಿ ಯಜ್ಞಪುರುಷನು ಹನುಮಂತನಿಗೆ ಶೈತ್ಯವಾಗಿರಲೀ! ಸತ್ಯಸಂಧನಾದ ಸುಗ್ರೀವನು ನನ್ನನ್ನು ಈ ದುಃಖಸಾಗರವನ್ನು ದಾಟಿಸಿ ರಕ್ಷಿಸುವದು ಯಥಾರ್ಥವಾದರೆ ಯಜ್ಞಪುರುಷನು ಹನುಮಂತನಿಗೆ ಶೈತ್ಯವಾಗಿ ತೋರಲೀ'' ಎಂದು ಪ್ರಾರ್ಥನೆಯನ್ನು ಮಾಡುತಿದ್ದಳು.

ಯಜ್ಞಪುರುಷನು ಪ್ರಸನ್ನನಾಗಿ ಪ್ರದಕ್ಷಿಣಾಕಾರನಾಗಿ ಪ್ರಜ್ವಲಿಸುವ ವ್ಯಾಜದಿಂದ ಹನುಮಂತನಿಗೆ ಶುಭವಾಗುವದೆಂಬ ವೃತ್ತಾಂತವನ್ನು ಸೀತಾದೇವಿಗೆ ಸೂಚನೆ ಮಾಡುತಿದ್ದನೋ ಎಂಬಂತೆ ಪ್ರದಕ್ಷಿಣಾಕಾರವಾದ ಜ್ವಾಲೆಯಿಂದ ಸೀತಾದೇವಿಯು ಕೊಟ್ಟ ಹವಿಸ್ಸನ್ನು ತೆಗೆದುಕೊಳ್ಳುತಿದ್ದನು ; ಆ ಸಮಯದಲ್ಲಿ ಹನುಮಂತನ ತಂದೆಯಾದ ವಾಯುದೇವನು ಸೀತಾದೇವಿಗೆ ಸಹಾಯಮಾಡುವಂತೆ ಅತ್ಯಂತವಾದ ಹಿಮಸಮೂಹಗಳನ್ನು ಕೂಡಿಕೊಂಡು ಬೀಸುತಿದ್ದನು ! ಆಗ ಹನುಮಂತನು "ನನ್ನ ಬಾಲವು ಉರಿಯುತಿದ್ದರೂ ನನಿಗೇನುಕಾರಣ ಉರಿಹತ್ತದಿದೆ ! ಬಾಲವು ಹತ್ತಿಕೊಂಡು ಉರಿಯುವ ಜ್ವಾಲೆಯು ಪ್ರತ್ಯಕ್ಷವಾಗಿ ಕಾಣಿಸುತಿದ್ದರೂ ನನಿಗೆ ಹಿಮಬಂದಂತೆ ಶೈತ್ಯವಾಗಿದೆ ; ನಾನು ಸಮುದ್ರವನ್ನು ಪ್ರಯಾಸವಿಲ್ಲದೆ ದಾಟಿಬರುವಾಗ ಹ್ಯಾಗೆ ಶ್ರೀರಾಮನ ಪ್ರಭಾವವು ಪ್ರಕಟವಾಗಿ ಸಮುದ್ರಮಧ್ಯದಲ್ಲಿ ಮುಳುಗಿದ್ದ ಮೈನಾಕಪರ್ವತವು ನನ್ನನ್ನಿದಿರುಗೊಂಡು ಅನೇಕ ಉಪಚಾರಗಳನ್ನು ಮಾಡಿತೋ ; ಹಾಗೇ ಈಗಲೂ ರಾಮಕಾರ್ಯಾರ್ಥವಾಗಿ ಸಂಚರಿಸುವ ನನಿಗೆ ಹತ್ತಿ ಉರಿಯುವ ಯಜ್ಞಪುರುಷನು ಬಾಧೆಯನ್ನು ಮಾಡದಿಧಾನೆ ; ಇದು ಶ್ರೀರಾಮನ ಮಹಿಮೆಯಾಗಿರಬೇಕು ; ಅಲ್ಲದಿದ್ದರೆ ಸೀತಾದೇವಿಯ ಕೃಪಾಕಟಾಕ್ಷದಿಂದ ಪ್ರಜ್ವಲಿಸುವ ಯಜ್ಞಪುರುಷನು ವೇದನೆಯನ್ನು ಮಾಡದಿರಬೇಕು ; ಅದೂ ಅಲ್ಲದಿದ್ದರೆ ಯಜ್ಞಪುರುಷನು ನನ್ನ ತಂದೆಯಾದ ವಾಯುದೇವನಿಗೆ ಸಖನಾದಕಾರಣ ನನಿಗೆ ಉರಿತಟ್ಟಿಸದೆ ಇಧಾನೋ ಏನೋ ! ಅಗ್ನಿಯಿಂದ ನನಿಗೆ ಬಾಧೆಯಿಲ್ಲದಮೇಲೆ ನನಿಗಿನ್ನೆಲ್ಲಿಹೋದರೂ ಭಯವೇನು !" ಎಂದು ಯೋಚಿಸಿ ಹೊಕ್ಕು ಹೊರಡುವ ರಾಕ್ಷಸರಿಂದ ಇಟ್ಟಣಿಸಲ್ಪಟ್ಟ ಪರ್ವತದ ಕೋಡುಗಲ್ಲಂತೆ ಅತ್ಯಂತ ಉನ್ನತವಾಗಿದ್ದ ಊರುಬಾಗಿಲ ಉಪ್ಪರಿಗೆಯಮೇಲೆ ಹತ್ತಿಕೊಂಡು ತನ್ನ ಶರೀರವನ್ನು ಸೂಕ್ಷ್ಮಾಕಾರವಾಗಿ ಮಾಡಿಕೊಂಡು ಕಟ್ಟುಗಳನ್ನು ಸಡಲಿಸಿಕೊಂಡು ತಿರುಗೂ ತನ್ನ ಶರೀರವನ್ನು ಪರ್ವತಾಕಾರವಾಗಿ ಬೆಳಸಿ ಸಮಸ್ತ ಪುರಜನರೂ ನೋಡುತ್ತಿರಲು ಆ ಊರುಬಾಗಲಿಗೆ ಹಾಕುವ ಕಬ್ಬಿಣದ ಲಾಳವಂಡಿಗೆಯನ್ನು ತೆಗೆದುಕೊಂಡು ತಿರುಗಿಸಿ ಹೊಡೆದು ತನ್ನ ಕೂಡೆ ಮೈಗಾವಲಾಗಿ ಬಂದ ರಾಕ್ಷಸರನ್ನು ಸಂಹರಿಸಿ ಲಂಕಾಪಟ್ಟಣವನ್ನು ನೋಡುತ ಬಹೆದಘೋಯಮಾನವಾಗಿ ಪ್ರಜ್ವಲಿಸುತಿದ್ದ ತುದಿಬಾಲವುಳ್ಳವನಾಗಿ ಸಹಸ್ರ ಕಿರಣಜ್ವಾಲೆಗಳಿಂದ ಬೆಳಗುತಿದ್ದ ಸೂರ್ಯನಂತೆ ಒಪ್ಪುತಿದ್ದನು !

---

## ೫೪ನೇ ಅಧ್ಯಾಯ.

### ಹನುಮಂತನು ಲಂಕಾಪಟ್ಟಣವನ್ನು ದಹಿಸಿದ್ದು

ಆ ಬಳಿಕ ಹನುಮಂತನು ಲಂಕಾಪಟ್ಟಣವನ್ನು ಸುತ್ತಲು ನೋಡಿ "ಇನ್ನು ಇಲ್ಲಿ ಉಳಿದಿರುವ ರಾಕ್ಷಸರಿಗೆ ಉಪದ್ರವವನ್ನು ಮಾಡಬೇಕು ; ಮೊದಲು ಸೀತಾದೇವಿಯನ್ನು ಕಂಡು ಅಶೋಕವನವನ್ನು ಮುರಿದು ಆ ನಿಮಿತ್ತದಿಂದ ಯುದ್ಧಕ್ಕೆ ಬಂದ ರಾಕ್ಷಸರನ್ನು ಸಂಹರಿಸಿ ರಾವಣನ ಬಲಗಳಲ್ಲಿ ಕೆಲವನ್ನು ಕ್ಷಯಮಾಡಿದೆನು , ಇನ್ನು ಲಂಕಾಪಟ್ಟಣವನ್ನು ದಹನಮಾಡುವದೇ ಕಾರ್ಯವು ; ಈ ಪಟ್ಟಣವನ್ನು ನಿರ್ನಾಮವಾಗಿ ಮಾಡಿದರೆ ನನ್ನ ಪ್ರಯಾಸವೆಲ್ಲವು ಸಫಲವಾಗುವದು ; ಅಲ್ಪಯತ್ನದಿಂದಲೇ ಈ ಪಟ್ಟಣವನ್ನು ದಹಿಸುವ ಕಾರ್ಯವು ಸಾಧ್ಯವಾದರೆ ನಾನು ಬಂದ ಕಾರ್ಯವು ಸಾಧ್ಯವಾಗುವದು ; ನನ್ನ ಬಾಲದಲ್ಲಿ ಪ್ರತಿಷ್ಠೆಮಾಡಲ್ಪಟ್ಟ ಯಜ್ಞಪುರುಷನಿಗೆ ಲಂಕಾಪಟ್ಟಣದಲ್ಲಿರುವ ದೊಡ್ಡ ಗೃಹಗಳನ್ನು ಆಹುತಿಯಾಗಿ ಕೊಟ್ಟರೆ ನನ್ನ ಪ್ರಯಾಸವು ಸಫಲವಾಗುವದು" ಎಂದು ವಿಚಾರಿಸಿ ಆ ಪಟ್ಟಣದ ಮನೆಗಳ ಮೇಲೆ ಪ್ರಜ್ವಲಿಸುತಿದ್ದ ಬಾಲವನ್ನೆಳದುಕೊಂಡು ಸಂಚರಿಸುತಿದ್ದನು ; ಒಂದು ಮನೆಯಮೇಲಿಂದ ಮತ್ತೊಂದು ಮನೆಯಮೇಲಕ್ಕೆ ನೆಗೆದು ಆ ಮನೆಗೆ ಕಿಚ್ಚು ತಗಲಿಸುತ ಅಲ್ಲಿಂದ ಒಂದು ಉದ್ಯಾನವನಕ್ಕೆ ಹೋಗಿ ಆ ವನವನ್ನು ದಹಿಸುತ ಆ ವನದಿಂದ ಮತ್ತೊಂದು ಉದ್ಯಾನವನಕ್ಕೆ ಹೋಗಿ ಅದಕ್ಕೆ ಕಿಚ್ಚು ತಗಲಿಸುತ ಈಪ್ರಕಾರದಲ್ಲಿ ಸಮಸ್ತ ರಾಕ್ಷಸರೂ ನೋಡುತ್ತಿರಲು ಭಯವಿಲ್ಲದೆ ಲಂಕಾಪಟ್ಟಣದಲ್ಲಿದ್ದ ಉಪ್ಪರಿ

ಗೆಗಳೆಲ್ಲವನ್ನೂ ದಹನವಮಾಡುತ್ತಿದ್ದನು! ಈ ಮರ್ಯಾದೆಯಲ್ಲಿ ತನ್ನ ತಂದೆಯಾದ ವಾಯುದೇವನನ್ನು ಸಹಾಯ ಮಾಡಿಕೊಂಡು ಮೊದಲು ಪ್ರಹಸ್ತನ ಮನೆಗೆ ಹೋಗಿ ಆತನ ಉಪ್ಪರಿಗೆಗೆ ಕಿಚ್ಚನ್ನು ತಗಲಿಸಿ ಅಲ್ಲಿಂದ ಮಹಾಪಾರ್ಶ್ವನು ವಜ್ರದಂಷ್ಟ್ರನು ಶುಕನು ಸಾರಣನು ಇಂದ್ರಜಿತ್ತು ಜಂಬುಮಾಲಿಯು ಕುಂಭನು ನಿಕುಂಭನು ರಶ್ಮಿಕೇತುವು ಸೂರ್ಯಶತ್ರುವು ಹ್ರಸ್ವಕರ್ಣನು ದಂಷ್ಟ್ರನು ರೋಮಶನು ಯುದ್ಧೋನ್ಮತ್ತನು ಧ್ವಜಗ್ರೀವನು ವಿದ್ಯುಜ್ಜಿಹ್ವನು ಹಸ್ತಿಮುಖನು ಕರಾಳನು ವಿಶಾಲನು ಶೋಣಿತಾಕ್ಷನು ಕುಂಭಕರ್ಣನು ಮಕರಾಕ್ಷನು ಯಜ್ಞಶತ್ರುವು ಬ್ರಹ್ಮಶತ್ರುವು ಮೊದಲಾದ ವೀರವರ್ಗವನ್ನು ಉರಿಯಿಸಿದನು, ವಿಭೀಷಣನ ಮನೆಯು ಒಂದುಹೊರ್ತಾಗಿ ಮಿಕ್ಕ ರಾಕ್ಷಸರ ಮನೆಗಳನ್ನೂ ಆ ಮನೆಗಳಲ್ಲಿದ್ದ ಬೊಕ್ಕಸ ಭಂಡಾರ ವಸ್ತು ವಾಹನ ರತ್ನ ಪಡಿ ಮೊದಲಾದ ಸಮಸ್ತ ಸಾಮಗ್ರಿಯುಗಳನ್ನೂ ದಹಿಸಿ ಆ ಬಳಿಕ ರಾಕ್ಷಸೇಶ್ವರನಾದ ರಾವಣನ ಅರಮನೆಗೆ ಹೋಗಿ ನಾನಾರತ್ನಗಳಿಂದ ಅಲಂಕರಿಸಲ್ಪಟ್ಟು ಸಮಸ್ತ ಮಾಂಗಲ್ಯವಾದ ವಸ್ತುಗಳಿಂದ ಪರಿಪೂರ್ಣವಾಗಿ ಮಹಾಮೇರು ಮಂದರಗಿರಿ ಪರ್ವತಗಳಿಗೆ ಸಮಾನವಾದ ಶಯ್ಯಾಗೃಹದ ಉಪ್ಪರಿಗೆಗೆ ತನ್ನ ಬಾಲದ ಅಗ್ರಭಾಗದಲ್ಲಿದ್ದ ಅಗ್ನಿಯನ್ನು ತಗಲಿಸಿ ಆತನ ಮನೆಯೆಲ್ಲವನ್ನು ದಹಿಸಿ ಪ್ರಳಯಕಾಲದ ಮೇಘವು ಗುಡುಗುವಂತೆ ಗರ್ಜಿಸಿ ತನ್ನ ಬಾಲದಾಗ್ರದಲ್ಲಿದ್ದ ಯಜ್ಞಪುರುಷನನ್ನು ಪ್ರಳಯಕಾಲದ ವಾಯುವಿನೊಡನೆ ಕೂಡಿದ ಪ್ರಳಯಕಾಲಾಗ್ನಿಯೊ ಎಂಬಂತೆ ಹೆಚ್ಚಿಸಿ ಬಾಲವನ್ನು ತಿರುಗಿಸಿ ಸುವರ್ಣಮಯವಾದ ಜಾಳಾಂದರಗಳಿಂದಲೂ ಗವಾಕ್ಷಗಳಿಂದಲೂ ರತ್ನಖಚಿತವಾದ ಶಿಖರಗಳಿಂದಲೂ ರಮಣೀಯವಾದ ಉಪ್ಪರಿಗೆಗಳನ್ನು ದಹಿಸಿದನು, ಆ ಉಪ್ಪರಿಗೆಗಳು ಸಿಡಿದು ಒಡೆದು ಬಿರಿದು ಜರಿದು ಕರಗಿ ಮುರಿದು ಅಂತರಿಕ್ಷಲೋಕದಲ್ಲಿರುವ ಸಿದ್ಧರ ಮನೆಗಳು ಪುಣ್ಯಕ್ಷಯವಾದಮೇಲೆ ಭೂಲೋಕಕ್ಕೆ ಬೀಳುವಂತೆ ಬೀಳುತಿದ್ದವು! ಆ ಸಮಯದಲ್ಲಿ ತಮ್ಮ ಮನೆಗಳಿಗೆ ತಗಲಿದ ಕಿಚ್ಚನ್ನು ಕೆಡಿಸಲಾರದೆ ಓಡುತಿದ್ದ ರಾಕ್ಷಸರ ಕೋಲಾಹಲಧ್ವನಿಗಳು ಗಗನಮಂಡಲಕ್ಕೆ ಕೇಳುತಿದ್ದವು, ತಮ್ಮ ಮಕ್ಕಳನ್ನೆತ್ತಿಕೊಂಡು ಓಡುತ್ತಿರುವ ರಾಕ್ಷಸಸ್ತ್ರೀಯರು ಪ್ರಳಯಕಾಲಾಗ್ನಿಯೇ ಹನುಮಂತನ ರೂಪವಾಗಿ ಬಂತೆಂದು ನುಡಿಯುತ ಓಡಲಾರದೆ ಕಂಗೆಟ್ಟು ತಮ್ಮ ಮಕ್ಕಳನ್ನು ಹಾಕಿಕೊಂಡು ಬೀಳುತ್ತಿದ್ದರು! ಉಪ್ಪರಿಗೆಯಮೇಲಿದ್ದ ರಾಕ್ಷಸಸ್ತ್ರೀಯರು ಉಪ್ಪರಿಗೆಗಳು ಜರಿದು ಬೀಳುತ್ತಿರಲು ಮೇಘಮಂಡಲದಿಂದ ಬೀಳುವ ಮಿಂಚುಗಳಂತೆ ಮಂಡೆಯನ್ನು ಕೆದರಿಕೊಂಡು ಬೀಳುತಿದ್ದರು, ಹನುಮಂತನು ಆ ಉಪ್ಪರಿಗೆಗಳಿಂದ ಬೀಳುವ ವಜ್ರ ಹವಳ ವೈಡೂರ್ಯ ಮುತ್ತಿನ ಸರಗಳನ್ನೂ ಕರಗಿಬೀಳುವ ಚಿನ್ನಬೆಳ್ಳಿಗಳ ತಗುಡುಗಳನ್ನು ನೋಡುತ ತೃಣಸಮೂಹಗಳನ್ನು ಹತ್ತಿ ಉರಿಯುವ ಯಜ್ಞಪುರುಷನು ಹ್ಯಾಗೆ ತೃಪ್ತಿಪಡೆಯನೋ ಹಾಗೆ ತೃಪ್ತಿಪಡೆಯದೆ ಮತ್ತು ಆ ರಾಕ್ಷಸರನ್ನು ಕೊಲ್ಲಬೇಕೆಂದು ಪ್ರಜ್ವಲಿಸುತಿದ್ದ ಲಂಕಾಪಟ್ಟಣವನ್ನು ನೋಡುತಿದ್ದನು! ಆ ಪಟ್ಟಣದೊಳಗೆ ಹನುಮಂತನಿಂದ ಬಿದ್ದ ರಾಕ್ಷಸರಿಲ್ಲದ ಭೂಮಿಯೇ ಇರಲಿಲ್ಲ! ಹನುಮಂತನ ಬಾಲದ ಅಗ್ನಿಯಿಂದ ಸುಡಲ್ಪಟ್ಟ ಲಂಕಾಪಟ್ಟಣವು ಒಂದು ದಿಕ್ಕಿನಲ್ಲಿ ಪುಷ್ಪಿತವಾದ ಮುಳ್ಳುಮುತ್ತುಗದ ಮರದಂತೆಯೂ ಮತ್ತೊಂದು ದಿಕ್ಕಿನಲ್ಲಿ ಕುಸುಮಿತವಾದ ಮುಳ್ಳುಬೂರುಗದ ಮರದಂತೆಯೂ ಒಪ್ಪುತಿತ್ತು; ಈ ಮರ್ಯಾದೆಯಲ್ಲಿ ಮಹಾತ್ಮನಾಗಿ ಅತಿವೇಗವುಳ್ಳ ಹನುಮಂತನಿಂದ ದಹಿಸಲ್ಪಟ್ಟ ಲಂಕಾಪಟ್ಟಣವು ಪರಮೇಶ್ವರನ ಬಾಣಾಗ್ನಿಯಿಂದ ಸುಡಲ್ಪಟ್ಟ ತ್ರಿಪುರದಂತೆ ಒಪ್ಪುತಿತ್ತು! ಲಂಕಾಪಟ್ಟಣವೆಲ್ಲವೂ ದಹನವಾಗಲು ಆ ಪಟ್ಟಣದ ಮಧ್ಯದಲ್ಲಿದ್ದ ತ್ರಿಕೂಟಪರ್ವತವನ್ನು ಸುತ್ತಿಕೊಂಡು ಅಗ್ನಿಜ್ವಾಲೆಯು ಅಂತರಿಕ್ಷಮಾರ್ಗವಾಗಿ ಹೊಳೆಯುತಿತ್ತು! ಯಜ್ಞಪುರುಷನು ರಾಕ್ಷಸರ ಶರೀರವೆಂಬ ಆಜ್ಯದಿಂದ ಹೆಚ್ಚಿ ಹೊಗೆಯಿಲ್ಲದೆ ಒಂದೇ ಬಾರು ಉದಯಿಸಿದ ಕೋಟಿಮಂದಿ ಸೂರ್ಯರ ತೇಜಸ್ಸುಳ್ಳವನಾಗಿ ಪಟ್ಟಣವೆಲ್ಲವನ್ನೂ ಬಳಸಿಕೊಂಡು ಪ್ರಜ್ವಲಿಸುತ ಸಿಡಿಲಧ್ವನಿಯನ್ನನುಕರಿಸುವ ತನ್ನ ಜ್ವಾಲೆಯ ಚಟಚಟತ್ಕಾರಧ್ವನಿಗಳಿಂದ ಬ್ರಹ್ಮಾಂಡವೆಲ್ಲವನ್ನು ಒಡೆಯುತ್ತಾನೋ ಎಂಬಂತೆ ಅಂತರಿಕ್ಷಲೋಕಪರ್ಯಂತವೂ ಹೆಚ್ಚಿ ಅತ್ಯಂತ ಉಷ್ಣವುಳ್ಳವನಾಗಿ ಮುಳ್ಳುಮುತ್ತುಗದ ಹುವ್ವಿನ ಅಗ್ರಭಾಗದಂತೆ ಒಪ್ಪುತ್ತಿದ್ದನು! ಮತ್ತೊಂದು ದಿಕ್ಕಿನಲ್ಲಿ ಶಾಂತವಾಗಿ ಅಲ್ಪಹೊಗೆಯುಳ್ಳವನಾಗಿ ಕನ್ನೈದಿಲು ಪುಷ್ಪಗಳಂತೆ ಒಪ್ಪುತಿದ್ದನು! ಅಲ್ಲಲ್ಲಿ ರಾಕ್ಷಸರು ಹನುಮಂತನನ್ನು ನೋಡಿ "ಕಟಕಟಾ! ಈತನು

ಸರ್ವಲೋಕಕ್ಕೆ ಒಡೆಯನಾಗಿ ಚತುರ್ಮುಖನಾದ ಆದಿಬ್ರಹ್ಮನೋ! ಸಮಸ್ತ ದೇವತೆಗಳಿಗೂ ಒಡೆಯನಾಗಿ ಸರ್ವನಿಯಾಮಕನಾಗಿ ವಜ್ರಪಾಣಿಯಾದ ದೇವೇಂದ್ರನೋ! ಸಾಕ್ಷಾತ್ ಯಮನೋ! ವರುಣನೋ! ವಾಯುವೋ! ರುದ್ರನೋ! ಅಗ್ನಿಯೋ! ಸೂರ್ಯನೋ! ಕುಬೇರನೋ! ಚಂದ್ರನೋ! ಅಲ್ಲದೆ ಸಮಸ್ತ ಪ್ರಜೆಗಳಿಗೂ ಕಾಲವು ತುಂಬಲು ಶಿಕ್ಷೆಮಾಡುವ ಕಾಲಸ್ವರೂಪನೋ! ಹಾಗಿಲ್ಲದಿದ್ದರೆ ಇಷ್ಟು ತೇಜಸ್ಸು, ರಾಕ್ಷಸರನ್ನು ನಾಶಮಾಡಬೇಕೆಂಬ ಅತ್ಯಂತವಾದ ಕೋಪಾಟೋಪವೂ ಇವನಿಗೆ ಹ್ಯಾಗೆ ಬಂತು! ಅಲ್ಲದಿದ್ದರೆ ಚಿಂತಿಸಲು ಶಕ್ಯವಲ್ಲದೆ ನಾಶರಹಿತವಾಗಿ ವ್ಯಕ್ತವಲ್ಲದ ರೂಪವುಳ್ಳ ಪರಾತ್ಪರವಸ್ತುವೇ ಈ ಆಕಾರವಾಗಿ ಬಂತೋ!'' ಎಂದು ಒಬ್ಬರಿಗೊಬ್ಬರು ನುಡಿದುಕೊಳ್ಳುತ್ತಿದ್ದರು

ಆ ಸಮಯದಲ್ಲಿ ಉಪ್ಪರಿಗೆಗಳ ಸಹಿತವಾಗಿಯೂ ಉದ್ಯಾನವನಗಳ ಸಹಿತವಾಗಿಯೂ ರಾಕ್ಷಸರ ಸಹಿತವಾಗಿಯೂ ದಹನವಾಗುತ್ತಿದ್ದ ಲಂಕಾಪಟ್ಟಣವನ್ನು ಕಂಡು ಲೋಕನಿವಾಸಿಗಳು ಹನುಮಂತನ ಅದ್ಭುತವಾದ ಚಾರಿತ್ರಕ್ಕೆ ಆಶ್ಚರ್ಯಪಡುತ್ತಿದ್ದರು, ಅತ್ಯಂತ ದೈನ್ಯಭಾವದಿಂದ "ಹಾ ತಂದೆಯೇ! ಹಾ ಮಗನೇ! ಹಾ ಪ್ರಾಣಕಾಂತನೇ!" ನಮ್ಮ ಭೋಗಾದ್ಯಷ್ಟ ಜೀವನವೆಲ್ಲವು ಇಂದಿಗೆ ತೀರಿದವಲ್ಲಾ!" ಎಂದು ಗೋಳಾಡುವ ರಾಕ್ಷಸರ ಕೋಲಾಹಲಧ್ವನಿಯಿಂದ ಅತ್ಯಂತ ಭಯಂಕರವಾಗಿ ಲಂಕಾಪಟ್ಟಣವು ಮಹಾತ್ಮರಾದ ದೇವರ್ಷಿಗಳ ಶಾಪದಿಂದ ಲಯವನ್ನೈದಿತೋ ಎಂಬಂತೆ ತೋರುತ್ತಿತ್ತು! ಹನುಮಂತನು ಅನೇಕ ಉಪ್ಪರಿಗೆ ಮೇಲುಮಚ್ಚು ಶಯ್ಯಾಗೃಹ ಶೃಂಗಾರಮಂಟಪ ಸಹಿತವಾದ ಆ ಪಟ್ಟಣವನ್ನು ದಹಿಸಿ ಅಶೋಕವನವನ್ನು ಮುರಿದು ಅನೇಕ ರಾಕ್ಷಸರನ್ನು ಸಂಹರಿಸಿ ಕೃತಕೃತ್ಯನಾಗಿ ಶ್ರೀರಾಮನ ಧ್ಯಾನವನ್ನು ಮಾಡುತ್ತಿದ್ದನು; ಅಂತರಿಕ್ಷಮಾರ್ಗದಲ್ಲಿ ನೋಡುತ್ತಿದ್ದ ದೇವಾಸುರ ಯಕ್ಷ ರಾಕ್ಷಸ ಕಿನ್ನರ ಕಿಂಪುರುಷ ಗರುಡ ಗಂಧರ್ವ ದೇವರ್ಷಿ ಬ್ರಹ್ಮರ್ಷಿ ಮೊದಲಾದವರು "ಜಯಜಯಾ!" ಎಂದು ಹನುಮಂತನನ್ನು ಕೊಂಡಾಡುತ್ತಿದ್ದರು.

---

## ೫೫ನೇ ಅಧ್ಯಾಯ.

### ಹನುಮಂತನು ಸೀತಾದೇವಿಗಾಗಿ ಚಿಂತಿಸಿದ್ದು.

ಈ ಮರ್ಯಾದೆಯಲ್ಲಿ ಹನುಮಂತನು ಅಶೋಕವನವನ್ನು ಮುರಿದು ಯುದ್ಧಕ್ಕೆ ಬಂದ ರಾಕ್ಷಸರನ್ನು ಕೊಂದು ಅತಿಭಯಂಕರವಾದ ಲಂಕಾಪಟ್ಟಣವನ್ನು ದಹಿಸಿ ಬೊಬ್ಬಿಟ್ಟು ಕೂಗುತ ತನ್ನನ್ನು ನೋಡಿ ಸಮಸ್ತ ಪ್ರಾಣಿಗಳೂ ಬೆದರಿ ಕಂಗೆಡಲು ಲಂಕಾಪಟ್ಟಣವನ್ನು ಸುಟ್ಟ ಮೇಲೆ ಉರಿಯುತ್ತಿದ್ದ ಬಾಲವನ್ನು ಸಮುದ್ರದಲ್ಲಿ ಅದ್ದಿ ಅಗ್ನಿಯನ್ನು ಶಾಂತಮಾಡಿಕೊಂಡು ತನ್ನ ಬಾಲದಾಗ್ರದಲ್ಲಿದ್ದ ಅಗ್ನಿಯಿಂದ ದಹಿಸಲ್ಪಟ್ಟ ಊರುಬಾಗಲು ಸಹಿತವಾದ ಲಂಕಾಪಟ್ಟಣವನ್ನು ನೋಡಿ ಮನಸ್ಸಿನಲ್ಲಿ ಬಹು ವೇದನೆ ಹುಟ್ಟಲು "ಕಟಕಟಾ! ಈ ಪಟ್ಟಣವನ್ನು ಸುಟ್ಟು ಏನು ಕೃತ್ಯವನ್ನು ಮಾಡಿದೆನು! ಲೋಕದಲ್ಲಿ ಮಹಾತ್ಮರು ಉರಿಯುವ ಕಿಚ್ಚಿಗೆ ನೀರುಹಾಕಿ ಶಮನಮಾಡುವಂತೆ ಕೋಪವನ್ನು ವಿವೇಕದಿಂದ ನಿಗ್ರಹಿಸಿಕೊಳ್ಳುವರು; ಅವರೇ ಸುಕೃತಿಗಳು, ಅವರೇ ಧನ್ಯರು: ಲೋಕದಲ್ಲಿ ಕೋಪಿಸಿಕೊಂಡವನು ಮಹಾ ಪಾಪವನ್ನು ಮಾಡುವನು; ಕೋಪಬಂದಲ್ಲಿ ಗುರುಗಳನ್ನಾದರು ಕೊಲ್ಲುವನು, ಸತ್ಪುರುಷರನ್ನು ನಿಷ್ಠುರ ವಾಕ್ಯಗಳಿಂದ ಧಿಕ್ಕರಿಸಿ ನುಡಿಯುವನು, ನುಡಿಯಬಹುದಾದ ಮಾತನ್ನೂ ನುಡಿಯಬಾರದ ಮಾತನ್ನೂ ಅರಿಯನು, ಯಾರನ್ನಾದರು ನಿಷ್ಠುರವಾಗಿ ನುಡಿಯುವನು; ಕೋಪಿಸಿಕೊಂಡವನು ಕಾರ್ಯಾಕಾರ್ಯವನ್ನು ಅರಿಯನು; ದುರ್ಭಾಷೆಯೆಂದು ತಿಳಿಯನು; ಲೋಕದಲ್ಲಿ ಯಾವ ಪುರುಷನು ಸರ್ಪವು ಜೀರ್ಣವಾದ ಪೊರೆಯನ್ನು ಕಳೆಯುವಂತೆ ಬಂದ ಕೋಪವನ್ನು ತನ್ನ ವಿವೇಕದಿಂದ ಬಿಡುವನೋ ಆತನೇ ಪುರುಷೋತ್ತಮನೆನಿಸಿಕೊಳ್ಳುವನು, ನಾನು ನನ್ನ ದುರ್ಬುದ್ಧಿಯಿಂದ ಸೀತಾದೇವಿ ಇರುವದನ್ನೂ ವಿಚಾರಿಸದೆ ಲಂಕಾಪಟ್ಟಣವನ್ನು ದಹಿಸಿ ಪಾಪ

ಕೊಳ್ಳಗಾಗಿ ಸ್ವಾಮಿಕಾರ್ಯವನ್ನು ಕೆಡಿಸಿದವನಾದೆನು ; ಈ ಪಟ್ಟಣವನ್ನು ದಹಿಸಿದಾಗಲೆ ಆ ಕಿಚ್ಚಿನಿಂದ ಸೀತಾದೇವಿಯೂ ಬೆಂದುಹೋಗಿರಬೇಕು , ಆ ದೇವಿಯು ಹೋದಮೇಲೆ ನನ್ನಸ್ವಾಮಿಯಾದ ರಘುನಾಯಕನ ಕಾರ್ಯವು ಕೆಟ್ಟಿತು ; ನಾನು ಲಂಕಾಪಟ್ಟಣವನ್ನು ಸುಡುವಾಗ ಸೀತಾದೇವಿಯನ್ನು ರಕ್ಷಣೆ ಮಾಡಲಿಲ್ಲ ; ನಾನೀಕಾರ್ಯಕ್ಕೆ ಪ್ರಯಾಸಪಡುವದೆಲ್ಲವು ಸೀತಾದೇವಿಯ ನಿಮಿತ್ತವಾಗಲ್ಲದೆ ಬೇರೊಂದು ಕಾರ್ಯವಿಲ್ಲ ; ಆ ದೇವಿಯೇ ಹೋದಮೇಲೆ ಕಾರ್ಯವು ಕೆಟ್ಟಿತು , ನಾನು ಒಂದು ಕಿಂಚಿನ್ಮಾತ್ರಕಾರ್ಯ ಹೊರ್ತಾಗಿ ಸಮಸ್ತ ಕಾರ್ಯವನ್ನೂ ಸಾಧ್ಯಮಾಡಿದೆನು , ಸೀತಾದೇವಿಯನ್ನು ರಕ್ಷಿಸದೆ ಈ ಪಟ್ಟಣವನ್ನು ದಹನಮಾಡಿದ ಅಜ್ಞಾನದಿಂದ ಕಾರ್ಯವನ್ನು ಮೂಲಕ್ಷಯ ಮಾಡಿದೆನು ; ಲಂಕಾಪಟ್ಟಣದೊಳಗಾಗಿ ಕಿಂಚಿನ್ಮಾತ್ರವನ್ನಾದರೂ ಉಳಸದೆ ಎಲ್ಲವನ್ನು ಭಸ್ಮಮಾಡಿದೆನು ; ಅವಶ್ಯವಾಗಿ ಸೀತಾದೇವಿಯು ಆ ಕಿಚ್ಚಿನಲ್ಲಿ ಶಿಕ್ಕಿ ಶರೀರವನ್ನು ಬಿಟ್ಟಿರಬೇಕು , ಹಾಗೆ ನನ್ನ ದುರ್ಬುದ್ಧಿಯಿಂದ ಸೀತಾದೇವಿಯು ದಹಿಸಲ್ಪಟ್ಟು ಬಂದಕಾರ್ಯಕ್ಕೆ ಹಾನಿಬಂತಾದರೆ ನಾನು ಎಲ್ಲಿ ಪ್ರಾಣವನ್ನು ತೊರೆದುಕೊಳ್ಳುವೆನು ! ಈ ಅಗ್ನಿಯಲ್ಲೇ ಬೀಳಲೇ ! ಅಲ್ಲದಿದ್ದರೆ ಈ ಸಮುದ್ರದಲ್ಲಿ ಬಿದ್ದು ಬಡಬಾಗ್ನಿಯ ಮುಖದಲ್ಲಿ ಶರೀರವನ್ನು ಬಿಡಲೇ ! ಸಮುದ್ರದಲ್ಲಿರುವ ನೆಗಳು ಮೊಸಳೆ ಮೊದಲಾದ ಜಲಚರಪ್ರಾಣಿಗಳಿಗಾದರೂ ನನ್ನ ಶರೀರವನ್ನು ಆಹಾರವಾಗಿ ಕೊಡಬೇಕಲ್ಲದೆ ಜೀವಿಸಬಾರದು ; ನಾನು ಜೀವಸಹಿತ ಹೋಗಿ ಸುಗ್ರೀವನನ್ನು ಹ್ಯಾಗೆ ಕಂಡೇನು ! ಶ್ರೀರಾಮನ ಕಾರ್ಯಕ್ಕೆ ವಿಘಟವನ್ನು ಮಾಡಿ ರಾಮಲಕ್ಷ್ಮಣರನ್ನು ಹ್ಯಾಗೆ ಕಂಡೇನು ! ರೋಷಾದೋಷದಿಂದ ಶ್ರೀರಾಮನ ಕಾರ್ಯವನ್ನು ಕೆಡಿಸಿದಂಥಾ ನನಿಗೆ ಮೂರುಲೋಕಗಳಲ್ಲಿಯೂ ಕಪಿತ್ವವು ಸಿದ್ಧವಾಯಿತು ! ಲೋಕದಲ್ಲಿ ‘ ಹನುಮಂತನು ಸ್ವಾಮಿಕಾರ್ಯವನ್ನು ಕೆಡಿಸಿದನು ’ ಎಂಬ ಅಪಕೀರ್ತಿಗೊಳಗಾದೆನು , ಈ ರಾಕ್ಷಸಕೃತ್ಯವನ್ನು ಮಾಡಿದ ನನ್ನ ಜನ್ಮವನ್ನು ಸುಡಬೇಕು ! ನಾನೆಷ್ಟು ದೊಡ್ಡವನಾದರೂ ಮರವೆಯಿಂದ ಸೀತಾದೇವಿಯನ್ನು ರಕ್ಷಿಸದೆ ಹೋದೆನು ; ಆ ದೇವಿಯು ನಷ್ಟವಾದಪಕ್ಷದಲ್ಲಿ ದುಃಖಾತಿಶಯದಿಂದ ರಾಮ ಲಕ್ಷ್ಮಣರು ನಾಶವನ್ನೈದುವರು , ರಾಮಲಕ್ಷ್ಮಣರು ಹೋದಬಳಿಕ ಸಮಸ್ತ ಬಂಧುಜನಸಹಿತನಾದ ಸುಗ್ರೀವನು ನಾಶವನ್ನೈದುವನು , ಈ ವರ್ತಮಾನವನ್ನು ಕೇಳಿ ಭರತ ಶತ್ರುಘ್ನರು ಒಡಹುಟ್ಟಿದವರ ವಿಪತ್ತಿನ ಶೋಕವನ್ನು ತಾಳಲಾರದೆ ನಾಶವನ್ನೈದುವರು ; ಆಗ ಇಕ್ಷ್ವಾಕುವಂಶವನ್ನೇ ನಿರ್ನಾಮವಾಗಿ ಮಾಡಿದವನಾಗುವೆನು , ಆಮೇಲೆ ಸಮಸ್ತ ಪ್ರಾಣಿಗಳಿಗೂ ಧರ್ಮಿಷ್ಠನಾದ ಅರಸನಿಲ್ಲದೆ ಸಮಸ್ತ ಪ್ರಜೆಗಳೂ ಲಯವನ್ನೈದುವರು ; ಈ ಮರ್ಯಾದೆಯಲ್ಲಿ ಧರ್ಮಾರ್ಥಗಳೆಲ್ಲವನ್ನು ಕೆಡಿಸಿಕೊಂಡು ನಾನು ಭಾಗ್ಯರಹಿತನಾಗಿ ನನ್ನ ರೋಷಾದೋಷದಿಂದ ಸಮಸ್ತಲೋಕ ಕ್ಷಯಕ್ಕೆ ಗುರಿಯಾಗುವೆನು ! ” ಎಂದು ಚಿಂತೆಮಾಡುತ್ತಿದ್ದನು.

ಆ ಸಮಯದಲ್ಲಿ ಪೂರ್ವದಲ್ಲಿ ಸೀತಾದೇವಿಯನ್ನು ಕಾಣದೆ ಚಿಂತೆಮಾಡುತ್ತಿದ್ದ ಸಮಯದಲ್ಲಿ ಕಾರ್ಯಸಿದ್ಧಿಸೂಚಕವಾಗಿ ಆದ ಶುಭನಿಮಿತ್ತಗಳಾಗುತ್ತಿರಲು ಆ ನಿಮಿತ್ತಗಳನ್ನು ಕಂಡು ಹನುಮಂತನು “ ಇದೇನು—ಮೊದಲು ಕಾಣಬಂದ ಶುಭನಿಮಿತ್ತಗಳು ಈಗಲೂ ಆಗುತ್ತವೆ ! ಸೀತಾದೇವಿಯು ತನ್ನ ಮಹಿಮೆಯಿಂದ ರಕ್ಷಿಸಲ್ಪಟ್ಟವಳಾಗಿರಬೇಕು ; ಪತಿವ್ರತಾಶಿರೋಮಣಿಯಾದ ಸೀತಾದೇವಿಯು ಅಗ್ನಿಸ್ವರೂಪವಾದ್ದರಿಂದ ಈ ಅಗ್ನಿಯು ಆಕೆಯನ್ನು ದಹಿಸಲಾರದು ; ಅಪರಿಮಿತ ಮಹಿಮೆಯುಳ್ಳ ಧರ್ಮಾತ್ಮನಾದ ರಘುನಾಥನ ಪಟ್ಟದ ರಾಣಿಯಾದ ಸೀತಾದೇವಿಯನ್ನು ಯಜ್ಞಪುರುಷನು ಮುಟ್ಟಲಾರನು ; ಸೀತಾದೇವಿಯ ಪತಿವ್ರತಾಧರ್ಮದಿಂದಲೂ ಶ್ರೀರಾಮನ ಮಹಿಮೆಯಿಂದಲೂ ಯಜ್ಞಪುರುಷನು ನನ್ನ ಬಾಲವನ್ನು ದಹಿಸಲಿಲ್ಲ ; ಭರತನು ಮೊದಲಾದ ಒಡಹುಟ್ಟಿದವರು ಮಾಡಿದ ಧರ್ಮದಿಂದ ರಘುನಾಯಕನ ಪಟ್ಟದ ರಾಣಿಯಾದ ಸೀತಾದೇವಿಯು ಅಗ್ನಿಜ್ವಾಲೆಯಿಂದ ನಾಶವನ್ನೈದಳು ! ಆ ದೇವಿಯ ಸತ್ಯವಾಕ್ಯಗಳಿಂದಲೂ ಶ್ರೀರಾಮನ ಭಕ್ತಿಯಿಂದಲೂ ಹಿರಣ್ಯನಾಭನೆಂಬ ಪರ್ವತವು ನನಿಗೆ ಸಹಾಯಮಾಡಿದ್ದರಿಂದಲೂ ಅಗ್ನಿಯು ನನಿಗೆ ಸೀತವಾಗಿದ್ದದ್ದರಿಂದಲೂ ಆ ದೇವಿಯ ಮಹಿಮೆಯು ಪ್ರಕಟವಾಯಿತು ; ಅಂಥಾ ದೇವಿಯನ್ನು ಯಜ್ಞಪುರುಷನು ಹ್ಯಾಗೆ ದಹಿಸುವನು ! ” ಎಂದು ಸೀತಾದೇವಿಯ ಮಹಿಮೆಯನ್ನು

ಕೊಂಡಾಡುತ ಅಂತರಿಕ್ಷಮಾರ್ಗದಲ್ಲಿ ಲಂಕಾದಹನವನ್ನು ನೋಡಬೇಕೆಂದು ಬಂದಿದ್ದ ಚಾರಣರೆಂಬ ದೇವತೆಗಳು ಆಡಿಕೊಳ್ಳುತ್ತಿದ್ದ ಮಾತುಗಳನ್ನು ಕೇಳಿದನು. ಆ ಚಾರಣರು "ಕಟಕಟಾ! ಹನುಮಂತನು ಎಂಥಾ ಚತುರನು! ಎಂಥಾ ಪರಾಕ್ರಮಿಯು! ಎಂಥಾ ಸತ್ವಸಾಹಸವುಳ್ಳವನು! ಎಂಥಾ ಪ್ರಾಜ್ಞನು! ಎಂಥಾ ಧೈರ್ಯಗುಣಸಂಪನ್ನನು! ರಾಕ್ಷಸರು ತನ್ನ ಬಾಲಕ್ಕೆ ವಸ್ತ್ರಗಳನ್ನು ಸುತ್ತಿ ತೈಲದಲ್ಲಿ ನೆನೆಯಿಸಿ ಬೆಂಕಿಯನ್ನು ಹತ್ತಿಸಿದರೆ ಬಾಲವನ್ನು ಸುಡುವ ಜ್ವಾಲೆಯನ್ನು ಲೆಕ್ಕಿಸದೆ ತನ್ನ ಬಾಲದ ಅಗ್ನಿಯಿಂದ ಸಮಸ್ತ ಬಲಸಹಿತವಾಗಿ ಉಪ್ಪರಿಗೆ ಮೇಲುಮಚ್ಚು ಸಹಿತವಾದ ಲಂಕಾಪಟ್ಟಣವನ್ನು ದಹಿಸಿ ಸೀತಾದೇವಿಯೊಬ್ಬಳನ್ನು ಉಳಿಸಿದನು, ಇದು ಲೋಕದಲ್ಲಿ ಮಹಾ ಆದ್ಭುತವಾದ ಚಾರಿತ್ರವು!" ಎಂದು ಅಂತರಿಕ್ಷಮಾರ್ಗದಲ್ಲಿ ನುಡಿದುಕೊಳ್ಳುತಿದ್ದರು ಹನುಮಂತನು ಮೊದಲು ಋಷಿಗಳು ಆತನ ಕಾರ್ಯವು ಸಾಧ್ಯವಾಗುವದೆಂದು ಹೇಳಿದ ಮಾತುಗಳಿಂದಲೂ ಆಮೇಲೆ ಲಂಕಾಪಟ್ಟಣವನ್ನು ಸುಟ್ಟು ಸೀತಾದೇವಿಯು ಏನಾದಳೋ ಎಂದು ಚಿಂತೆಮಾಡುತ್ತಿರುವ ಸಮಯದಲ್ಲಿ ಶುಭಸೂಚಕವಾದ ನಿಮಿತ್ತಗಳಿಂದಲೂ ಕಡೆಯಲ್ಲಿ ಅಂತರಿಕ್ಷಮಾರ್ಗದಲ್ಲಿ ಚಾರಣರು ನುಡಿದುಕೊಳ್ಳುತ್ತಿದ್ದ ಮಾತುಗಳಿಂದಲೂ ಸೀತಾದೇವಿಯು ತನ್ನ ಪ್ರಭಾವಾತಿಶಯದಿಂದ ವಿಘ್ನವಿಲ್ಲದೆ ಸುಖವಾಗಿದ್ದಳೆಂದು ನಿಶ್ಚಯಿಸಿ ಅತ್ಯಂತ ಸಂತೋಷಯುಕ್ತನಾದನು, ಹಾಗಾದರು ಆ ದೇವಿಯನ್ನು ಪ್ರತ್ಯಕ್ಷವಾಗಿ ಕಂಡು ಮಾತನಾಡಿ ನಿಶ್ಚಯಿಸಿಕೊಂಡು ಹೋಗಬೇಕೆಂದು ಯೋಚನೆಮಾಡುತ್ತಿದ್ದನು

## ೫೭ನೇ ಅಧ್ಯಾಯ.

### ಹನುಮಂತನು ಲಂಕೆಯಿಂದ ತಿರುಗಿದ್ದು.

ಆಮೇಲೆ ಹನುಮಂತನು ಶಿಂಶುಪಾವೃಕ್ಷದಡಿಯಲ್ಲಿದ್ದ ಸೀತಾದೇವಿಯ ಸಮೀಪಕ್ಕೆ ಬಂದು ವಂದನೆಮಾಡಿ "ಎಲೈ ಸೀತಾದೇವಿಯೇ, ನಾನು ಮಾಡಿದ ಪುಣ್ಯಾತಿಶಯದಿಂದ ವಿಘ್ನವಿಲ್ಲದೆ ಜೀವಸಹಿತವಾಗಿರುವ ನಿನ್ನನ್ನು ಕಂಡೆನು, ಇನ್ನು ಶ್ರೀರಾಮನ ಸಮೀಪಕ್ಕೆ ಹೋಗುತ್ತೇನೆ" ಎಂದು ಕಳುಹಿಸಿಕೊಂಡು ಪ್ರಯಾಣವಾಗಲು ಸೀತಾದೇವಿಯು "ಎಲೈ ಹನುಮಂತನೇ, ನೀನು ಮಹಾಪರಾಕ್ರಮಿಯು; ಅತ್ಯಂತ ಸತ್ವಸಾಹಸವುಳ್ಳವನು, ನೀನೊಬ್ಬನೇ ಈ ಕಾರ್ಯವನ್ನು ಸಾಧ್ಯಮಾಡಬಲ್ಲೆ, ಹಾಗಾದರೂ 'ಶ್ರೀರಾಮನು ಬಂದು ಲಂಕಾಪಟ್ಟಣವನ್ನು ಮುತ್ತಿಗೆ ಹಾಕಿ ರಾವಣನನ್ನು ಸಂಹರಿಸಿ ಸೀತಾದೇವಿಯನ್ನು ಕರೆದುಕೊಂಡು ಹೋದನು' ಎಂಬ ಕೀರ್ತಿಯು ಶ್ರೀರಾಮನಿಗೆ ಉಂಟಾಗಬೇಕು, ಆದಕಾರಣ ಆತನು ದಂಡೆತ್ತಿ ಬಂದು ಲಂಕಾಪಟ್ಟಣವನ್ನು ಮುತ್ತಿಗೆಹಾಕಿ ರಾವಣನನ್ನು ವಧಿಸಿ ನನ್ನನ್ನು ಕರೆದುಕೊಂಡು ಹೋಗುವಹಾಗೆ ಮಾಡು" ಎಂದು ಹೇಳಿದಳು

ಆ ಮಾತನ್ನು ಕೇಳಿ ಹನುಮಂತನು "ಎಲೈ ಸೀತಾದೇವಿಯೇ, ಕಾಕುಸ್ಥಕುಲೋದ್ಭವನಾದ ರಘುನಾಥನು ಲಕ್ಷ್ಮಣಸಮೇತನಾಗಿ ಸುಗ್ರೀವನ ಬಲವನ್ನು ಕೂಡಿಕೊಂಡು ನಿನ್ನ ಮನೋರಥವೆಲ್ಲವನ್ನೂ ಪೂರೈಸಿ ಕರೆದುಕೊಂಡು ಅಯೋಧ್ಯಾಪಟ್ಟಣಕ್ಕೆ ಹೋಗುವನು; ಈ ಅರ್ಥದಲ್ಲಿ ಸಂಶಯವಿಲ್ಲ!" ಎಂದು ಸಂತವಿಟ್ಟು ತನ್ನ ಒಡೆಯನಾಗಿ ಸಮಸ್ತ ಶತ್ರುಸಂಹಾರಕನಾದ ಶ್ರೀರಾಮನ ದರ್ಶನವನ್ನು ಮಾಡಬೇಕೆಂಬ ಬುದ್ಧಿಯಿಂದ ಸಮುದ್ರವನ್ನು ದಾಟಲು ತ್ರಿಕುಟಾಚಲವನ್ನೇರಿದನು! ಅತ್ಯಂತ ಉನ್ನತವಾಗಿ ಅಂತರಿಕ್ಷಲೋಕವನ್ನು ತುಡುಕುತ ಕಪ್ಪಾದ ವನಸಮೂಹಗಳಂತೆ ರಮಣೀಯವಾದಂಥಾದ್ದಾಗಿ ಕೋಡುಗಲ್ಲುಗಳ ಮಧ್ಯಪ್ರದೇಶದಲ್ಲಿ ಎರಗುತಿದ್ದ ಮೇಘಗಳಿಂದ ಉತ್ತರೀಯವನ್ನು ಹೊದ್ದುಕೊಂಡಂತೆಯೂ ಸೂರ್ಯಕಿರಣಗಳೆಂಬ ಕೈಗಳಿಂದ ಹಿತೋಪದೇಶಮಾಡುತಿರುವಂತೆಯೂ ಸೂರ್ಯಕಿರಣಪ್ರಕಾಶದಿಂದ ಹೊಳೆಯುತಿದ್ದ ಗೈರಿಕಾದಿ ಧಾತುಗಳೆಂಬ ಕಣ್ಣುಗಳಿಂದ ಸಮಸ್ತ ಜಗತ್ತಿನವನ್ನೂ ನೋಡುತಿರುವಹಾಗೆಯೂ ಗುಡುಗುತಿದ್ದ ಗಂಭೀರವಾದ ಮೇಘಧ್ವನಿಗಳಿಂದ ಅಧ್ಯಾಯನವನ್ನು ಪಠಿಸುತಿ

ದ್ದಂತೆಯೂ ಜರಿಗಳಲ್ಲಿ ಬೀಳುತ್ತಿದ್ದ ಉದಕಪ್ರವಾಹದಿಂದ ಗಾನವನ್ನು ಮಾಡುತ್ತಿದ್ದಂತೆಯೂ ಬೀಳುತ್ತಿದ್ದ ಉದಕಪ್ರವಾಹಗಳ ಧ್ವನಿಯಿಂದಲೂ ಉನ್ನತವಾದ ದೇವದಾರು ವೃಕ್ಷಗಳಿಂದಲೂ ಕೈಬೀಸಿ ಕರೆಯುತ್ತಿದ್ದಂತೆಯೂ ಕೋಡುಗಲ್ಲುಗಳನ್ನು ತಾಕಿಹೋಗುವ ಮೇಘಗಳ ಚಲನದಿಂದ ಹನುಮಂತನನ್ನು ಕಂಡು ನಡುಗುತ್ತಿದ್ದಂತೆಯೂ ವಾಯುವಿನಿಂದ ಚರಿಸಲ್ಪಟ್ಟ ಬಿದುರುಗಳಿಂದ ತನ್ನ ತಪ್ಪಲಿನಲ್ಲಿ ಕೃತಾರ್ಥರಾಗಿ ಬರುತ್ತಿದ್ದ ಭೋಗಿಜನರನ್ನು ಸೀಳ್ಹಾಕಿ ಕೂಗಿ ಕರೆಯುವಂತೆಯೂ ಮೊರೆಯುವ ಸರ್ಪಗಳಿಂದ ಹನುಮಂತನ ಭಾರವನ್ನು ತಾಳಲಾರದೆ ನಿಟ್ಟುಸಿರುಬಿಡುವಂತೆಯೂ ಇಬ್ಬನಿಕವಿದ ಗಂಭೀರವಾದ ಗುಹೆಗಳಿಂದ ಧ್ಯಾನಮಾಡುತ್ತಿದ್ದಂತೆಯೂ ಮೇಘಮಂಡಲದೋಪಾದಿಯಲ್ಲಿ ಸುತ್ತಲಿದ್ದ ಕಿರುಪರ್ವತಗಳಿಂದ ಭೂಮಿಯೆಲ್ಲವನ್ನು ಆಕ್ರಮಿಸಿದಂತೆಯೂ ತಪ್ಪಲು ಮೇಲುಭಾಗ ಕೋಡುಗಲ್ಲುಗಳಲ್ಲಿ ಎರಗುತ್ತಿದ್ದ ಮೇಘಗಳಿಂದ ಸೂರ್ಯಮಂಡಲವನ್ನು ತಡುಕಬೇಕೆಂದು ಬೆಳೆಯುತ್ತಿದ್ದಂತೆಯೂ ಒಪ್ಪುತ ಅನೇಕ ಕೋಡುಗಲ್ಲುಗಳಿಂದಲೂ ಗುಹೆಗಳಿಂದಲೂ ವೃಕ್ಷಗಳಿಂದಲೂ ಪುಷ್ಪಿತವಾದ ಲತೆಗಳಿಂದಲೂ ನಾನಾಮೃಗಗಳಿಂದಲೂ ಗೈರಿಕಾದಿ ಧಾತುಗಳಿಂದಲೂ ರಮಣೀಯವಾದ ಕಲ್ಲರೆಗಳಿಂದಲೂ ಮಹಾಋಷಿಗಳಿಂದಲೂ ಕಿನ್ನರ ಕಿಂಪುರುಷಾದಿಗಳಿಂದಲೂ ಸಿಂಹಗಳುಳ್ಳ ಗುಹೆಗಳಿಂದಲೂ ಸ್ವಾದುವಾದ ಕಂದಮೂಲಫಲಗಳಿಂದಲೂ ಫಲವುಳ್ಳ ವೃಕ್ಷಗಳಿಂದಲೂ ಇಟ್ಟಣಿಸಿದ್ದ ಆ ಪರ್ವತವನ್ನೇರಿ ಶ್ರೀರಾಮನ ದರ್ಶನವನ್ನು ಮಾಡಬೇಕೆಂಬ ಅವಲವಿಕೆಯಿಂದ ಬಡಗಣದಿಕ್ಕನ್ನು ನೋಡುತ್ತಿದ್ದನು. ಆಗ ಹನುಮಂತನು ತನ್ನ ಪಾದಸಂಚಾರದಿಂದ ಆ ಪರ್ವತದ ತಪ್ಪಲುಗಳಲ್ಲಿದ್ದ ಕಲ್ಲರೆಗಳು ಒಡೆದು ಚೂರ್ಣವಾಗಲು ತ್ರಿಕೂಟಾಚಲವನ್ನೇರಿ ಮಹಾಭಯಂಕರವಾದ ಜಲಚರಪ್ರಾಣಿಗಳಿಂದ ಇಟ್ಟಣಿಸಿದ್ದ ಸಮುದ್ರವನ್ನು ನೋಡಿ ಆ ಸಮುದ್ರದ ತೆಂಕಣತೀರದಿಂದ ಬಡಗಣದಿಕ್ಕಿಗೆ ಹೋಗಬೇಕೆಂದು ವಾಯುವಿನಂತೆ ಅಂತರಿಕ್ಷಮಾರ್ಗದಲ್ಲಿ ಹೋಗುವದಕ್ಕೆ ಲಂಘಿಸಿ ಮೇಲಕ್ಕೆ ನೆಗೆಯಲು ಆತನ ಪಾದಗಳಿಂದ ಕೊಂಕಿದ ಪರ್ವತರಾಜನು ಕದಡುತ್ತಿದ್ದ ಕೋಡುಗಲ್ಲುಗಳಿಂದ ತನ್ನಲ್ಲಿದ್ದ ಸಮಸ್ತ ಪ್ರಾಣಿಗಳೊಡನೆ ಕೂಡಿಕೊಂಡು ಘೋಳಿಡುತ ಪಾತಾಳಲೋಕಕ್ಕೆ ತೆರಳಿದಹಾಗೆ ನೆಲಮಟ್ಟಾಗಿ ತಗ್ಗುತಿರಲು ಫಲಪುಷ್ಪಗಳಿಂದ ಇಟ್ಟಣಿಸಿದ್ದ ವೃಕ್ಷಗಳು ಆತನ ತೊಡೆಗಳು ತಾಕಿ ವಜ್ರಾಯುಧದಿಂದ ಹೊಡೆಯಲ್ಪಟ್ಟಂತೆ ಮುರಿದು ನೆಲಕ್ಕೆ ಬೀಳುತ್ತಿದ್ದವು! ಆ ಪರ್ವತದ ಗುಹೆಗಳಲ್ಲಿದ್ದ ಸಿಂಹಗಳು ಭೋರಿಡುವ ಧ್ವನಿಯು ಆಕಾಶವನ್ನು ತಡಕುವಂತೆ ಕೇಳಲ್ಪಟ್ಟಿತು, ಆ ಪರ್ವತದಲ್ಲಿದ್ದ ವಿದ್ಯಾಧರಸ್ತ್ರೀಯರು ಬೆದರಿ ಉಟ್ಟ ಉಡಿಗೆ ತೊಟ್ಟ ಭೂಷಣ ಸಡಲಿ ಬಿದ್ದುಹೋಗುವದನ್ನರಿಯದೆ ಭೂಮಿಗೆ ಬೀಳುತ್ತಿದ್ದರು; ಅತ್ಯಂತ ಘನಗಾತ್ರವಾದ ವಿಷಜ್ವಾಲೆಯುಳ್ಳ ಸರ್ಪಗಳು ಕೊರಳು ಶಿರಸ್ಸುಗಳು ನೊಂದು ಅಲ್ಲಲ್ಲಿ ಸುತ್ತಿಕೊಂಡು ಬೀಳುತ್ತಿದ್ದವು! ಕಿನ್ನರ ಕಿಂಪುರುಷ ಯಕ್ಷ ಗಂಧರ್ವ ವಿದ್ಯಾಧರರು ಮೊದಲಾದವರು ಕಂಗೆಟ್ಟು ಅಂತರಿಕ್ಷಮಾರ್ಗದಲ್ಲಿ ಓಡುತ್ತಿದ್ದರು; ಬಲವಂತನಾದ ಹನುಮಂತನು ಲಂಘಿಸುವ ಸಮಯದಲ್ಲಿ ಆತನ ಪಾದಗಳಿಂದ ಕೊತ್ತಲ್ಪಟ್ಟ ಆ ಪರ್ವತವು ಹತ್ತುಗಾವುದದಾರಿ ಯಗಲವೂ ಮೂವತ್ತುಗಾವುದದಾರಿ ಉದ್ದವೂ ಆದಂಥಾದ್ದಾದರೂ ನೆಲಸಮಾನವಾಯಿತು! ಈ ಮರ್ಯಾದೆಯಲ್ಲಿ ಹನುಮಂತನ ರಭಸಕ್ಕೆ ಅಲ್ಲೋಲಕಲ್ಲೋಲವಾಗಿ ತೆರೆಗಳಿಂದ ತಡಿಯನ್ನು ಮೀರಿದ ಸಮುದ್ರವನ್ನು ದಾಟುವದಕ್ಕೆ ಆತನು ಆ ಸಮುದ್ರದ ತೆಂಕಣತೀರದಿಂದ ನೆಗೆದು ಅಂತರಿಕ್ಷಮಾರ್ಗದಲ್ಲಿ ಬಡಗಣತೀರಕ್ಕಾಗಿ ಹೋಗುತ್ತಿದ್ದನು.

## ೫೭ ನೇ ಅಧ್ಯಾಯ

### ಹನುಮಂತನು ಸಮುದ್ರವನ್ನು ದಾಟಿ ಜಾಂಬವಾದಿಗಳನ್ನು ಕೂಡಿದ್ದು.

ಆ ಬಳಿಕ ಹನುಮಂತನು ಸಮುದ್ರವನ್ನು ದಾಟಬೇಕೆಂದು ಗಗನವೆಂಬ ಸಮುದ್ರವನ್ನು ದಾಟಬಂದನು; ಗಗನವೆಂಬ ಸಮುದ್ರವು ಚಂದ್ರನೆಂಬ ಕನ್ನೈದಿಲೆಪುಷ್ಪವುಳ್ಳದ್ದು; ಸೂರ್ಯನೆಂಬ ಕೊಳರ್ವಕ್ಕಿಯುಳ್ಳದ್ದು; ಪುಷ್ಯನಕ್ಷತ್ರ ಶ್ರವಣನಕ್ಷತ್ರವೆಂಬ ನೊರೆಯುಳ್ಳದ್ದು; ಮೇಘಸಮೂಹವೆಂಬ ಹಂಸತಡಿಯಗರಿಕೆಯುಳ್ಳದ್ದು; ಪುನರ್ವ

ಸು ನಕ್ಷತ್ರವೆಂಬ ಮತ್ಸ್ಯವೂ ಅಂಗಾರಕನೆಂಬ ನೆಗಳೂ ಐರಾವತವೆಂಬ ದ್ವೀಪವೂ ಸ್ವಾತೀನಕ್ಷತ್ರವೆಂಬ ಹಂಸಪಕ್ಷಿಯೂ ವಾಯುವೆಂಬ ತೆರೆಯೂ ಚಂದ್ರಕಿರಣಗಳೆಂಬ ಉದಕವೂ ಯಕ್ಷಗಂಧರ್ವರೆಂಬ ತಾವರೇಕಮಲನೈದಿಲಪುಷ್ಪಗಳೂ ಉಳ್ಳಂಥಾದ್ದು; ಇಂಥಾ ಗಗನವೆಂಬ ಅಪರಿಮಿತವಾದ ಸಮುದ್ರವನ್ನು ಬಿರುಘಾಳಿಯಿಂದ ಹಡಗು ಬರುವಂತೆ ವಾಯುವೇಗವುಳ್ಳ ಹನುಮಂತನು ಆಕಾಶವನ್ನು ನುಂಗುವಂತೆಯೂ ಚಂದ್ರಮಂಡಲವನ್ನು ತುಡುಕುವಂತೆಯೂ ನಕ್ಷತ್ರಗಳನ್ನಪಹರಿಸುವಂತೆಯೂ ಅಂತರಿಕ್ಷಮಾರ್ಗದಲ್ಲಿ ಕಪ್ಪಾಗಿ ಬಿಳುಪಾಗಿ ಕೆಂಪಾಗಿ ಹಳದಿವರ್ಣವಾಗಿ ಪಚ್ಚೆವರ್ಣವಾದ ಮೇಘಗಳನ್ನು ತನ್ನ ಗತಿವೇಗದ ಘಾಳಿಯಿಂದ ತೊಲಗಿಸುತ ತನಗಿಂತಲು ಕೆಳಗೆಹೋಗುತಿದ್ದ ಮೇಘಗಳಲ್ಲಿ ಮರೆಯಾಗುತ ಮೇಲಿನ್ದ ಮೇಘಗಳಲ್ಲಿ ಪ್ರಕಾಶವಾಗಿ ಕಾಣುತ ಅಂತರಿಕ್ಷಮಾರ್ಗದಲ್ಲಿ ಚಂದ್ರನಂತೆ ತೋರುತ ಅತ್ಯಂತ ವೇಗವುಳ್ಳ ಗರುಡನಂತೆ ಬರುತಿದ್ದನು! ಈ ಮರ್ಯಾದೆಯಲ್ಲಿ ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟಬರುತಿದ್ದ ಹನುಮಂತನು ಅಲ್ಲಲ್ಲಿದ್ದ ಮೇಘಸಮೂಹಗಳನ್ನು ತನ್ನ ಗತಿವೇಗದಿಂದ ತೊಲಗಿಸುತ ಪ್ರಳಯಕಾಲದ ಮೇಘದ ಗುಡುಗಿನಂತೆ ಬೊಬ್ಬಿಟ್ಟು ಕೂಗುತ ಸಮುದ್ರದ ತೆಂಕಣತೀರದಲ್ಲಿದ್ದ ಸುನಾಭಪರ್ವತದಿಂದ ಬಡಗಣತೀರದಲ್ಲಿದ್ದ ಮಹೇಂದ್ರಪರ್ವತಕ್ಕಾಗಿ ಬಂದನು; ಈ ಮರ್ಯಾದೆಯಲ್ಲಿ ಹನುಮಂತನು ಲಂಕಾಪಟ್ಟಣಕ್ಕೆ ಹೋಗಿ ರಾಕ್ಷಸರನ್ನು ಸಂಹರಿಸಿ ತನ್ನ ಹೆಸರನ್ನು ಹೇಳಿ ಲಂಕಾಪಟ್ಟಣವನ್ನು ದಹಿಸಿ ರಾವಣನನ್ನು ವ್ಯಥೆಪಡಿಸಿ ಅಲ್ಲಿದ್ದ ರಾಕ್ಷಸಬಲವನ್ನು ಮಡಿಸಿ ಸೀತಾದೇವಿಗೆ ನಮಸ್ಕರಿಸಿ ಸುನಾಭಪರ್ವತದಿಂದ ಅತ್ಯಂತ ಹಸ್ತವೇಗವುಳ್ಳವನು ಬಿಲ್ಲಿನಿಂದ ಪ್ರಯೋಗಿಸಿದ ಅಂಬಿನಂತೆ ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟಿ ದೊಡ್ಡ ಮೇಘಮಂಡಲದ ಮರ್ಯಾದೆಯಲ್ಲಿದ್ದ ಮಹೇಂದ್ರಪರ್ವತದ ಸಮೀಪಕ್ಕೆ ಬಂದು ತನ್ನ ಕೂಡೆ ಬಂದು ಸಮುದ್ರತೀರದಲ್ಲಿದ್ದ ಕಪಿನಾಯಕರನ್ನು ಕಾಣಬೇಕೆಂಬ ಆಸೆಯಿಂದ ಸೂರ್ಯಮಂಡಲಸಹಿತವಾದ ಸಮಸ್ತ ಗಗನಮಂಡಲವೂ ಒಡೆಯುವಂತೆ ಬೊಬ್ಬಿಟ್ಟು ಕೂಗಿದನು. ಆ ಸಮುದ್ರದ ಬಡಗಣತೀರದಲ್ಲಿದ್ದ ಅಂಗದನು ಮೊದಲಾದ ಕಪಿನಾಯಕರು ಹನುಮಂತನನ್ನು ಯಾವಾಗ ಕಾಣುವುದೆಂದು ಆತನ ಬರುವಿಕೆಯನ್ನೇ ನೋಡುತಿಕ್ಕೊಂಡಿದ್ದವರಾದ್ದರಿಂದ ಆತನ ಗರ್ಜನೆಯ ಧ್ವನಿಯನ್ನು ಕೇಳಿ ಸಂತೋಷಪಟ್ಟರು, ಆಗ ಜಾಂಬವನೂ ಅಂಗದನೂ ಅಲ್ಲಿದ್ದ ಕಪಿನಾಯಕರೆಲ್ಲರನ್ನು ಕರೆದು “ಎಲೈ ಕಪಿನಾಯಕರುಗಳಿರಾ, ಇದು ಹನುಮಂತನ ಗರ್ಜನೆಯ ಧ್ವನಿಯು; ಆತನು ಈ ಪ್ರಕಾರದಲ್ಲಿ ಗರ್ಜಿಸಿದಾಗಲೇ ಸರ್ವಥಾ ಹೋದ ಕಾರ್ಯವನ್ನು ಸಾಧ್ಯಮಾಡಿಕೊಂಡು ಬಂದನು, ಈ ಅರ್ಥದಲ್ಲಿ ಸಂಶಯವಿಲ್ಲ; ಹನುಮಂತನು ತಾನು ಹೋದಕಾರ್ಯವು ಸಾಧ್ಯವಾಗದಪಕ್ಷದಲ್ಲಿ ಈ ಮರ್ಯಾದೆಯಲ್ಲಿ ಗರ್ಜಿಸಿ ಕೂಗನು” ಎಂದು ಹೇಳಿ ಆಮೇಲೆ ಹನುಮಂತನ ಕಾಲುವೇಗದ ಧ್ವನಿಯನ್ನು ಕೇಳಿ ಸರ್ವಥಾ ಹನುಮಂತನು ಬಂದನೆಂದು ನಿಶ್ಚಯಿಸಿ ಅತ್ಯಂತ ಹರ್ಷಯುಕ್ತರಾಗಿ ಪರ್ವತಾಗ್ರದಿಂದ ಪರ್ವತಾಗ್ರಕ್ಕೂ ವನಾಂತರದಿಂದ ವನಾಂತರಕ್ಕೂ ನೆಗೆದು ಮಹೇಂದ್ರಪರ್ವತಕ್ಕೆ ಬಂದು ಅಲ್ಲಿ ಫಲವತ್ತಾದ ಮರದ ಕೊಂಬುಗಳನ್ನಾಶ್ರಯಿಸಿಕೊಂಡಿದ್ದರು!

ಆ ಸಮಯದಲ್ಲಿ ಹನುಮಂತನು ಮತ್ತು ಗರ್ಜಿಸಿಕೊಂಡು ಬರುತ್ತಿರಲು ಆ ಕಪಿನಾಯಕರು ಆತನನ್ನು ಕಂಡು ಅತ್ಯಂತ ಸಂತೋಷಯುಕ್ತರಾಗಿ ಕೈಮುಗಿದುಕೊಂಡು ನೋಡುತಿದ್ದರು; ಹನುಮಂತನು ಅನೇಕ ಫಲವತ್ತಾದ ವೃಕ್ಷಗಳಿಂದ ಇಟ್ಟಣಿಸಿದ್ದಾಗಿ ನಿರ್ಮಲೋದಕವುಳ್ಳದ್ದಾಗಿ ರಮಣೀಯವಾದ ಆ ಪರ್ವತದ ಅಗ್ರಭಾಗದಲ್ಲಿ ಬಂದಿಳಿದು ಆ ಕಪಿನಾಯಕರು ತನ್ನನ್ನು ಸುತ್ತಿಕೊಂಡು ಅತ್ಯಂತ ಹರ್ಷಯುಕ್ತರಾಗಿ ಕಂದಮೂಲಫಲ ಜೇನುಮೊದಲಾದ ಭಕ್ಷಣಗಳನ್ನೂ ಯೋಗ್ಯವಾದ ವಸ್ತುಗಳನ್ನೂ ಕಾಣಿಕೆಯಾಗಿ ಕೊಡಲು ಜಾಂಬವನು ಮೊದಲಾದ ವೃದ್ಧಕಪಿನಾಯಕರಿಗೂ ಅಂಗದನಿಗೂ ನಮಸ್ಕರಿಸಿ ಜಾಂಬವಾಂಗದರು ಅನೇಕ ಸತ್ಕಾರಗಳನ್ನು ಮಾಡಿ ತಾನು ಹೋಗಿ ಬಂದ ಕಾರ್ಯಸ್ಥಿತಿಯನ್ನು ಕೇಳಲು “ಸೀತಾದೇವಿಯನ್ನು ಕಂಡುಬಂದೆನು!” ಎಂದು ಸಂಕ್ಷೇಪದಿಂದ ಹೇಳಿದನು.

ಆಮೇಲೆ ಜಾಂಬವನು ಅಂಗದನು ಹನುಮಂತನು ಮೊದಲಾದವರೆಲ್ಲರು ಮಹೇಂದ್ರಪರ್ವತದ ತಪ್ಪಲಲ್ಲಿ ವಿಶಾಲವಾಗಿ ರಮಣೀಯವಾದ ಒಂದು ಕಲ್ಲರೆಯಮೇಲೆ ಕುಳಿತುಕೊಳ್ಳಲು ಹನುಮಂತನು ತಾನು ಸೀತಾ

ದೇವಿಯನ್ನು ಕಂಡುಬಂದ ವೃತ್ತಾಂತವನ್ನು ಹೇಳುತಿದ್ದನು! ಎಲೈ ಜಾಂಬವನೆ, ಲಂಕಾಪಟ್ಟಣದ ಸಮೀಪದಲ್ಲಿರುವ ಅಶೋಕವನಮಧ್ಯದಲ್ಲಿದ್ದ ಸೀತಾದೇವಿಯನ್ನು ಕಂಡುಬಂದೆನು; ಆ ದೇವಿಯು ಅನೇಕ ಭಯಂಕರವಾದ ರಾಕ್ಷಸಸ್ತ್ರೀಯರ ಕಾವಲಲ್ಲಿ ಉಪವಾಸಗಳಿಂದ ಕೃಶಾಂಗಿಯಾಗಿ ಮಲಿನವಸ್ತ್ರವನ್ನುಟ್ಟುಕೊಂಡು ಒಂಟಿ ಜಡೆಯನ್ನು ಧರಿಸಿಕೊಂಡು ಅಧಿಕವಾದ ದೈನ್ಯಭಾವದಿಂದ ವ್ಯಥೆಪಡುತ ಶ್ರೀರಾಮನನ್ನು ಧ್ಯಾನಮಾಡಿಕೊಂಡು ಜೀವಿಂದಿದ್ದಾಳೆ'' ಎಂದು ಹೇಳಿದನು.

ಆ ಮಾತು ಕೇಳಿದ ಕಪಿನಾಯಕರು ಅತ್ಯಂತ ಹರ್ಷಯುಕ್ತರಾಗಿ ಆನಂದಾತಿಶಯದಿಂದ ನೆಗೆದು ನೆಗೆದು ಬೀಳುತ ಏಳುತ ಇದ್ದರು; ಕೆಲವರು ಸಂತೋಷಾತಿಶಯದಿಂದ ಗರ್ಜಿಸುತಿದ್ದರು; ಕೆಲವರು ಅವರಿಗೆ ಪ್ರತಿಯಾಗಿ ಗರ್ಜಿಸುತಿದ್ದರು, ಕೆಲವರು ನರ್ತನವನ್ನು ಮಾಡುತಿದ್ದರು; ಕೆಲವರು ಕಪಿಜಾತಿಗೆ ಅನುಸಾರವಾಗಿ ಕಿಲಕಿಲಾರವಗಳನ್ನು ಮಾಡುತಿದ್ದರು; ಕೆಲವರು ರೋಮಾಂಚನವಾದ ಬಾಲಗಳನ್ನು ಮೇಲಕ್ಕೆ ಹಾರಿಸುತಿದ್ದರು; ಕೆಲವರು ಬಾಲಗಳಿಂದ ಭೂಮಿಯನ್ನು ಹೊಡೆಯುತಿದ್ದರು; ಮತ್ತು ಕೆಲವರು ಉನ್ನತವಾದ ಕೋಡುಗಲ್ಲುಗಳನ್ನೇರಿ ನೆಗೆದುಬಂದು ಹನುಮಂತನ ಕೈಗಳನ್ನು ಹಿಡಿದುಕೊಂಡು ನಗುತ್ತಿದ್ದರು! ಆ ಸಮಯದಲ್ಲಿ ಸಮಸ್ತ ಕಪಿನಾಯಕರ ಮಧ್ಯದಲ್ಲಿ ಅಂಗದನು ಹನುಮಂತನನ್ನು ನೋಡಿ "ಎಲೈ ಹನುಮಂತನೆ, ಸತ್ವದಲ್ಲಿಯೂ ಸಾಹಸಪರಾಕ್ರಮಗಳಲ್ಲಿಯೂ ನಿನಗೆ ಸರಿಯಾದವರು ಒಬ್ಬರೂ ಇಲ್ಲ; ನಿನಗೆ ನೀನೇ ಸರಿ; ನೂರುಗಾವುದದಾರಿಯಗಲವುಳ್ಳ ಸಮುದ್ರವನ್ನು ದಾಟಿಹೋಗಿ ತಿರುಗಿ ಬಂದೆ; ನಿನ್ನ ಸಾಹಸವನ್ನೂ ನಿನ್ನ ಧೈರ್ಯವನ್ನೂ ಸ್ವಾಮಿಭಕ್ತಿಯನ್ನೂ ಏನೆಂದು ಹೇಳಬೇಕು! ನೀನು ರಘುನಾಯಕನ ಪಟ್ಟದರಾಣಿಯಾದ ಸೀತಾದೇವಿಯನ್ನು ದೈವಾನುಕೂಲದಿಂದ ಕಂಡುಬಂದೆ: ಇನ್ನು ಶ್ರೀರಾಮನು ದೈವಾನುಕೂಲದಿಂದಲೇ ಸೀತಾದೇವಿಯ ವಿರಹಶೋಕವನ್ನು ಕಳದುಕೊಳ್ಳುವನು'' ಎಂದು ಕೊಂಡಾಡುತಿದ್ದನು. ಆಮೇಲೆ ಸಮಸ್ತ ಕಪಿನಾಯಕರೂ ಹನುಮಂತನು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಹೋಗಿ ರಾವಣನನ್ನೂ ಸೀತಾದೇವಿಯನ್ನೂ ಕಂಡ ವೃತ್ತಾಂತವನ್ನು ಕೇಳಬೇಕೆಂದು ಜಾಂಬವನೂ ಅಂಗದನೂ ಹನುಮಂತನೂ ಇದ್ದ ಕಲ್ಲರೆಯಮೇಲೆ ಕುಳಿತು ಕೈಮುಗಿದುಕೊಂಡು ಆತನ ಮುಖವನ್ನು ನೋಡುತಿದ್ದರು! ಆ ಸಮಯದಲ್ಲಿ ಆ ಕಪಿನಾಯಕರಿಂದ ಸುತ್ತಲ್ಪಟ್ಟ ಹನುಮಂತನು ದೇವತೆಗಳಿಂದ ಸುತ್ತಲ್ಪಟ್ಟ ದೇವೇಂದ್ರನಂತೆ ಒಪ್ಪುತಿದ್ದನು! ಕೀರ್ತಿವಂತನಾದ ಹನುಮಂತನಿಂದಲೂ ಸರ್ವಾಭರಣ ಭೂಷಿತನಾದ ಅಂಗದನಿಂದಲೂ ಮಹಾತ್ಮನಾದ ಜಾಂಬವನಿಂದಲೂ ಆಶ್ರಯಿಸಲ್ಪಟ್ಟ ಆ ಪರ್ವತವು ಮಹಾಮೇರುಪರ್ವತದಂತೆ ಅತಿರಮಣೀಯವಾಗಿ ಒಪ್ಪುತಿತ್ತು!

---

## ೫೮ ನೇ ಅಧ್ಯಾಯ.

### ಹನುಮಂತನು ಲಂಕೆಗೆ ಹೋಗಿಬಂದ ವೃತ್ತಾಂತವನ್ನು ಹೇಳಿದ್ದು.

ಈ ಮರ್ಯಾದೆಯಲ್ಲಿ ಮಹೇಂದ್ರಪರ್ವತದ ಅಗ್ರಭಾಗದಲ್ಲಿ ಕುಳಿತುಕೊಂಡು ಜಾಂಬವನು ಅಂಗದನು ಹನುಮಂತನು ಮೊದಲಾದ ಕಪಿನಾಯಕರು ಅತ್ಯಂತ ಸಂತೋಷಯುಕ್ತರಾಗಿರುವ ಸಮಯದಲ್ಲಿ ಜಾಂಬವನು ಹನುಮಂತನನ್ನು ನೋಡಿ "ಎಲೈ ಹನುಮಂತನೆ, ನೀನು ಸೀತಾದೇವಿಯನ್ನು ಹ್ಯಾಗೆ ಕಂಡೆ? ಆಕೆಯು ಹ್ಯಾಗೆ ಇದ್ದಳು? ಕ್ರೂರಕರ್ಮಿಯಾದ ರಾವಣನು ಆ ದೇವಿಯನ್ನು ಯಾವಮರ್ಯಾದೆಯಲ್ಲಿ ಕಂಡುಕೊಂಡಿದ್ದನು? ಈ ವರ್ತಮಾನವೆಲ್ಲವನ್ನು ಸವಿಸ್ತಾರವಾಗಿ ಹೇಳು, ನಾವು ಕೇಳಿ ಮುಂದಣ ಕಾರ್ಯಸ್ಥಿತಿಯನ್ನು ಯೋಚಿಸಿ ನಿಶ್ಚಯಿಸಿಕೊಂಡು ಮಹಾತ್ಮನಾದ ಶ್ರೀರಾಮನ ಸಮೀಪಕ್ಕೆ ಹೋಗಿ ಯತಾರ್ಥವನ್ನು ಹೇಳಬೇಕು; ಆದರೊಳಗೂ ಹೇಳಬಹುದಾದ ಮಾತುಗಳನ್ನೇ ಹೇಳಬೇಕು; ರಹಸ್ಯವಾದ ಮಾತುಗಳನ್ನು ಗೋಪ್ಯಮಾಡಬೇಕು; ನೀನು ಕಂಡವನ್ನು ಯತಾರ್ಥವಾಗಿ ಹೇಳು'' ಎಂದು ಕೇಳಿದನು.

ಹನುಮಂತನು ಮನಸ್ಸಿನಲ್ಲಿ ಸೀತಾದೇವಿಗೆ ನಮಸ್ಕಾರಮಾಡಿ ಜಾಂಬವನನ್ನು ಕುರಿತು “ಎಲೈ ಜಾಂಬವನೆ, ನೀವೆಲ್ಲರು ನೋಡುತಿದ್ದಹಾಗೆ ಸಮುದ್ರತೀರದಲ್ಲಿರುವ ಮಹೇಂದ್ರಪರ್ವತವನ್ನೇರಿಕೊಂಡು ಈ ಸಮುದ್ರದ ತೆಂಕಣತೀರಕ್ಕಾಗಿ ಹೋಗುತ್ತಿರುವಾಗ ಮಧ್ಯಮಾರ್ಗದಲ್ಲಿ ಬಂದಾನೊಂದು ಮಹತ್ತಾದ ವಿಘ್ನವು ಸಂಭವಿಸಿತು, ಮಧ್ಯಮಾರ್ಗದಲ್ಲಿ ಒಂದು ಸುವರ್ಣಮಯವಾದ ಕೋಡುಗಲ್ಲುಗಳುಳ್ಳ ಪರ್ವತವು ನಾನು ಹೋಗುವ ದಾರಿಯಲ್ಲಿ ಅಡ್ಡಗಟ್ಟಿಕೊಂಡಿರುವದನ್ನು ಕಂಡು ಕಟಕಟಾ! ಅಂತರಿಕ್ಷಮಾರ್ಗದಲ್ಲಿ ಹೋಗುತಿರುವ ನನಿಗೆ ಇದೊಂದು ವಿಘ್ನವು ಬಂತಲ್ಲವೆಂದು ಮನಸ್ಸಿನಲ್ಲಿ ಚಿಂತಿಸುತ ಧೈರ್ಯವನ್ನಾಶ್ರಯಿಸಿ ಯಾವಪ್ರಕಾರದಲ್ಲಾದರೂ ಆ ಪರ್ವತವು ಭೀತಿಪಡಿಸುವದಲ್ಲದೆ ದಾರಿಬಿಡದೆಂದು ಯೋಚಿಸಿಕೊಂಡು ಅತಿವೇಗದಿಂದ ಹೋಗಿ ನನ್ನ ಬಾಲವನ್ನು ತಾಗಿಸಲು ಆ ಪರ್ವತದ ಸುವರ್ಣಮಯವಾದ ಒಂದು ಕೋಡುಗಲ್ಲು ಮುರಿದು ಸಾವಿರಹೋಳಾಗಿ ಬಿತ್ತು; ಆಮೇಲೆ ಆ ಪರ್ವತರಾಜನು ನನ್ನನ್ನು ನೋಡಿ ‘ಎಲೈ ಮಗನೆ, ನಾನು ನಿನಗೆ ಚಿಕ್ಕಪ್ಪನು, ನಿನ್ನತಂದೆಯಾದ ವಾಯುವಿಗೆ ಸಖನು, ನನ್ನ ಹೆಸರು ಮೈನಾಕಪರ್ವತನು; ಸಮುದ್ರಮಧ್ಯದಲ್ಲಿರುವ ನನಿಗೂ ವಾಯುವಿಗೂ ಸಖತ್ವವು ಬಂದ ವರ್ತಮಾನವನ್ನು ಕೇಳು; ಪೂರ್ವದಲ್ಲಿ ಪರ್ವತಗಳಿಗೆ ರೆಕ್ಕೆಗಳಿದ್ದವು, ಅವು ಹಾರಿಹೋಗಿ ಪಟ್ಟಣ ಗ್ರಾಮಗಳಮೇಲೆ ಕುಳಿತುಕೊಂಡರೆ ಆ ಪಟ್ಟಣಗ್ರಾಮಗಳು ನಾಶವಾಗುವವು, ಅದರಿಂದ ಪ್ರಜಾಕ್ಷಯವಾಗುತ್ತಿರುವ ವೃತ್ತಾಂತವನ್ನು ಕಂಡು ದೇವೇಂದ್ರನು ತನ್ನ ವಜ್ರಾಯುಧದಿಂದ ಪರ್ವತಗಳ ಗರಿಗಳನ್ನು ಕತ್ತರಿಸಿಹಾಕಿದನು; ಆ ಸಮಯದಲ್ಲಿ ನಾನು ನಿನ್ನತಂದೆಯಾದ ವಾಯುವಿನ ಮರೆಯಾಗಲು ಆತನು ದೇವೇಂದ್ರನ ಕೈಯಿಂದ ನನ್ನನ್ನು ಬಿಡಿಸಿಕೊಂಡು ಈ ಸಮುದ್ರದಲ್ಲಿ ತಂದುಹಾಕಿದನು; ಆದ್ದರಿಂದ ನಾನು ಇಲ್ಲಿ ಮರೆಯಾಗಿಧೇನೆ; ಸಮಸ್ತ ರಹಸ್ಯವನ್ನೂ ಬಲ್ಲವರಲ್ಲಿ ಉತ್ತಮನಾದ ಶ್ರೀರಾಮನು ದೇವೇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳವನು; ಅಂಥಾ ಮಹಾತ್ಮನಿಗೆ ಸ್ವಲ್ಪವಾದರೂ ಸಹಾಯಮಾಡಬೇಕೆಂಬ ಬುದ್ಧಿಯಿಂದ ರಾಮಕಾರ್ಯಾರ್ಥವಾಗಿ ಸಮುದ್ರವನ್ನುದಾಟಿ ಹೋಗುವ ನಿನಗೆ ಸ್ವಲ್ಪಹೊತ್ತು ಆಧಾರವಾಗಿ ನಿಂತು ಕಂದಮೂಲ ಫಲಾಹಾರಗಳಿಂದ ನಿನ್ನ ಬಳಲಿಕೆಯನ್ನು ಪರಿಹರಿಸಿ ಮುಂದಕ್ಕೆ ಕಳುಹಿಸಬೇಕೆಂದು ಸಮುದ್ರದಿಂದ ಎದ್ದುಬಂದೆನು’ ಎಂದು ಹೇಳಿದನು. ನಾನು ಅತ್ಯಂತ ಸಂತೋಷಪಟ್ಟು ನಾನು ಹೋಗುವ ಕಾರ್ಯಸ್ಥಿತಿಯನ್ನು ಆ ಮೈನಾಕಪರ್ವತನ ಕೂಡೆ ಹೇಳಿ ಆತನಿಂದ ಕಳುಹಿಸಿಕೊಂಡು ಮುಂದೆ ಹೋಗಲು ಮನುಷ್ಯಶರೀರದಿಂದ ಮೊದಲು ಸಮುದ್ರದಿಂದ ಎದ್ದುಬಂದ ಮೈನಾಕಪರ್ವತವು ಶಿಲಾಮಯವಾದ ಮನುಷ್ಯಶರೀರದಿಂದಲೇ ಸಮುದ್ರದೊಳಗೆ ಮುಳುಗಿ ಅಂತರ್ಧಾನವನ್ನೈದಿತು! ಆಮೇಲೆ ನಾನು ಅತಿವೇಗದಿಂದ ಮುಂದೆಹೋಗುವಾಗ ಮಧ್ಯಮಾರ್ಗದಲ್ಲಿ ನಾಗಗಳ ತಾಯಾದ ಸುರಸಾದೇವಿಯು ನನ್ನ ಸಾಹಸವನ್ನು ನೋಡಬೇಕೆಂದು ದೇವೇಂದ್ರನಿಂದ ಕಳುಹಿಸಲ್ಪಟ್ಟವಳಾಗಿ ನಾನು ಹೋಗುವ ದಾರಿಯನ್ನಡ್ಡಗಟ್ಟಿಕೊಂಡು ನನ್ನನ್ನು ಕುರಿತು ‘ಎಲೈ ವಾನರನೆ, ನನಿಗೆ ದೇವತೆಗಳು ನಿನ್ನನ್ನು ಆಹಾರವಾಗಿ ತೋರಿಸಿದರು; ಬಹುಕಾಲಕ್ಕೆ ದೈವಾಧೀನದಿಂದ ನೀನು ನನ್ನ ಕಣ್ಣಿಗೆ ಗೋಚರವಾದೆ; ನಿನ್ನನ್ನು ಭಕ್ಷಣಮಾಡುವೆನು’ ಎಂದು ನುಡಿದಳು.

“ಆ ಮಾತನ್ನು ಕೇಳಿ ನಾನು ಅತ್ಯಂತ ಚಿಂತಾಕ್ರಾಂತನಾಗಿ ಆಕೆಗಿದಿರಾಗಿ ಕೈಮುಗಿದುಕೊಂಡು ನಿಂತು ದೈನ್ಯಭಾವದಿಂದ ‘ಎಲೈ ದೇವಿಯೇ, ಮಹಾತ್ಮನಾದ ಶ್ರೀರಾಮನು ಸೀತಾಲಕ್ಷ್ಮಣಸಮೇತನಾಗಿ ದಂಡಕಾರಣ್ಯಕ್ಕೆ ಬಂದನು; ಆತನ ಪಟ್ಟದರಾಣಿಯಾದ ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋದನು; ಆ ದೇವಿಯನ್ನರಸಿಕೊಂಡು ಬರಹೇಳಿ ಶ್ರೀರಾಮನು ಕಳುಹಿಸಲು ಆತನ ಅಪ್ಪಣೆಯಿಂದ ನಾನು ಸಮುದ್ರವನ್ನು ದಾಟಹೋಗುತಿಧೇನೆ, ವಿಷಮವಾದ ಅಂತರಿಕ್ಷಮಾರ್ಗದಲ್ಲಿ ನೀನು ಸಹಾಯಮಾಡು; ಅಲ್ಲದಪಕ್ಷದಲ್ಲಿ ಆ ದೇವಿಯನ್ನು ಕಂಡುಬಂದು ಶ್ರೀರಾಮನಿಗೆ ಅರಿಕೆಮಾಡಿ ಆಮೇಲೆ ನಿನ್ನ ಸಮೀಪಕ್ಕೆ ಬರುತ್ತೇನೆ; ಆಗ ನನ್ನ ಶರೀರವನ್ನು ಆಹಾರ ಮಾಡಿಕೊ; ಈ ಮಾತು ಸತ್ಯವು; ಇದಕ್ಕೆ ತಪ್ಪೆನು’ ಎಂದು ನುಡಿದೆನು

“ಆ ಕಾಮರೂಪಿಯಾದವಳು ನನ್ನನ್ನು ನೋಡಿ ‘ಎಲೈ ವಾನರನೆ, ನನ್ನ ಬಾಯಿಗೆ ತಗಲಿದವನು ಬಿಡಿಸಿಕೊಂಡು ಹೋಗನೆಂಬವದುಂಟು’ ಎಂದು ತನ್ನ ಬಾಯನ್ನು ಹತ್ತುಗಾವುದದಾರಿ ವಿಸ್ತಾರವಾಗಿ ಮಾಡಿಕೊಳ್ಳ

ಲು ನಾನು ಹದಿನೈದುಗಾವುದದಾರಿ ಉದ್ದವಾಗಿ ಬೆಳೆದೆನು. ಅವಳು ನನ್ನ ಶರೀರವನ್ನು ನುಂಗುವಷ್ಟು ಬಾಯನ್ನು ಮತ್ತೂ ಅಗಲವಾಗಿ ಮಾಡಿಕೊಳ್ಳಲು ನಾನು ಮತ್ತು ಉದ್ದವಾಗಿ ಬೆಳೆದೆನು. ಆಮೇಲೆ ಸುರಸೆಯು ತನ್ನ ಬಾಯನ್ನು ಅತ್ಯಂತ ಅಗಲವಾಗಿ ಮಾಡಿಕೊಳ್ಳಲು ನಾನು ನನ್ನ ಶರೀರವನ್ನು ಸಂಕೋಚಮಾಡಿಕೊಂಡು ಒಂದಂಗುಷ್ಠಮಾತ್ರನಾಗಿ ಅವಳ ಬಾಯನ್ನು ಹೊಕ್ಕು ಒಂದು ಕ್ಷಣಮಾತ್ರದಲ್ಲಿ ಆಚೆಗೆ ಹೊರಟುಹೋದೆನು; ಆಗ ಸುರಸಾದೇವಿಯು ನನ್ನನ್ನು ಕಂಡು ಅತಿಹರ್ಷಪಟ್ಟು 'ಎಲೈ ಕಪಿಶ್ರೇಷ್ಠನೆ, ನಾನು ನಿನ್ನಮನಸ್ಸನ್ನು ನೋಡಬೇಕೆಂದು ಈ ಆಕಾರವಾದೆನಲ್ಲದೆ ಮತ್ತೊಂದಲ್ಲ, ನೀನು ಇನ್ನು ಯಾತಕ್ಕೂ ಅಂಜಬೇಡ; ಸುಖವಾಗಿ ಸಮುದ್ರವನ್ನು ದಾಟಿಹೋಗು; ನೀನು ಸೀತಾದೇವಿಯನ್ನು ಕಂಡು ಆಕೆಯ ಪರಿಣಾಮಸ್ಥಿತಿಯನ್ನು ವಿಚಾರಿಸಿ ಶ್ರೀರಾಮನಿಗೆ ಅರಿಕೆಮಾಡು, ನಿನ್ನ ಚಾರಿತ್ರಕ್ಕೆ ನಾನು ಮೆಚ್ಚಿದೆನು; ಸುಖಿಯಾಗಿರು!' ಎಂದು ಕಳುಹಿಸಿದಳು

"ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ದೇವತೆಗಳು ನನ್ನಸಾಹಸವನ್ನು ಕಂಡು—ಜಯ ಜಯಾ! ಎಂದು ಕೊಂಡಾಡುತಿದ್ದರು, ಆಮೇಲೆ ನಾನು ಗರುಡನ ಮರ್ಯಾದೆಯಲ್ಲಿ ಅತಿವೇಗದಿಂದ ದಾಟಿಹೋಗುತ್ತಿರಲು ಛಾಯಾಗ್ರಾಹಿ ಎಂಬ ರಾಕ್ಷಸಿಯು ನನ್ನ ನೆಳಲನ್ನು ನುಂಗಿದಳು: ಅದರಿಂದ ನನಗೆ ಗಮನವೇಗವು ನಿಲ್ಲಲು ನಾನು ಆಶ್ಚರ್ಯಪಟ್ಟು ಯಾವಕಾರಣದಿಂದ ನನ್ನ ಗಮನವೇಗವು ತಗ್ಗಿತೆಂದು ದಿಕ್ಕುಗಳನ್ನು ನೋಡಿ ಏನನ್ನೂ ಕಾಣದೆ ದೈವಾಧೀನದಿಂದ ನನಗೆ ಬಂದ ವಿಘ್ನಕ್ಕೆ ಕಾರಣವಾದ ಆಕಾರವನ್ನು ಕಾಣಬೇಕೆಂದು ಯೋಚಿಸಿ ಕೆಳಗಡೆ ತಿರುಗಿ ಸಮುದ್ರೋದಕದಮೇಲೆ ಮಲಗಿಕೊಂಡು ಬಾಯಿಬಿಟ್ಟುಕೊಂಡು ಭಯಂಕರವಾಗಿದ್ದ ಆ ರಾಕ್ಷಸಿಯನ್ನು ಕಂಡೆನು, ಆಕೆಯು ನನ್ನನ್ನು ಕಂಡು ಹಾಸ್ಯಮಾಡಿ 'ಎಲೈ ಘನಗಾತ್ರವಾದ ಕಪಿಯೆ, ನೀನೆಲ್ಲಿಹೋಗುತ್ತೀ! ನಾನು ಬಹಳಕಾಲದಿಂದ ಹಸಿದು ಆಹಾರವಿಲ್ಲದೆ ಕಂಗೆಟ್ಟು ನಿನ್ನನ್ನು ಭಕ್ಷಣಮಾಡಬೇಕೆಂದು ಬಯಸಿಕೊಂಡಿದ್ದೇನೆ' ಎಂದು ನನ್ನ ಶರೀರವನ್ನು ನೋಡಿ ಅದಕ್ಕೆ ತಕ್ಕಹಾಗೆ ತನ್ನ ಬಾಯನ್ನು ವಿಶಾಲವಾಗಿ ಮಾಡಿಕೊಂಡಳು; ನಾನು ಆ ರಾಕ್ಷಸಿಯ ಬಾಯಿ ಹಿಡಿಯದಹಾಗೆ ನನ್ನ ಶರೀರವನ್ನು ಮತ್ತು ಹೆಗ್ಗಳವಾಗಿ ಬೆಳೆಸಿಕೊಂಡೆನು; ಆ ರಾಕ್ಷಸಿಯು ನನ್ನ ಶರೀರವು ಹಿಡಿಯುವಹಾಗೆ ತನ್ನ ಬಾಯನ್ನು ಮತ್ತೂ ಅಗಲವಾಗಿಮಾಡಿಕೊಂಡಳು; ಆಗ ನಾನು ನನ್ನ ಮಹತ್ತಾದ ಶರೀರವನ್ನು ಒಂದು ನಿಮಿಷಮಾತ್ರದಲ್ಲಿ ಸೂಕ್ಷ್ಮರೂಪವಾಗಿ ಮಾಡಿಕೊಂಡು ಆ ರಾಕ್ಷಸಿಯ ಪ್ರಾಣವಾಯುವಿರುವ ಎದೇ ಗುಂಡಿಗೆಯನ್ನೆತ್ತಿಕೊಂಡು ಆಚೆಗೆದಾಟಿ ಅಂತರಿಕ್ಷಮಾರ್ಗದಲ್ಲಿ ಹೋದೆನು; ಆಮೇಲೆ ಸಿಂಹಿಕೆ ಎಂಬ ಆ ರಾಕ್ಷಸಿಯು ತನ್ನ ಬಾಹುಬಲವು ಗುಂದಿ ಲವಣಸಮುದ್ರದಲ್ಲಿ ಬಿದ್ದು ಮುಳುಗಿದಳು; ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ನನ್ನನ್ನು ನೋಡುತಿದ್ದ ಸಿದ್ಧಚಾರಣರು ಮೊದಲಾದ ದೇವತೆಗಳು 'ಕಟಕಟಾ! ಈ ಹನುಮಂತನು ಸಿಂಹಿಕೆಯನ್ನು ಒಂದು ಕ್ಷಣಮಾತ್ರದಲ್ಲಿ ಕೊಂದನಲ್ಲ! ಈತನು ಮಹಾಸಾಹಸಿಯು' ಎಂದು ನುಡಿದ ವಾರ್ತೆಯನ್ನು ಕೇಳಿದೆನು.

"ಈ ಮರ್ಯಾದೆಯಲ್ಲಿ ಆ ರಾಕ್ಷಸಿಯನ್ನು ಕೊಂದು ಬಹು ವಿಘ್ನಗಳನ್ನು ಕಳೆದುಬಂದೆನೆಂದು ಯೋಚನೆ ಮಾಡುತ ಮುಂದೆ ಬಹುದೂರವು ದಾಟಿಹೋಗಿ ಲಂಕಾಪಟ್ಟಣದಲ್ಲಿರುವ ಸಮುದ್ರದ ತೆಂಕಣತೀರಕ್ಕೆಹೋಗಿ ಸಾಯಂಕಾಲದಲ್ಲಿ ಸಮಸ್ತ ರಾಕ್ಷಸರಿಗೂ ಆವಾಸಸ್ಥಾನವಾದ ಆ ಪಟ್ಟಣವನ್ನು ಕಂಡು ಒಳಹೊಕ್ಕುಹೋಗುವ ಸಮಯದಲ್ಲಿ ಪಟ್ಟಣದ ಬಾಗಿಲಲ್ಲಿ ಪ್ರಳಯಕಾಲದ ಮೇಘಕ್ಕೆ ಸಮಾನವಾದ ಒಬ್ಬ ರಾಕ್ಷಸಿಯು ನನ್ನನ್ನು ಕಂಡು ಎದ್ದುಬಂದು ಆಹಾರಸಿಕ್ಕಿತೆಂದು ನನ್ನನ್ನು ಕೊಲ್ಲಬೇಕೆಂದು ಅಟ್ಟಿಕೊಂಡುಬರಲು ಅಗ್ನಿಜ್ವಾಲೆಯ ಮರ್ಯಾದೆಯಲ್ಲಿ ಮಂಡೇಕೂದಲುಳ್ಳವಳಾಗಿ ಅತಿ ಭಯಂಕರವಾದ ಆ ಲಂಕಾದೇವಿಯನ್ನು ಕಂಡು ನನ್ನ ಎಡಗೈಯ ಮುಷ್ಟಿಯಿಂದ ಹೊಡೆದೆನು; ಆ ರಾಕ್ಷಸಿಯು ಬಿದ್ದು ಮೂರ್ಛೆಗತಳಾಗಿ ಒಂದು ಕ್ಷಣಮಾತ್ರದಲ್ಲಿ ಎದ್ದು 'ಎಲೈ ವೀರಭಟನೇ, ನಾನು ಈ ಲಂಕಾಪಟ್ಟಣದ ಅಧಿದೇವತೆಯು; ನನ್ನನ್ನು ಜಯಿಸಿದಾಗಲೆ ಸಮಸ್ತ ರಾಕ್ಷಸರನ್ನೂ ಜಯಿಸುವೆ' ಎಂದು ನುಡಿದಳು!

" ಆಮೇಲೆ ಆ ರಾತ್ರಿಯಲ್ಲಿ ನಾನು ಲಂಕಾಪಟ್ಟಣದಲ್ಲಿ ಸಂಚರಿಸಿ ಸೀತಾದೇವಿಯನ್ನು ಕಾಣದೆ ರಾವಣನ ಅಂತಃಪುರವನ್ನು ಹೊಕ್ಕುನೋಡಿ ಅಲ್ಲಿಯೂ ಕಾಣದೆ ಅಪರಿಮಿತವಾದ ಶೋಕಸಾಗರದಲ್ಲಿ ಮುಳುಗಿ ಮುಂದುಕಾಣದೆ ಕಡೆಯಲ್ಲಿ ಸುವರ್ಣಮಯವಾದ ಕೋಟೆಯಮೇಲೇರಿ ಅತ್ಯಂತ ವಿಚಿತ್ರವಾದ ಒಂದು ಉದ್ಯಾನವನವನ್ನು ಕಂಡು ಆ ಕೋಟೆಯಿಂದ ನೆಗೆದುಹೋಗಿ ನಾನಾಪ್ರಕಾರವಾದ ಫಲಪುಷ್ಪಗಳಿಂದ ಇಟ್ಟಣಿಸಿದ ವೃಕ್ಷಗಳುಳ್ಳ ಅಶೋಕವನಮಧ್ಯದಲ್ಲಿ ಒಂದು ಶಿಂಶುಪಾವೃಕ್ಷವನ್ನು ಕಂಡು ಆ ಮರದ ಸಮೀಪದಲ್ಲಿ ಮನೋಹರವಾಗಿ ಸುವರ್ಣಮಯವಾದ ಬಾಗು ಕದಳವನವನ್ನು ಕಂಡು ಆ ವನದ ಸಮೀಪದಲ್ಲಿ ಉಪವಾಸ ವ್ರತಾದಿಗಳಿಂದ ಕೃಶಾಂಗಿಯಾಗಿ ಒಂದೇ ವಸ್ತ್ರವನ್ನುಟ್ಟುಕೊಂಡು ಮಂಡೆಯು ಧೂಳುಮಸಗಿ ಶ್ರೀರಾಮನ ವಿರಹತಾಪದಿಂದ ದೈನ್ಯಭಾವವನ್ನೈದಿ ಆತನನ್ನೇ ಧ್ಯಾನಮಾಡುತ ಸಮೀಪದಲ್ಲಿದ್ದ ಅತ್ಯಂತ ವಿಕಟಾಂಗಿಗಳಾದ ರಾಕ್ಷಸಸ್ತ್ರೀಯರ ಕಾವಲಿಗೊಳಗಾಗಿ ವ್ಯಾಘ್ರಗಳಿಗೆ ಸಿಕ್ಕಿದ ಹುಲ್ಲೆಯಮರಿಯಂತೆ ಮಾಂಸಾಹಾರಿಗಳಾದ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಅವರಿಂದ ಬೆದರಿಸಲ್ಪಟ್ಟವಳಾಗಿ ಒಂದು ಉಡೆಯನ್ನು ಧರಿಸಿಕೊಂಡು ಹೇಮಂತಕಾಲದ ಕಮಲದಂತೆ ತನುಕಾಂತಿಗುಂದಿ ಮನಸ್ಸಿನಲ್ಲಾದರೂ ರಾವಣನನ್ನು ನೆನಸದೆ ಮರಣವನ್ನು ನಿಶ್ಚಯಿಸಿಕೊಂಡಿದ್ದ ಶ್ರೀರಾಮನ ಪಟ್ಟದರಾಣಿಯಾದ ಸೀತಾದೇವಿಯನ್ನು ದೈವಾಧೀನದಿಂದ ಕಂಡೆನು, ನಾನು ಆ ಬಳಿಕ ಆ ಶಿಂಶುಪಾವೃಕ್ಷದಮೇಲೆ ಕುಳಿತುಕೊಂಡು ನೋಡುತ್ತಿರುವಸಮಯದಲ್ಲಿ ರಾವಣನ ಅರಮನೆಯಲ್ಲಿ ಕಾಂಚೀದಾಮ ಕಾಲಂದುಗೆ ಮೊದಲಾದ ರತ್ನಾಭರಣಗಳ ಗಂಭೀರವಾದ ಝಣಝಣಾತ್ಕಾರಧ್ವನಿಯು ಕೇಳಲ್ಪಟ್ಟಿತು; ಆಗ ನಾನು ಅದೇನು ಅದ್ಭುತವೆಂದು ದಿಗಿಲುಬಿದ್ದು ನನ್ನ ಶರೀರವನ್ನು ಸೂಕ್ಷ್ಮವಾಗಿ ಮಾಡಿಕೊಂಡು ಪಕ್ಷಿಯಂತೆ ಮರದಕೊಂಬುಗಳ ಮರೆಯಲ್ಲಿದ್ದುಕೊಂಡು ನೋಡುತಿದ್ದೆನು; ಆಮೇಲೆ ರಾವಣನು ತನ್ನ ಸ್ತ್ರೀಯರನ್ನು ಕೂಡಿಕೊಂಡು ಸೀತಾದೇವಿಯು ಇದ್ದೆಡೆಗೆಬಂದು ಆಕೆಯು ತನ್ನನ್ನು ಕಂಡು ತನ್ನ ಮೊಳಕಾಲುಗಳಿಂದಲೂ ತೋಳುಗಳಿಂದಲೂ ಎದೆಯನ್ನು ಮರೆಸಿಕೊಂಡು ಅತ್ಯಂತ ಭಯದಿಂದ ದಿಕ್ಕುಗಳನ್ನು ನೋಡುತ ಯಾರೂ ರಕ್ಷಕರಿಲ್ಲದೆ ನಡಗುತಿದ್ದದ್ದನ್ನು ಕಂಡು ಮೋಹದಿಂದ 'ಎಲೈ ಸೀತಾದೇವಿಯೆ, ಯಾವಪ್ರಕಾರದಲ್ಲಿಯಾದರು ನನ್ನ ಮಾತನ್ನು ಕೇಳಿ ಮನ್ನಿಸು, ಗರ್ವದಿಂದ ನನ್ನ ಮಾತನ್ನು ಮೀರಿದೆಯಾದರೆ ಎರಡುತಿಂಗಳು ತುಂಬಿದ ಮಾರನೇ ದಿವಸ ನಿನ್ನ ರಕ್ತಪಾನಮಾಡುವೆನು' ಎಂದು ನುಡಿದನು.

"ದುರಾತ್ಮನಾದ ರಾವಣನ ಮಾತನ್ನು ಕೇಳಿ ಸೀತಾದೇವಿಯು ಅತ್ಯಂತ ಕೋಪಯುಕ್ತಳಾಗಿ 'ಎಲೆ ರಾಕ್ಷಸಾಧಮನೆ, ಇಕ್ಷ್ವಾಕುವಂಶೋದ್ಧಾರಕನಾದ ದಶರಥಮಹಾರಾಯನ ಸೊಸೆಯಾಗಿ ಅತಿಪರಾಕ್ರಮಶಾಲಿಯಾದ ಶ್ರೀರಾಮನ ಪಟ್ಟದರಾಣಿಯಾದ ನನ್ನಲ್ಲಿ ನುಡಿಯಬಾರದ ಮಾತುಗಳನ್ನು ನುಡಿಯುವ ನಿನ್ನ ನಾಲಿಗೆ ಯಾಕೆ ಬೀಳದು! ಸೂರ್ಯಪ್ರಭೆಗಿದಿರಾದ ಮಿಂಚುಬುಳುವಿನಂತೆ ಮಹಾತ್ಮನಾದ ಶ್ರೀರಾಮನ ಪರಾಕ್ರಮದ ಮುಂದೆ ನಿನ್ನ ಪರಾಕ್ರಮವು ಎಷ್ಟು! ಆತನು ಇಲ್ಲದಸಮಯದಲ್ಲಿ ಮೋಸಮಾಡಿ ನನ್ನನ್ನಪಹರಿಸಿಕೊಂಡು ಬಂದೆ, ಆತನು ಕಂಡಿದ್ದರೆ ನಿನ್ನನ್ನು ಜೀವಸಹಿತವಾಗಿ ಬಿಟ್ಟಿರುವನೇ! ರಘುನಾಥನಿಗೆ ನೀನು ಸರಿಯೇ! ನೀನು ಆತನ ಊಳಿಗದವನಿಗೂ ಸರಿಯಲ್ಲ; ಆತನು ಯಜ್ಞಾದಿ ಸತ್ಕರ್ಮನಿಷ್ಠನು; ಸತ್ಯಸಂಧನು; ರಣರಂಗದಲ್ಲಿ ಅಸಹಾಯಶೂರನು' ಎಂದು ನಿಷ್ಠುರವಾಗಿ ನುಡಿದಳು.

"ರಾವಣನು ಅಗ್ನಿಯಂತೆ ಅತ್ಯಂತ ಕೋಪಾಟೋಪದಿಂದ ಉರಿದೆದ್ದು ಕಣ್ಣುಗಳನ್ನು ತಿರುಗಿಸುತ ಬಲಗೈಮುಷ್ಟಿಯನ್ನು ಮಡಿಸಿಕೊಂಡು ಸೀತಾದೇವಿಯನ್ನು ಕೊಲ್ಲುವದಕ್ಕೆ ಹೋಗಲು ಆತನ ಸಮೀಪದಲ್ಲಿದ್ದ ಸ್ತ್ರೀಯರು 'ಹಾಹಾ! ಕೊಲ್ಲಬೇಡ! ನಿಲ್ಲು!' ಎಂದು ತಡೆದರು ಆ ಸಮಯದಲ್ಲಿ ಆ ಸ್ತ್ರೀಯರ ಮಧ್ಯದಲ್ಲಿದ್ದ ಮಂಡೋದರಿ ಎಂಬ ರಾವಣನ ಪಟ್ಟದರಾಣಿಯು ಕೊಲ್ಲಲುದ್ಯೋಗಿಸಿದ ರಾವಣನನ್ನು ತಡೆದು ಸಂತವಿಡುತ 'ಎಲೈ ರಾಕ್ಷಸೇಶ್ವರನೆ, ನಿನಗೆ ಈ ಸೀತಾದೇವಿಯಿಂದ ಏನು ಪ್ರಯೋಜನವು! ನೀನು ಭೋಗದಲ್ಲಿ ದೇವೇಂದ್ರನಿಗೆ ಸಮಾನವಾದವನು; ನಿನಗೆ ದೇವಸ್ತ್ರೀಯರು ಗಂಧರ್ವಸ್ತ್ರೀಯರು ಯಕ್ಷಸ್ತ್ರೀಯರು ಮೊದಲಾದ ಅನೇಕ ರೂಪ

ಲಾವಣ್ಯ ವಿಲಾಸ ವಿಭ್ರಮವುಳ್ಳ ಸ್ತ್ರೀಯರಿಧಾರೆ, ಅವರೊಡನೆ ರಮಿಸಿಕ್ಕೊಂಡು ಸುಖದಲ್ಲಿರು; ಈ ದೇವಿಯು ಬಂದು ಮಾತಾಡುವದಕ್ಕೆ ಕಾರ್ಯವೇನು!' ಎಂದು ನುಡಿದಳು.

"ಆ ಮಾತು ಕೇಳಿ ರಾವಣನು ತನ್ನ ಸ್ತ್ರೀಯರನ್ನು ಕರದುಕ್ಕೊಂಡು ತನ್ನ ಮನೆಗೆ ಹೋದನು, ಆಮೇಲೆ ರಾಕ್ಷಸಸ್ತ್ರೀಯರು ಅನೇಕ ನಿಷ್ಠುರವಚನಗಳಿಂದ ಬೆದರಿಸಿದರೂ ಸೀತಾದೇವಿಯು ಅವನ್ನು ಲಕ್ಷ್ಯಿಸದೆ ತೃಣಕ್ಕೆ ಸರಿಯಾಗಿ ಕಂಡು ಸುಮ್ಮನಿದ್ದಳು, ಆ ರಾಕ್ಷಸಿಯರು ಬೇಸತ್ತು ಆ ದೇವಿಯಿಂದ ರಾವಣನಿಗೆ ಕಾರ್ಯವಿಲ್ಲವೆಂದು ನಿಶ್ಚಯಿಸಿ ಅತ್ಯಂತ ಸಾವಧಾನವಾದ ಕಾವಲನ್ನು ಬಿಟ್ಟು ಅಲ್ಲಲ್ಲಿ ನಿದ್ರೆಮಾಡುತಿದ್ದರು, ಆಗ ಸೀತಾದೇವಿಯು ತನ್ನ ಪತಿಯನ್ನು ಧ್ಯಾನಮಾಡುತ ಬಹಳವಾಗಿ ಹಂಬಲಿಸಿ ದುಃಖಾಕ್ರಾಂತೆಯಾಗಿರಲು ಆ ರಾಕ್ಷಸಿಯರ ಮಧ್ಯದಲ್ಲಿ ಮಲಗಿದ್ದ ತ್ರಿಜಟೆಯೆಂಬ ರಾಕ್ಷಸಿಯು ಸ್ವಪ್ನವನ್ನು ಕಂಡು ಎದ್ದು ಕುಳಿತುಕ್ಕೊಂಡು ಆ ರಾಕ್ಷಸಿಯರನ್ನೆಬ್ಬಿಸಿ 'ಎಲೇ ರಾಕ್ಷಸಿಯರಿರಾ, ನೀವು ಬೇಕಾದರೆ ನನ್ನನ್ನು ಭಕ್ಷಿಸಿಕ್ಕೊಳ್ಳೀ, ಸೀತಾದೇವಿಯದಾರಿ ಹೋಗಬೇಡಿ, ಆ ದೇವಿಯು ಜನಕರಾಯನ ಮಗಳು; ದಶರಥರಾಯನ ಸೊಸೆಯು, ಇನ್ನಿವಳನ್ನು ಬೆದರಿಸಬೇಡಿ, ನಾನು ಮಹಾಭಯಂಕರವಾಗಿ ಅತ್ಯದ್ಭುತವಾದ ಸ್ವಪ್ನವನ್ನು ಕಂಡೆನು; ಸಮಸ್ತ ರಾಕ್ಷಸಬಲಕ್ಕೂ ಅಪಜಯವಾಗುವಹಾಗೂ ಸೀತಾದೇವಿಯ ಪ್ರಾಣಕಾಂತನಾದ ಶ್ರೀರಾಮನಿಗೆ ಜಯವಾಗುವಹಾಗೂ ನಾನು ಸ್ವಪ್ನವನ್ನು ಕಂಡೆನು; ನಾವಿನ್ನು ಈಕೆಯನ್ನು ಕಾವಲುಮಾಡಿಕ್ಕೊಂಡಿರುವದನ್ನು ಸಾಕುಮಾಡಿ ಈ ದೇವಿಯನ್ನು ಸಂತವಿಟ್ಟು ಬೇಡಿಕ್ಕೊಳ್ಳಬೇಕು, ಸೀತಾದೇವಿಗೆ ದುಃಖವು ಹೋಗಿ ಸುಖವಾಗುವಂಥಾ ಭಾಗ್ಯವದೆ; ಈ ದೇವಿಯಲ್ಲಿ ಶರಣುಹೊಕ್ಕರೆ ಈಕೆಯು ಮನಸ್ಸಿನಲ್ಲಿ ರೋಷವನ್ನು ಬಿಟ್ಟು ನಮ್ಮನ್ನು ರಕ್ಷಿಸುವಳು' ಎಂದು ನುಡಿದಳು

"ಆ ಮಾತುಗಳನ್ನು ಕೇಳಿ ಸೀತಾದೇವಿಯು ಲಜ್ಜೆಯಿಂದ ತಲೆಬಾಗಿ ಯಾವಪ್ರಕಾರದಲ್ಲಾದರೂ ತನ್ನ ಪತಿಯಾಗ ಶ್ರೀರಾಮನಿಗೆ ಜಯವಾಗುವದೆಂದು ಕೇಳಲ್ಪಟ್ಟದ್ದಕ್ಕೆ ಸಂತೋಷಪಟ್ಟು ತ್ರಿಜಟೆಯನ್ನು ನೋಡಿ 'ಎಲೈ ತ್ರಿಜಟೆಯೇ, ನೀನು ಹೇಳಿದ ಮಾತು ಸತ್ಯವಾದರೆ ನಿಮ್ಮನ್ನು ರಕ್ಷಿಸುವೆನು' ಎಂದು ನುಡಿದಳು.

"ಆ ಸಮಯದಲ್ಲಿ ನಾನು ಸೀತಾದೇವಿಯ ದುಃಖಾವಸ್ಥೆಯನ್ನು ಕಂಡು ಅತ್ಯಂತ ದುಃಖಾಕ್ರಾಂತನಾಗಿ ಮನಸ್ಸಿಗೆ ಸಮಾಧಾನವನ್ನು ಕಾಣದೆ ಆ ದೇವಿಯಕೂಡೆ ಸಂಭಾಷಣೆಮಾಡುವದಕ್ಕೆ ಉಪಾಯವೇನೆಂದು ಚಿಂತಿಸಿ ಇಕ್ಷ್ವಾಕುವಂಶ ಸ್ತೋತ್ರವನ್ನು ಮಾಡಿ ಶ್ರೀರಾಮನ ಗುಣಕಥನಗಳನ್ನು ಕೊಂಡಾಡುತಿರಲು ಸೀತಾದೇವಿಯು ಮರದಮೇಲಿದ್ದ ನನ್ನನ್ನು ನೋಡಿ ಕಣ್ಣೀರುತುಂಬಿಕ್ಕೊಂಡು ನನ್ನನ್ನು ಕುರಿತು 'ಎಲೈ ಕಪಿನಾಯಕನೇ, ನೀನ್ಯಾರು? ಎತ್ತಲಿಂದ ಏನುಕಾರಣ ಇಲ್ಲಿಗೆ ಬಂದೆ? ಈ ದುರ್ಘಟವಾದ ಸ್ಥಳಕ್ಕೆ ಬಂದ ಕಾರ್ಯವೇನು? ನೀನು ಶ್ರೀರಾಮನನ್ನು ಕೊಂಡಾಡುವದಕ್ಕೆ ಆತನ ಪ್ರೀತಿಯು ಹ್ಯಾಗೆ ಹುಟ್ಟಿತು?' ಎಂದು ಕೇಳಿದಳು.

"ನಾನು 'ಎಲೈ ಸೀತಾದೇವಿಯೇ, ನನ್ನೊಡೆಯನಾದ ಸುಗ್ರೀವನು ನಿನ್ನ ಪತಿಯಾದ ಶ್ರೀರಾಮನ ಸಖನು; ಸುಗ್ರೀವನ ಅಪ್ಪಣೆಯಿಂದ ನಿನ್ನ ಪತಿಯಾದ ರಘುನಾಥನು ತನ್ನ ಕುರುಹಿನ ಮುದ್ರೆ ಉಂಗುರವನ್ನು ಕೊಟ್ಟು ನಿನ್ನ ಪರಿಣಾಮಸ್ಥಿತಿಯನ್ನು ಕೇಳಿ ವಿಚಾರಿಸಿಬರಹೇಳಿ ನಿನ್ನ ಸಮೀಪಕ್ಕೆ ಕಳುಹಿಸಿದ್ದರಿಂದ ನಾನು ಇಲ್ಲಿಗೆ ಬಂದೆನು' ಎಂದು ಮುದ್ರೇ ಉಂಗುರವನ್ನು ಕೊಟ್ಟು 'ಎಲೈ ಸೀತಾದೇವಿಯೆ, ನಾನಿನ್ನು ನಿನಗೆ ಮಾಡುವ ಪ್ರಯೋಜನವೇನು? ನೀನು ಬಂದರೆ ರಾಮಲಕ್ಷ್ಮಣರ ಸಮೀಪಕ್ಕೆ ಕರದುಕ್ಕೊಂಡು ಹೋಗುವೆನು' ಎಂದು ಹೇಳಿದೆನು.

"ಸೀತಾದೇವಿಯು 'ಎಲೈ ಕಪಿನಾಯಕನೆ, ಶ್ರೀರಾಮನು ಬಂದು ರಾವಣನನ್ನು ಸಂಹರಿಸಿ ನನ್ನನ್ನು ಕರದುಕ್ಕೊಂಡುಹೋಗುವದು ಕಾರ್ಯವಲ್ಲದೆ ನೀನು ನನ್ನನ್ನು ಕರದುಕ್ಕೊಂಡು ಹೋಗುವದು ಕಾರ್ಯವಲ್ಲ' ಎಂದು ಹೇಳಲು ಮಹಾಪ್ರಸಾದವೆಂದು ಆ ದೇವಿಯ ಮಾತನ್ನಂಗೀಕರಿಸಿ ಆಕೆಗೆ ಅಭಿವಂದಿಸಿ ಶ್ರೀರಾಮನ ಮನಸ್ಸಿಗೆ ವಿಶ್ವಾಸವಾಗುವಹಾಗೆ ಒಂದು ಕುರುಹನ್ನು ಕೇಳಿದೆನು; ಆಕೆಯು ತನ್ನ ಮಾಸಿದ ಶರಗಿನಲ್ಲಿ ಗಂಟುಹಾಕಿದ್ದ ಚೂಡಾಮ

ಣಿಭೂಷಣವನ್ನು ಬಿಚ್ಚಿಕೊಟ್ಟು ಅದರಿಂದ ಶ್ರೀರಾಮನು ವಿಶ್ವಾಸವು ಹುಟ್ಟಿ ಅತ್ಯಂತ ಸಂತೋಷಪಟ್ಟು ನಿನಿಗೆ ಬಹುಸನ್ಮಾನಮಾಡುವನೆಂದು ಹೇಳಿದಳು, ನಾನು ಆ ಭೂಷಣವನ್ನು ತೆಗದುಕೊಂಡು ರಾಮಲಕ್ಷ್ಮಣರಿಗೆ ಮನಸ್ಸಿನಲ್ಲಿ ನಮಸ್ಕರಿಸಿ ಕಳುಹಿಸಿಕೊಂಡು ಬರುತ್ತಿರುವ ಸಮಯದಲ್ಲಿ ಆ ದೇವಿಯು ತಿರುಗೂ ನನ್ನನ್ನು ಕರದು 'ಎಲೈ ಹನುಮಂತನೆ, ಸುಗ್ರೀವಸಹಿತರಾದ ರಾಮಲಕ್ಷ್ಮಣರು ಹ್ಯಾಗೆ ನನ್ನಮೇಲೆ ದಯೆಮಾಡಿ ನನ್ನನ್ನು ಇಲ್ಲಿಂದ ಕರದುಕೊಂಡು ಹೋಗುವರೊ ಹಾಗೆ ಯತ್ನಮಾಡು; ನಾನಿಲ್ಲಿ ಎರಡುತಿಂಗಳು ಪರಿಯಂತರ ಜೀವಿಸಿಕೊಂಡಿರುವೆನು; ಆಮೇಲೆ ಅನಾಥೆಯಾಗಿ ಇಲ್ಲೇ ಶರೀರವನ್ನು ಬಿಡುವೆನು, ಆಮೇಲೆ ನನ್ನನ್ನು ಕಾಣಲಾಗದು' ಎಂದು ಅತ್ಯಂತ ದೈನ್ಯೋಕ್ತಿಯಿಂದ ನುಡಿದಳು.

"ಆ ಮಾತನ್ನು ಕೇಳಿ ನಾನು ಅತ್ಯಂತ ಕೋಪಯುಕ್ತನಾಗಿ ಮುಂದಣಕಾರ್ಯವನ್ನು ಯೋಚಿಸಿಕೊಂಡು ಅತ್ಯಂತ ಪರ್ವತಾಕಾರವಾಗಿ ನನ್ನ ಶರೀರವನ್ನು ಬೆಳಸಿಕೊಂಡು ಯಾವಪ್ರಕಾರದಲ್ಲಾದರೂ ಜಗಳವುಂಟುಮಾಡಿ ರಾಕ್ಷಸರನ್ನು ಸಂಹರಿಸಬೇಕೆಂದು ನಿಶ್ಚಯಿಸಿಕೊಂಡು ಲಂಕಾಪಟ್ಟಣದಲ್ಲಿದ್ದ ರಾಕ್ಷಸರು ಸುಮ್ಮನೇ ಯುದ್ಧಕೆ ಬಾರರೆಂದು ಯೋಚಿಸಿ ಅಶೋಕವನವನ್ನು ಮುರಿದುಹಾಕಿದೆನು, ಆ ವನಕ್ಕೆ ಕಾವಲಾಗಿದ್ದ ರಾಕ್ಷಸಿಯರು ನಿದ್ರೆತಿಳಿದೆದ್ದು ಮುರಿದ ವನವನ್ನು ನೋಡಿ ನನ್ನನ್ನು ಕಂಡು ಅತಿವೇಗದಿಂದ ರಾವಣನ ಸಮೀಪಕ್ಕೆ ಹೋಗಿ 'ಎಲೈ ಜೀಯಾ, ಅವನ್ಯಾರೋ ಒಬ್ಬ ದುರಾತ್ಮನಾದ ವಾನರನು ಬಂದು ನಿನ್ನ ವಿನೋದಕ್ರೀಡೆಗೆ ಯೋಗ್ಯವಾದ ಅಶೋಕವನವೆಲ್ಲವನ್ನು ಮುರಿದು ನಿರ್ನಾಮಮಾಡಿದನು; ಆ ದುರಾತ್ಮನಿಗೆ ಆಜ್ಞೆಯನ್ನು ಮಾಡಬೇಕು' ಎಂದು ಹೇಳಿದರು.

"ಆ ಮಾತನ್ನು ಕೇಳಿ ರಾವಣನು ಅತ್ಯಂತ ಕೋಪಯುಕ್ತನಾಗಿ ತನ್ನ ಊಳಿಗದವರಾದ ಎಂಭತ್ತುಸಾವಿರ ಮಂದಿ ರಾಕ್ಷಸರನ್ನು ಕಳುಹಿಸಿದನು; ನಾನು ಅವರಕೂಡೆ ಯುದ್ಧವನ್ನು ಮಾಡಿ ಆ ತೋಟದ ಬಾಗಿಲ ಕದದ ಲಾಳವಂಡಿಗೆಯನ್ನು ತೆಗೆದುಕೊಂಡು ಅವರೆಲ್ಲರನ್ನು ಸಂಹರಿಸಿದೆನು, ಆ ಬಲದಲ್ಲಿ ಉಳಿದ ರಾಕ್ಷಸರು ಓಡಿಹೋಗಿ ರಾವಣನಿಗೆ ಮೊರೆಯಿಟ್ಟರು; ನಾನು ಆ ಬಾಗಿಲಮುಂದಿದ್ದ ಸಜ್ಜೆಯ ಚಾವಡಿಯಲ್ಲಿ ಕುಳಿತುಕೊಂಡಿದ್ದೆನು ಲಂಕಾಪಟ್ಟಣಕ್ಕೆ ಭೂಷಣವಾದ ಅಶೋಕವನವನ್ನು ಮುರಿದು ಅನೇಕಮಂದಿ ರಾಕ್ಷಸರನ್ನು ಸಂಹರಿಸಿದ ವೃತ್ತಾಂತವನ್ನು ಕೇಳಿ ರಾವಣನು ಅತ್ಯಂತ ಕೋಪಯುಕ್ತನಾಗಿ ಪ್ರಹಸ್ತನ ಮಗನಾದ ಜಂಬುಮಾಲಿಯನ್ನು ಅನೇಕ ರಾಕ್ಷಸಸೇನೆಯನ್ನು ಕೂಡಿಸಿ ಯುದ್ಧಕ್ಕೆ ಕಳುಹಿಸಿದನು; ನಾನು ಮೊದಲಂತೆ ಆ ಲಾಳವಂಡಿಗೆಯನ್ನು ತೆಗೆದುಕೊಂಡು ಜಂಬುಮಾಲಿಯನ್ನೂ ಆತನಕೂಡೆಬಂದ ರಾಕ್ಷಸರನ್ನೂ ಸಂಹರಿಸಿದೆನು, ಆಮೇಲೆ ಆ ವೃತ್ತಾಂತವನ್ನು ಕೇಳಿ ರಾವಣನು ತನ್ನ ಪ್ರಧಾನರ ಮಕ್ಕಳನ್ನು ಅನೇಕ ಬಲಗಳನ್ನು ಕೂಡಿಸಿ ಕಳುಹಿಸಿದನು; ನಾನು ಆ ಲಾಳವಂಡಿಗೆಯಿಂದಲೇ ಆ ಬಲಗಳನ್ನೂ ಆ ಮಂತ್ರಿಕುಮಾರರನ್ನೂ ಕೊಂದೆನು, ಆಮೇಲೆ ರಾವಣನು ಐದು ಮಂದಿ ಸೇನಾನಾಯಕರನ್ನು ಸಮಸ್ತ ಬಲಸಹಿತವಾಗಿ ಕಳುಹಿಸಿದನು; ನಾನು ಅವರನ್ನೂ ಸಂಹರಿಸಿದೆನು, ಆಮೇಲೆ ರಾವಣನು ಅನೇಕ ಬಲವನ್ನು ಕೂಡಿಸಿ ತನ್ನ ಮಗನಾದ ಅಕ್ಷನನ್ನು ಕಳುಹಿಸಿದನು; ನಾನು ಆತನ ಕಾಲುಗಳನ್ನಿಡಿದು ನೆಲಕ್ಕೆ ಅಪ್ಪಳಿಸಿ ಅನೇಕಬಾರಿ ಹೊಡೆದು ಯಮನ ಮಂದಿರಕ್ಕೆ ಕಳುಹಿಸಿದೆನು, ಅಕ್ಷನ ನಿರ್ಯಾಣವಾರ್ತೆಯನ್ನು ಕೇಳಿ ರಾವಣನು ದುಃಖಾಕ್ರಾಂತನಾಗಿ ರಣರಂಗಮಲ್ಲನಾದ ಇಂದ್ರಜಿತ್ತನ್ನು ಕರೆದು ಅನೇಕ ಪಟುಭಟರಾದ ರಾಕ್ಷಸಬಲವನ್ನು ಕೂಡಿಸಿ ನನ್ನ ಕೂಡೆ ಯುದ್ಧಕ್ಕೆ ಕಳುಹಿಸಿದನು; ಇಂದ್ರಜಿತ್ತು ನನ್ನ ಕೂಡೆ ಬಹುಯುದ್ಧವನ್ನು ಮಾಡಿ ಕಂಗೆಟ್ಟು ಮೊದಲು ನನ್ನ ಕೂಡೆ ಯುದ್ಧಕ್ಕೆಬಂದು ಮಡಿದ ರಾಕ್ಷಸರ ಪಾಡನ್ನು ಸ್ಮರಿಸಿ ಬ್ರಹ್ಮಾಸ್ತ್ರದಿಂದಲೇ ನನ್ನನ್ನು ಜಯಿಸಬೇಕಲ್ಲದೆ ಮತ್ತೊಂದರಿಂದ ಸಾಧ್ಯವಲ್ಲವೆಂದು ನಿಶ್ಚಯಿಸಿ ನನ್ನಮೇಲೆ ಬ್ರಹ್ಮಾಸ್ತ್ರಪ್ರಯೋಗವನ್ನು ಮಾಡಿದನು; ನಾನು ಮೂರೂಮುಕ್ಕಾಲುಘಳಿಗೆ ಆ ಬ್ರಹ್ಮಾಸ್ತ್ರದಿಂದ ಕಟ್ಟುಪಡೆದು ಆಮೇಲೆ ಯಾವಪ್ರಕಾರದಲ್ಲಾದರೂ ರಾವಣನನ್ನು ಕಂಡು ಸಂಭಾಷಣೆ ಮಾಡಬೇಕೆಂದೆಣಿಸಿ ಸುಮ್ಮನೆ ಇ

ದ್ದೆನು, ಆತನು ನನ್ನನ್ನು ಕಟ್ಟಿಸಿಕೊಂಡು ಹೋಗಿ ರಾವಣನಿಗೆ ಒಪ್ಪಿಸಿದನು; ರಾವಣನು ನನ್ನನ್ನು ನೋಡಿ ಪ್ರಹಸ್ತನನ್ನು ಕರೆದು ನಾನು ಬಂದಕಾರಣವನ್ನು ವಿಚಾರಿಸಲು ಕಟ್ಟುಮಾಡಿದನು; ಪ್ರಹಸ್ತನು ನನ್ನನ್ನು 'ನೀ ನ್ಯಾರು? ಎಲ್ಲಿಂದ ಬಂದೇ? ಬಂದ ಕಾರ್ಯವೇನು? ಅಶೋಕವನವನ್ನು ಯಾವಕಾರ್ಯಕ್ಕಾಗಿ ಮುರಿದೆ? ಸಮ ಸ್ತ ಬಲಗಳನ್ನು ಯಾಕೆ ಸಂಹರಿಸಿದೆ?' ಎಂದು ಕೇಳಿದನು.

"ನಾನು ಪ್ರಹಸ್ತನನ್ನು ಕುರಿತು 'ಎಲೈ ಪ್ರಹಸ್ತನೆ, ನಾನು ಸುಗ್ರೀವನ ಪ್ರಧಾನನು; ಶ್ರೀರಾಮನ ದೂ ತನು, ವಾಯುದೇವನ ಕುಮಾರನು; ನನ್ನನ್ನು ಹನುಮಂತನೆಂಬುವರು, ನಾನು ಸೀತಾದೇವಿಯನ್ನರಸಿ ಕಾಣ ಬೇಕೆಂದು ಇಲ್ಲಿಗೆ ಬಂದೆನು, ನನ್ನ ಒಡೆಯನಾದ ಸುಗ್ರೀವನು ನಿಮ್ಮ ಪರಿಣಾಮಸ್ಥಿತಿಯನ್ನು ಕೇಳಿ ಧರ್ಮಾರ್ಥ ರಹಸ್ಯವಾದ ಒಂದು ಮಾತನ್ನು ಹೇಳಿ ಬರಹೇಳಿದನು, ಆತನು ಋಷ್ಯಮೂಕಪರ್ವತದಲ್ಲಿ ಶ್ರೀರಾಮನ ಕೂಡೆ ಮಿತ್ರತ್ವವನ್ನು ಮಾಡಿಕೊಂಡು ವಾಲಿಯು ತನಿಗೆ ದ್ರೋಹಮಾಡಿದ ವೃತ್ತಾಂತವನ್ನು ಹೇಳಿ ರಘುನಾಥನು ತನ್ನ ಸ್ತ್ರೀ ಯಾದ ಸೀತಾದೇವಿಯನ್ನು ರಾವಣನು ಅಪಹರಿಸಿಕೊಂಡು ಹೋದನೆಂದು ಹೇಳಿದ್ದನ್ನು ಕೇಳಿ ಆತನೊಡನೆ ಅನ್ಯೋ ನ್ಯವಾಗಿ ಅಗ್ನಿಸಾಕ್ಷಿಕವಾಗಿ ಮಿತ್ರತ್ವವನ್ನು ಮಾಡಿಕೊಂಡು ರಘುನಾಥನು ಆತನ ಶತ್ರುವಾದ ವಾಲಿಯನ್ನು ಸಂಹ ರಿಸಿ ರಾಜ್ಯವನ್ನು ಕೊಡುವದಾಗಿ ಮಾತುಕೊಡಲು ಯಾವಪ್ರಕಾರದಲ್ಲಾದರೂ ಸೀತಾದೇವಿಯನ್ನರಸಿ ತಂದುಕೊ ಡುವದಾಗಿ ಮಾತು ಕೊಟ್ಟನು; ಆಮೇಲೆ ರಘುನಾಥನು ವಾಲಿಯನ್ನು ಸಂಹರಿಸಿ ಸುಗ್ರೀವನಿಗೆ ಪಟ್ಟವನ್ನು ಕಟ್ಟಿ ದನು, ಆಮೇಲೆ ಸತ್ಯಸಂಧನಾದ ಸುಗ್ರೀವನು ಶ್ರೀರಾಮನು ತನಗೆ ಎಂದಿಗೂ ಮರೆಯದ ಉಪಕಾರವನ್ನು ಮಾ ಡಿದ್ದರಿಂದ ತಾನು ಆತನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂದು ನಿಶ್ಚಯಿಸಿ ನನ್ನನ್ನು ಇಲ್ಲಿಗೆ ಕಳುಹಿಸಿದನು; ನಾನು ಸುಗ್ರೀವನ ಮಾತಿನಿಂದ ನಿಮ್ಮ ಸಮೀಪಕ್ಕೆ ಬಂದೆನು; ಆತನ ಗುರಿಕಾರರಾದ ಕಪಿನಾಯಕರು ಬಂದು ನಿಮ್ಮ ಬಲಗಳನ್ನು ಸಂಹರಿಸುವದಕ್ಕೆ ಮೊದಲೇ ಸೀತಾದೇವಿಯನ್ನು ಶ್ರೀರಾಮನ ವಶಕ್ಕೆ ಕಳುಹಿಸಿದರೆ ಕ್ಷೇಮ ವಾದೀತು, ಶ್ರೀರಾಮನ ಪ್ರಭಾವವನ್ನು ಯಾರೂ ಅರಿತವರಿಲ್ಲ, ರಾಮಲಕ್ಷ್ಮಣರು ದೇವಲೋಕಕ್ಕೆ ಹೋಗಿ ಸಂಚರಿಸುವದಕ್ಕೂ ಸಮರ್ಥರು' ಎಂದು ಹೇಳಿದೆನು.

"ರಾವಣನು ನನ್ನ ಮಾತುಗಳನ್ನು ಕೇಳಿ ತನ್ನ ಕೋಪಾಗ್ನಿಯಿಂದ ನನ್ನನ್ನು ದಹಿಸಿಬಿಡುವಂತೆ ಕ್ರೂರ ದೃಷ್ಟಿಯಿಂದ ನೋಡಿ ನನ್ನನ್ನು ಹಿಂಸೆಮಾಡಹೇಳಿ ರಾಕ್ಷಸರಿಗೆ ಆಜ್ಞಾಪಿಸಿದನು; ಆಗ ಆತನ ತಮ್ಮನಾದ ವಿಭೀಷ ಣನು ತನ್ನ ಹಿರಿಯಣ್ಣನಾದ ರಾವಣನ ಸಮೀಪಕ್ಕೆ ಬಂದು ಅನೇಕ ವಿನಯೋಕ್ತಿಗಳಿಂದ 'ಎಲೈ ರಾಕ್ಷಸೇಶ್ವರನೆ, ಅರಸುಗಳು ದೂತರನ್ನು ಕೊಲ್ಲುವುದು ರಾಜನೀತಿಯಲ್ಲ, ನೀತಿಶಾಸ್ತ್ರದಲ್ಲಿ ದೂತವಧೆಯನ್ನು ಕಾಣೆನು, ಎಲ್ಲಿಯೂ ಕೇಳಲೂ ಇಲ್ಲ, ಅರಸರಾದವರು ಪರರಾಷ್ಟ್ರವೃತ್ತಾಂತವನ್ನು ತಮಗೆ ಆಪ್ತರಾದ ದೂತರ ಮುಖಾಂತರದಿಂದಲೇ ತಿಳಿಯಬೇಕಲ್ಲದೆ ಮತ್ತೊಂದುಪಾಯವಿಲ್ಲ; ದೂತನು ಮಾಡಬಾರದ ಅಪರಾಧವನ್ನು ಮಾಡಿದರೂ ಅಂಗವೈಕಲ್ಯ ಮಾಡಿ ಹೊರಡಿಸಿಬಿಡುವದೇ ಶಾಸ್ತ್ರಸಿದ್ಧವು' ಎಂದು ಹೇಳಿದನು.

"ಆ ಮಾತನ್ನು ಕೇಳಿ ರಾವಣನು 'ಹಾಗಾದಪಕ್ಷದಲ್ಲಿ ಕಪಿಗಳಿಗೆ ಬಾಲವು ಮುಖ್ಯವಾದ ಅಂಗವು, ಈ ಕಪಿಯ ಬಾಲವನ್ನು ಸುಟ್ಟುಬಿಡೀ' ಎಂದು ಆಜ್ಞಾಪಿಸಿದನು.

"ಆಗ ಅನೇಕ ರಾಕ್ಷಸರು ನನ್ನ ಬಾಲಕ್ಕೆ ಅನೇಕ ವಸ್ತ್ರಗಳನ್ನು ಸುತ್ತಿ ಎಣ್ಣೆಯಲ್ಲಿ ನೆನೆಯಿಸಿ ಬೆಂಕಿ ಹತ್ತಿಸಿ ನನ್ನನ್ನು ಹೆಡಕಟ್ಟುಕಟ್ಟಿಕೊಂಡು ರಾಜಬೀದಿಗಳಲ್ಲಿ ಸಾರುತ ನನ್ನನ್ನು ಊರುಬಾಗಲಿಗೆ ತಂದರು; ಆಗ ನಾನು ದೊಡ್ಡದಾಗಿದ್ದ ನನ್ನ ಶರೀರವನ್ನು ಸೂಕ್ಷ್ಮಶರೀರಮಾಡಿಕೊಂಡು ಆ ಕಟ್ಟುಗಳನ್ನು ಸಡಲಿಸಿಕೊಂಡು ಮೊದಲಹಾಗೆ ಬಹು ಉದ್ದ ಘನಗಾತ್ರವಾದ ಶರೀರವನ್ನು ತಾಳಿ ಆ ಊರುಬಾಗಲ ಲಾಳವಂಡಿಗೆಯನ್ನು ತೆಗೆದು ಕೊಂಡು ಕಾವಲಾಗಿ ಬಂದ ರಾಕ್ಷಸರನ್ನು ಸಂಹರಿಸಿ ಅತಿವೇಗದಿಂದ ಆ ಊರುಬಾಗಿಲ ಬುರುಜಿನಮೇಲೆ ಹತ್ತಿ ಕೊಂಡು ಉರಿಯುತಿದ್ದ ನನ್ನ ಬಾಲದಿಂದ ಆ ಪಟ್ಟಣದಲ್ಲಿದ್ದ ಸಮಸ್ತ ಉಪ್ಪರಿಗೆ ಗೋಪುರ ಮೇಲುಮಚ್ಚು ಮು

ಗಿಲಟ್ಟಣೆ ಮೊದಲಾದವನ್ನು ಪ್ರಳಯಕಾಲಾಗ್ನಿಯು ಸಮಸ್ತ ಲೋಕವನ್ನೂ ದಹಿಸುವಂತೆ ದಹಿಸಿ ದಹನವಾದ ಲಂಕಾಪಟ್ಟಣವನ್ನು ನೋಡಿ ಆ ಪಟ್ಟಣದೊಳಗಾಗಿ ಬಂದಿಷ್ಟಾದರೂ ದಹನವಾಗದಿದ್ದ ಸ್ಥಳವಿಲ್ಲದಿರಲು ಅವಶ್ಯವಾಗಿ ಸೀತಾದೇವಿಯು ಅಗ್ನಿಯಲ್ಲಿ ದಹನವಾಗಿ ಹೋದಳೆಂಬ ಅರ್ಥದಲ್ಲಿ ಸಂಶಯವಿಲ್ಲವೆಂದು ನಿಶ್ಚಯಿಸಿ ಅಜ್ಞಾನದಿಂದ ಶ್ರೀರಾಮನ ಕಾರ್ಯವನ್ನು ಕೆಡಿಸಿದೆನೆಂದು ಅಧಿಕವಾದ ದುಃಖಾಕ್ರಾಂತನಾಗಿದ್ದ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ಸಿದ್ಧ ಚಾರಣರು ತಮ್ಮೊಳಗೆ ತಾವು 'ಕಟಕಟಾ! ಈ ಹನುಮಂತನು ಎಂಥಾ ಸಾಹಸಿಯೋ—ಎಂಥಾ ಪ್ರಾಜ್ಞನೋ—ಸೀತಾದೇವಿಯೊಬ್ಬಳನ್ನುಳಿಸಿ ಲಂಕಾಪಟ್ಟಣವೆಲ್ಲವನ್ನೂ ದಹಿಸಿದನು!' ಎಂದು ನುಡಿಯುತಿದ್ದ ಅದ್ಭುತವಾದ ವಾಕ್ಯವನ್ನು ಕೇಳಿ ಸಂತೋಷಪಟ್ಟು ಸಿದ್ಧಚಾರಣರ ವಾಕ್ಯದಿಂದಲೂ ನನ್ನ ಬಾಲವನ್ನು ದಹನಮಾಡುವ ಸಮಯದಲ್ಲಿ ನನಗೆ ಉರಿತಟ್ಟದೆ ಶೈತ್ಯವಾಗಿದ್ದದ್ದರಿಂದಲೂ ತಾತ್ಕಾಲಿಕವಾದ ಶುಭನಿಮಿತ್ತಗಳಾದುದರಿಂದಲೂ ಸೀತಾದೇವಿಯು ದಹನವಾಗಲಿಲ್ಲವೆಂದು ನಿಶ್ಚಯಿಸಿ ಅತಿ ಸಂತೋಷಪಟ್ಟು ಸೀತಾದೇವಿಯನ್ನು ಕಂಡು ಸಂಭಾಷಣೆಮಾಡಿ ನಿಶ್ಚಯಿಸಿಕೊಂಡು ಹೋಗಬೇಕೆಂದು ಆ ದೇವಿಯ ಸಮೀಪಕ್ಕೆ ಹೋಗಿ ನಮಸ್ಕರಿಸಿ ಕಳುಹಿಸಿಕೊಂಡು ಸುನಾಭಪರ್ವತಕ್ಕೆ ಬಂದು ನಿಮ್ಮ ದರ್ಶನವನ್ನುಮಾಡಬೇಕೆಂಬ ಇಚ್ಛೆಯಿಂದ ಚಂದ್ರಸೂರ್ಯರು ವಾಯು ಸಿದ್ಧ ಗಂಧರ್ವರು ಸಂಚರಿಸುವ ಅಂತರಿಕ್ಷಮಾರ್ಗದಲ್ಲಿ ಸಮುದ್ರವನ್ನು ದಾಟಿ ಮಹೇಂದ್ರಪರ್ವತಕ್ಕೆ ಬಂದು ಶ್ರೀರಾಮನ ಕೃಪೆಯಿಂದಲೂ ನಿಮ್ಮ ಆಶೀರ್ವಾದದ ಮಹಿಮೆಯಿಂದಲೂ ಸುಗ್ರೀವನು ಕಳುಹಿಸಿದ ಕಾರ್ಯವನ್ನು ಸಾಧ್ಯಮಾಡಿಕೊಂಡು ನಿಮ್ಮನ್ನು ಕಂಡೆನು! ಇದೀಗ ನಾನು ಹೋಗಿಬಂದ ಕಾರ್ಯಸ್ಥಿತಿ! ಇನ್ನು ಮುಂದೆಮಾಡುವ ಕಾರ್ಯಗತಿಯನ್ನು ನೋಡಿಕೊಳ್ಳಿ!" ಎಂದು ಹೇಳಿದನು.

---

## ೫೯ನೇ ಅಧ್ಯಾಯ.

### ಅಂಗದನು ರಾವಣನನ್ನು ಸಂಹರಿಸಬೇಕೆಂದದ್ದು.

ಮತ್ತೂ ಹನುಮಂತನು "ಎಲೈ ಜಾಂಬವನೆ, ಶ್ರೀರಾಮನ ಕಾರ್ಯೋದ್ಯೋಗವು ಸಫಲವಾಯಿತು; ಸುಗ್ರೀವನ ಮನಸ್ಸಿಗೆ ಹರ್ಷವಾಯಿತು; ಸೀತಾದೇವಿಯ ಶೀಲವನ್ನು ಕಂಡು ನನ್ನ ಮನಸ್ಸು ಕರಗಿತು; ರಾವಣನು ಬಹುಕಾಲವು ತಪಸ್ಸುಮಾಡಿದವನು; ಆತನು ಕೋಪಿಸಿಕೊಂಡನಾದರೆ ತನ್ನ ತಪಸ್ಸಿನ ಸಾಮರ್ಥ್ಯದಿಂದ ಸಮಸ್ತ ಲೋಕಗಳನ್ನೂ ದಹಿಸಬಲ್ಲನು; ಪ್ರಸನ್ನನಾದರೆ ರಕ್ಷಿಸಬಲ್ಲನು; ಅಂಥಾ ರಾವಣನು ಬಹಳವಾಗಿ ಹೆಚ್ಚಿಇಥಾನೆ, ಸೀತಾದೇವಿಯ ಶರೀರವು ಸೋಕಿದರೂ ತನ್ನ ತಪಸ್ಸಿನ ಸಾಮರ್ಥ್ಯದಿಂದ ನಾಶವಾಗಲಿಲ್ಲ; ಆ ದೇವಿಯು ಕೋಪಮಾಡಿದರೆ ಪರಪುರುಷರನ್ನು ದಹಿಸುವವಳಾದರೂ ಅಂಗೈಯಲ್ಲಿರಿಸಿದ ಬೆಂಕಿಯಹಾಗಾದಳು" ಎಂದು ನುಡಿದನು.

ಆ ಮಾತು ಕೇಳಿ ಅಂಗದನು ಜಾಂಬವನನ್ನು ಕುರಿತು "ಎಲೈ ಜಾಂಬವನೇ ಕೇಳು; ಹನುಮಂತನು ಹೇಳಿದಮೇಲೆ ನಾವು ಅವಶ್ಯವಾಗಿ ಸೀತಾಲಕ್ಷ್ಮಣಸಮೇತನಾಗಿ ಶ್ರೀರಾಮನನ್ನು ಕಣ್ಣಿಂದ ನೋಡುವದೇ ಕಾರ್ಯವು; ನಾನೊಬ್ಬನೇ ರಾವಣನನ್ನು ಕೊಂದು ಸಮಸ್ತ ರಾಕ್ಷಸಬಲಸಮೇತವಾದ ಲಂಕಾಪಟ್ಟಣವನ್ನು ಸುಡಬಲ್ಲೆನು; ಇನ್ನು ಶಸ್ತ್ರಾಸ್ತ್ರಕುಶಲರಾಗಿ ಮಹಾಬಲವಂತರಾಗಿ ವಿಜಯೋತ್ಸಾಹವುಳ್ಳ ನಿಮ್ಮಂಥಾ ಪಟುಭಟರು ಕೂಡಿದರೆ ಹೇಳುವದೇನು! ನಾನೊಬ್ಬನೇ ಪುತ್ರಮಿತ್ರ ಸಹೋದರಬಲಸಹಿತನಾದ ರಾವಣನ ಕೂಡೆ ಯುದ್ಧವನ್ನು ಮಾಡಿ ಜಯಿಸಬಲ್ಲೆನು; ರಣರಂಗದಲ್ಲಿ ರಾವಣನ ಕುಮಾರನಾದ ಇಂದ್ರಜಿತ್ತಿಂದ ಪ್ರಯೋಗಿಸಲ್ಪಡುವ ಬ್ರಹ್ಮಾಸ್ತ್ರ ಐಂದ್ರಾಸ್ತ್ರ ರೌದ್ರಾಸ್ತ್ರ ವಾಯವ್ಯಾಸ್ತ್ರ ಮೊದಲಾದ ಮಂತ್ರಾಸ್ತ್ರಗಳನ್ನು ನಾನು ಲೆಕ್ಕಿಸುವವನಲ್ಲ; ಆ ಅಸ್ತ್ರಗಳನ್ನು ಸಂಹರಿಸಿ ರಾಕ್ಷಸರನ್ನು ಸಂಹರಿಸಬಲ್ಲೆನು; ನಿಮ್ಮ ಅನುಜ್ಞೆಯಿಂದಲೂ ನನ್ನ ಪರಾಕ್ರಮದಿಂದಲೂ ಯುದ್ಧ

ದಲ್ಲಿ ನಾನು ಕರೆಯುವ ಕಲ್ಲುಮಳೆಯನ್ನು ದೇವತೆಗಳು ಮೊದಲಾಗಿ ಸಂಹರಿಸಲಾರರು, ಇನ್ನು ರಾಕ್ಷಸರ ಪಾಡೇನು! ಎಲೈ ಜಾಂಬವನೆ, ಒಂದು ಕಾಲಕ್ಕೂ ಸಮುದ್ರವು ತಡಿಯನ್ನು ಮೀರದು, ಮಂದರಪರ್ವತವು ಚಲಿಸದು, ಶತ್ರುಸೇನೆಗಳು ನನ್ನನ್ನು ಕದಲಿಸಲಾರವು! ಈಗಿರುವ ರಾಕ್ಷಸರೆಲ್ಲರನ್ನು ಸಮರದಲ್ಲಿ ಹನುಮಂತನೊಬ್ಬನೇ ಕೊಲ್ಲಸಮರ್ಥನು, ಪನಸನೂ ನೀಲನೂ ಸುಮ್ಮನೇ ನಡೆದುಹೋದರೂ ಅವರ ತೊಡೆಗಳು ತಾಕಿ ಮಂದರಗಿರಿಪರ್ವತವಾದರೂ ಒಡೆದು ತುಮುಲಾಂತವಾಗುವದು, ಇವರು ಯುದ್ಧಕ್ಕೆ ನಿಂತರಾದರೆ ರಾಕ್ಷಸರ ಪಾಡೇನು! ಮೈಂಧ ದ್ವಿವಿಧರ ಸಾಹಸವನ್ನೇನುಹೇಳಲಿ! ದೇವಾಸುರ ಯಕ್ಷ ರಾಕ್ಷಸ ಗಂಧರ್ವ ಕಿನ್ನರ ಕಿಂಪುರುಷರಲ್ಲಿ ಯಾರೂ ಇವರಕೂಡೆ ಯುದ್ಧವನ್ನು ಮಾಡುವವರನ್ನು ಕಾಣೆನು! ನಳ ಸುಷೇಣರಿಗಿದಿರಾಗಿ ನಿಲ್ಲುವವರನ್ನೇ ಕಾಣೆನು!" ಎಂದು ನುಡಿದನು!

ಆ ಬಳಿಕ ಹನುಮಂತನು "ಎಲೈ ಜಾಂಬವನೇ, ನಾನು ಲಂಕಾಪಟ್ಟಣದ ರಾಜಬೀದಿಯಲ್ಲಿ 'ಮಹಾ ಬಲವಂತನಾದ ಲಕ್ಷ್ಮಣಸಮೇತನಾದ ಶ್ರೀರಾಮನು ಜಯವಂತನಾಗಲಿ! ಆತನಿಂದ ಪರಿಪಾಲಿಸಲ್ಪಟ್ಟ ಸುಗ್ರೀವನು ಜಯವಂತನಾಗಲಿ! ನಾನು ಕೋಸಲರಾಜ್ಯಾಧಿಪತಿಯಾದ ಶ್ರೀರಾಮನ ಭೃತ್ಯನು! ಸುಗ್ರೀವನ ಪ್ರಧಾನನು; ನನ್ನ ಹೆಸರು ಹನುಮಂತನು!' ಎಂದು ಕೇರಿಕೇರಿಯಲ್ಲಿ ಸಾರಿ ಅಷ್ಟುಮಂದಿ ರಾಕ್ಷಸರೂ ನೋಡುತಿದ್ದಹಾಗೆ ಲಂಕಾಪಟ್ಟಣವನ್ನು ಒಬ್ಬನೇ ಭಸ್ಮಮಾಡಿದೆನು; ಇನ್ನು ನಿಮ್ಮಂಥಾವರು ಹೋದರೆ ರಾವಣನನ್ನು ಜಯಿಸಬಹುದೆಂಬುದರಲ್ಲಿ ಸಂಶಯವೇನು! ಹಾಗಾದರು ಅಶೋಕವನದ ಮಧ್ಯದಲ್ಲಿ ಶಿಂಶುಪಾವೃಕ್ಷದಡಿಯಲ್ಲಿ ಪತಿವ್ರತಾಶಿರೋಮಣಿಯಾದ ಸೀತಾದೇವಿಯೊಬ್ಬಳೇ ಕುಳಿತುಕೊಂಡು ರಾಕ್ಷಸಸ್ತ್ರೀಯರ ಕಾವಲಿಗೊಳಗಾಗಿ ದೈನ್ಯಭಾವವನ್ನೈದಿ ಮೇಘಮಂಡಲದ ಮಧ್ಯದಲ್ಲಿ ತೋರುವ ಚಂದ್ರನ ಕಳೆಯಂತೆ ತನುಕಾಂತಿಗುಂದಿ ಶ್ರೀರಾಮನ ವಿರಹಶೋಕದಿಂದ ಕೃಶಾಂಗಿಯಾಗಿ ಆ ಸ್ವಾಮಿಯನ್ನೇ ಧ್ಯಾನಮಾಡುತ ರಾವಣನನ್ನು ಲೆಕ್ಕಿಸದೆ ಶಚೀದೇವಿಯು ದೇವೇಂದ್ರನಲ್ಲಿ ಮನಸ್ಸಿಡುವಂತೆ ಶ್ರೀರಾಮನಲ್ಲಿ ಮನಸ್ಸಿಟ್ಟು ಒಂಟಿ ವಸ್ತ್ರವನ್ನುಟ್ಟುಕೊಂಡು ಶರೀರವೆಲ್ಲವೂ ಧೂಳುಮುಸುಗಿ ಒಂಟಿ ಜಡೆಯುಳ್ಳವಳಾಗಿ ಅತಿ ಘೋರರೂಪಿಗಳಾದ ರಾಕ್ಷಸಸ್ತ್ರೀಯರ ಬಂಧನೆಗೊಳಗಾಗಿ ಹಿಮಂತಕಾಲದ ತಾವರೇ ಕಮಲದಂತ ಮುಖಕಾಂತಿಗುಂದಿ ಹಂಬಲಿಸುತ ಮರಣವನ್ನೇ ನಿಶ್ಚಯಿಸಿಕೊಂಡು ಅತ್ಯಂತ ಪ್ರಯಾಸದಿಂದ ಜೀವವಿಡಿದಿದ್ದಾಳೆ; ಆ ದೇವಿಯು ನನ್ನನ್ನು ಕರೆದು ನನ್ನ ಕೂಡೆ ಮನವಂಚನೆ ಇಲ್ಲದೆ ಸಂಭಾಷಣೆಮಾಡಿ ತನ್ನ ಪತಿಯಾದ ಶ್ರೀರಾಮನಿಗೂ ಸುಗ್ರೀವನಿಗೂ ಮಿತ್ರತ್ವವಾದ ವಾರ್ತೆಯನ್ನು ಕೇಳಿ ಅತ್ಯಂತ ಸಂತೋಷಯುಕ್ತಳಾಗಿ ತನ್ನ ಪತಿಯಲ್ಲಿ ಅತ್ಯಂತ ಭಕ್ತಿಯುಳ್ಳವಳಾಗಿ ನನ್ನನ್ನು ನೋಡಿ 'ಎಲೈ ಹನುಮಂತನೆ, ರಾವಣನನ್ನು ವಧೆಮಾಡುವಲ್ಲಿ ಸಮಸ್ತ ಕಾರ್ಯವನ್ನೂ ಸಾಧ್ಯಮಾಡುವವನು ನೀನಲ್ಲದೆ ಮತ್ಯಾರು ಇಲ್ಲ' ಎಂದು ಉಪಚಾರವಾಗಿ ನುಡಿದು ಅಶೋಕವನಮಧ್ಯದಲ್ಲಿಯೇ ಹಂಬಲಿಸುತಿದ್ದಳು! ಮುಂದಣ ರಾಜಕಾರ್ಯಸ್ಥಿತಿಯನ್ನು ನೀವೇ ನೋಡಿಕೊಳ್ಳೀ!" ಎಂದು ಹೇಳಿದನು.

---

## ೬೦ ನೇ ಅಧ್ಯಾಯ.

### ಜಾಂಬವನು ಶ್ರೀರಾಮನ ಅಪ್ಪಣೆಯ ಪ್ರಕಾರ ನಡಿಯಬೇಕೆಂದದ್ದು.

ಆ ಬಳಿಕ ಅಂಗದನು ಜಾಂಬವದಾದಿಗಳನ್ನು ಕುರಿತು "ಎಲೈ ಜಾಂಬವನೇ, ನಳಸುಷೇಣರ ಮಹಿಮೆಯು ಎಂಥಾದ್ದೆಂದರೆ: ಅವರು ಅಶ್ವಿನೀದೇವತೆಗಳ ಮಕ್ಕಳು; ಅವರಿಗೆ ದೇವಾಸುರರಿಂದಲೂ ಮರಣವಿಲ್ಲದಹಾಗೆ ಪೂರ್ವದಲ್ಲಿ ಬ್ರಹ್ಮದೇವನು ವರವನ್ನು ಕೊಟ್ಟನು; ಅವರಿಬ್ಬರೂ ಸಮರದಲ್ಲಿ ಕೋಪಿಸಿಕೊಂಡರೆ ಸಮಸ್ತ ರಾಕ್ಷಸಬಲವನ್ನೂ ಸಂಹರಿಸಿ ಲಂಕಾಪಟ್ಟಣವನ್ನು ದಹಿಸುವರು, ಅವರೆಲ್ಲರು ಹಾಗಿರಲಿ. ಕಡೆಗೆ ನಾನೊಬ್ಬನೇ ಮಹಾ ಬಲವಂತನಾದ ರಾವಣನನ್ನು ಕೊಂದು ಲಂಕಾಪಟ್ಟಣವನ್ನು ನಿರ್ನಾಮವಾಗಿ ಮಾಡುವೆನು; ಅದೂ ಹಾಗಿರಲಿ;

ಈಗ ವಾಯುಪುತ್ರನಾದ ಹನುಮಂತನು ಒಬ್ಬನೇ ಹೋಗಿ ಅನೇಕ ರಾಕ್ಷಸಬಲವನ್ನು ಸಂಹರಿಸಿ ಲಂಕಾಪಟ್ಟಣವನ್ನು ಭಸ್ಮಮಾಡಿ ಬಂದನೆಂದು ಹೇಳಿದ ಮಾತನ್ನು ನಾವೆಲ್ಲರು ಕೇಳಿದೆವಲ್ಲ, ಇಷ್ಟರಮೇಲೆ ನಮ್ಮಂಥಾ ಪರಾಕ್ರಮಶಾಲಿಗಳು ಸೀತಾದೇವಿಯ ವೃತ್ತಾಂತವನ್ನು ಕೇಳಿಯೂ ಆ ದೇವಿಯನ್ನು ಕರದುಕೊಂಡುಹೋಗಿ ಶ್ರೀರಾಮನಿಗೆ ಒಪ್ಪಿಸದೆ ಸುಮ್ಮನೆ ಕಂಡುಬಂದೆವೆಂದು ಹೇಳುವದು ಉಚಿತವಲ್ಲವೆಂದು ನನ್ನ ಮನಸ್ಸಿಗೆ ತೋರುತ್ತದೆ, ಈ ಸಮುದ್ರವನ್ನು ದಾಟಿಹೋಗುವದಕ್ಕೆ ಪರಾಕ್ರಮದಲ್ಲಿ ದೇವಾಸುರರೊಳಗಾಗಿ ನಮಗೆ ಸರಿಯಾದವರಿಲ್ಲ, ಆ ಹನುಮಂತನೊಬ್ಬನೇ ಹೋಗಿ ರಾಕ್ಷಸಬಲವೇಗವನ್ನು ಮುರಿದುಬಂದನು; ಇನ್ನು ನಾವೀಕಾರ್ಯದಲ್ಲಿ ಹೊಸದಾಗಿ ಮಾಡುವ ಪ್ರಯತ್ನವೇನಿದೆ! ಅವಶ್ಯವಾಗಿ ಶ್ರೀರಾಮನ ಸಮೀಪಕ್ಕೆ ಸೀತಾದೇವಿಯನ್ನು ಕರದುಕೊಂಡು ಹೋಗಬೇಕು" ಎಂದು ನುಡಿದನು.

ಆಮೇಲೆ ಸರ್ವಜ್ಞನಾದ ಜಾಂಬವನು ಅರ್ಥಗಂಭೀರವುಳ್ಳ ಮಾತುಗಳಿಂದ ಆತನನ್ನು ಕುರಿತು "ಎಲೈ ಅಂಗದನೆ, ನೀನು ನಿನ್ನ ಮನಸ್ಸಿನ ಉತ್ಸಾಹದಿಂದ ಹೇಳುತಿದ್ದೀ; ಹಾಗಾದರೂ ನೀನು ಹೇಳುವ ಮಾತು ನನ್ನ ಮನಸ್ಸಿಗೆ ಸರಿಬಾರದು, ನಮ್ಮನ್ನು ಸೀತಾದೇವಿ ಇರುವ ಸ್ಥಳವನ್ನು ಕಂಡುಬರಬೇಕೆಂದು ಹೇಳಿದ್ದರಿಂದ ನಾವು ಆ ದೇವಿಯನ್ನು ಕಂಡುಬಂದೆವೆಂದು ಶ್ರೀರಾಮನಕೂಡೆ ಹೇಳಿದರೆ ಆತನೇ ಮುಂದಿನ ಕಾರ್ಯಸ್ಥಿತಿಯನ್ನು ಯೋಚಿಸಿಕೊಳ್ಳಲಿ!" ಎಂದು ಹೇಳಿದನು.

---

## ೬೨ನೇ ಅಧ್ಯಾಯ.

### ವಾನರವೀರರು ಮಧುವನವನ್ನು ಸೂರೆಹೊಡದದ್ದು.

ಆ ಬಳಿಕ ಅಂಗದನು ಹನುಮಂತನು ಮೊದಲಾದ ಕಪಿನಾಯಕರು ಜಾಂಬವನು ಹೇಳಿದಮಾತನ್ನಂಗೀಕರಿಸಿ ಅತ್ಯಂತ ಸಂತೋಷಯುಕ್ತರಾಗಿ ಮೇರುಪರ್ವತ ಮಂದರಪರ್ವತಗಳಿಂದ ಮದ್ದಾನೆಗಳು ಹೊರಟು ಬರುವಂತೆ ಮಹೇಂದ್ರಪರ್ವತದಿಂದ ಅಂತರಿಕ್ಷಮಾರ್ಗಕ್ಕೆ ನೆಗೆದುಹೋಗುತಿದ್ದರು; ಆ ಸಮಯದಲ್ಲಿ ಅತ್ಯಂತ ಸತ್ವಸಾಹಸವುಳ್ಳವನಾಗಿ ಮಹಾ ಬಲವಂತನಾಗಿ ಅತಿವೇಗವುಳ್ಳ ಹನುಮಂತನ ಸಂಗಡ ಹೋಗುತ್ತಿದ್ದ ಕಪಿನಾಯಕರು ಆತನನ್ನು ತಮ್ಮ ದೃಷ್ಟಿಗಳಿಂದ ಹೊತ್ತುಕೊಂಡು ಹೋಗುತ್ತಿಧಾರೋ ಎಂಬಂತೆ ಎವೆ ಹೊಣಚದೆ ನೋಡುತ ರಘುನಾಯಕನ ಕಾರ್ಯಸ್ಥಿತಿಯನ್ನು ತಿಳಿದು ಬಂದ್ದದ್ದರಿಂದ ಆತನಿಗೆ ಅತ್ಯಂತ ಕೀರ್ತಿಸಂಭವಿಸಿತೆಂದು ಮನಸ್ಸಿನಲ್ಲಿ ನೆನಸುತ ಶ್ರೀರಾಮನಿಗೆ ಸೀತಾದೇವಿಯನ್ನು ಕಂಡುಬಂದರೆಂಬ ಪ್ರೀತಿವಾರ್ತೆಯನ್ನು ಹೇಳಿದರೆ ಎಲ್ಲರಿಗೂ ರಾಕ್ಷಸರಕೂಡೆ ಯುದ್ಧವು ಬರುವದೆಂದು ಸಂತೋಷಪಟ್ಟು ತಮ್ಮ ಒಡೆಯನಾದ ಸುಗ್ರೀವನಿಗೆ ಉಪಕಾರ ಮಾಡಿದ ಶ್ರೀರಾಮನಿಗೆ ಪ್ರತ್ಯುಪಕಾರವು ಮಾಡುವ ಭಾಗ್ಯವು ಸಂಭವಿಸಿತೆಂದು ಒಬ್ಬರಿಗೊಬ್ಬರು ಸಂಭಾಷಣೆ ಮಾಡಿಕೊಳ್ಳುತ ದೇವೇಂದ್ರನ ಉದ್ಯಾನವನಕ್ಕೆ ಸರಿಯಾದ ಸುಗ್ರೀವನ ಮಧುವನವನ್ನು ಕಂಡು ಸಮಸ್ತ ಪ್ರಾಣಿಗಳಿಗೂ ಮನೋಹರವಾಗಿ ದೇವಾಸುರರಿಗೂ ಹೊಕ್ಕುಹೋಗುವದಕ್ಕೆ ಅಸಾಧ್ಯವಾಗಿ ಸುಗ್ರೀವನ ಸೋದರ ಮಾವನಾದ ದಧಿಮುಖನೆಂಬ ಕಪಿನಾಯಕನಿಂದ ರಕ್ಷಿಸಲ್ಪಟ್ಟ ಮಧುವನವನ್ನು ನೋಡಿ ಅತ್ಯಂತ ಸಂತೋಷಯುಕ್ತರಾಗಿ ತಮಗೆ ಆಹಾರಾರ್ಥವಾಗಿ ಜೇನುತುಪ್ಪ ಹಣ್ಣು ಫಲಾದಿಗಳಿಗೆ ಅಪ್ಪಣೆಕೊಡಬೇಕೆಂದು ಅಂಗದನನ್ನು ಕೇಳಿದರು. ಆತನು ಜಾಂಬವದಾದಿ ಕಪಿನಾಯಕರನ್ನು "ಈ ಮಧುವನವನ್ನು ಈ ಕಪಿನಾಯಕರಿಗೆಲ್ಲರಿಗೂ ಆಹಾರಾರ್ಥವಾಗಿ ಸೂರೆಯಾಗಿ ಬಿಡಬಹುದೆ!" ಎಂದು ಕೇಳಿ ಅವರ ಸಮ್ಮತದಿಂದ ಸಮಸ್ತ ಕಪಿನಾಯಕರನ್ನೂ ಕರದು "ನಿಮ್ಮ ಮನಸ್ಸುಬಂದಂತೆ ಈ ವನದಲ್ಲಿರುವ ಜೇನುತುಪ್ಪ ಕಂದಮೂಲಫಲಾದಿಗಳನ್ನು ಆಹಾರಮಾಡಿಕೊಳ್ಳಿ" ಎಂದು ಅಪ್ಪಣೆಕೊಟ್ಟು ಸೂರೆಯಾಗಿ ಬಿಟ್ಟನು.

ಆ ಮಾತನ್ನು ಕೇಳಿ ಕಪಿನಾಯಕರು ಅತ್ಯಂತ ಸಂತೋಷಯುಕ್ತರಾಗಿ ಕೆಲವರು ನರ್ತನವನ್ನು ಮಾಡುತಿದ್ದರು, ಕೆಲವರು ನಮಸ್ಕಾರಮಾಡುತಿದ್ದರು, ಕೆಲವರು ನಗುತಿದ್ದರು, ಕೆಲವರು ನೆಗೆದುನೆಗೆದು ಬೀಳುತಿದ್ದರು, ಕೆಲವರು ಇತ್ತಲ ಅತ್ತಲ ಓಡಿಯಾಡುತಿದ್ದರು; ಕೆಲವರು ಗಾನಮಾಡುತಿದ್ದರು, ಕೆಲವರು ಬೊಬ್ಬಿಟ್ಟು ಕೂಗುತಿದ್ದರು; ಕೆಲವರು ಒಬ್ಬರನ್ನೊಬ್ಬರು ತಕ್ಕೈಸಿಕೊಳ್ಳುತಿದ್ದರು; ಕೆಲವರು ಒಬ್ಬರನ್ನೊಬ್ಬರು ನೂಕಿ ವಿನೋದಾರ್ಥವಾಗಿ ತಿರುಗಾಡುತಿದ್ದರು; ಕೆಲವರು ಅಳುತ ನಗುತ ಇದ್ದರು; ಮತ್ತೂ ಕೆಲವರು ಒಬ್ಬರಕತ್ತನ್ನೊಬ್ಬರು ಹಿಡಿದುಕೊಂಡು ಹೋಗುತಿದ್ದರು; ಈ ಮರ್ಯಾದೆಯಲ್ಲಿ ಆ ಕಪಿಸೇನೆಯು ಮಧುಪಾನಮಾಡಿ ಮದಸೊಕ್ಕಿ ನಾನಾವಿಧವಾದ ಚೇಷ್ಟೆಗಳನ್ನು ಮಾಡುತಿರಲು ಅವರೊಳಗಾಗಿ ಮಧುಪಾನಮಾಡಿ ಮದಸೊಕ್ಕದಿದ್ದವರೇ ಇಲ್ಲ, ತೃಪ್ತಿಪಡೆಯದಿದ್ದವರೇ ಇಲ್ಲ; ಈಪ್ರಕಾರವಾಗಿ ಆ ಕಪಿಸೇನಾನಾಯಕರು ನಾಮುಂಚೆ ನೀಮುಂಚೆ ಎಂದು ಮಧುಪಾನವನ್ನು ಮಾಡುತಿರಲು ಅವರ ಕೈಕಾಲುಗಳು ತಾಕಿ ಎಲೆಗಳುದುರಿ ಕಿರಿಗೊಂಬುಗಳು ಮುರಿದು ಸುಳಿಘೊಳಗೆ ಸಿಕ್ಕಿದಂತೆ ಭಯಂಕರವಾಗುತ್ತಿರಲು ಆ ವನರಕ್ಷಕನಾದ ದಧಿಮುಖನು ಅತ್ಯಂತ ಕೋಪಯುಕ್ತನಾಗಿ ಆ ಕಪಿಗಳನ್ನು ಹೊರಡಿಸುತ್ತಿದ್ದನು; ಆಸೇನೆಯಲ್ಲಿದ್ದ ಗರಿಕಾರರಾದ ಕಪಿನಾಯಕರು ದಧಿಮುಖನನ್ನು ತಗಲಿಕೊಂಡು "ಬಹಳವಾಗಿ ಬಳಲಿಬಂದ ಕಪಿಗಳು ಈ ಮಧುವನಕ್ಕೆ ಬಂದು ಬಂದಿಷ್ಟು ಜೇನುತುಪ್ಪವನ್ನು ತೆಗೆದುಕೊಂಡು ಪರ್ಣಫಲಭಕ್ಷಣ ಮಾಡಿದರೆ ಏನಾಯಿತು!" ಎಂದು ಹೇಳಿದರು, ಮತ್ತೂ ದಧಿಮುಖನ ಕಪಿಸೇನೆಯಲ್ಲಿ ಕೆಲವರು ನಿಷ್ಠುರವಚನಗಳನ್ನು ನುಡಿದೂ ಕೆಲವರು ಅಂಗೈಯಿಂದ ಹೊಡದೂ ಕೆಲವರು ಜಗಳಮಾಡಿಯೂ ಮತ್ತು ಕೆಲವರು ಮೃದುನುಡಿಗಳಿಂದಲು ಅವರನ್ನು ಹೊರಡಿಸುತಿರಲು ಆ ಕಪಿಗಳಲ್ಲಿ ಕೆಲವರು ದಧಿಮುಖನನ್ನು ಇತ್ತಲ ಅತ್ತಲ ಎಳೆಯುತ ಕೆಲವರು ಆತನ ಶರೀರವನ್ನು ಉಗುರುಗಳಿಂದ ಸೀಳುತ ಕೆಲವರು ದಂತಗಳಿಂದ ಕಚ್ಚುತ ಕೆಲವರು ಕೈಗಳಿಂದ ಹೊಡೆಯುತ ಕಾಲುಗಳಿಂದ ಒದೆಯುತ ಕಂಗೆಡಿಸಿ ಕಂಗೊಳಪ ಮಧುವನವನ್ನು ಗಾರುಮಾಡುತಿದ್ದರು

## ೬೦ನೇ ಅಧ್ಯಾಯ.

### ದಧಿಮುಖನು ಮಧುವನಭಂಗವನ್ನು ತಿಳಿಸಲು ಸುಗ್ರೀವನಬಳಿಗೆ ಹೋದದ್ದು.

ಆಮೇಲೆ ಹನುಮಂತನು ಕಪಿನಾಯಕರನ್ನು ಕುರಿತು "ಎಲೈ ಕಪಿನಾಯಕರಿರಾ, ನೀವು ಮನಸ್ಸಿನಲ್ಲಿ ಚಿಂತೆಯನ್ನು ಬಿಟ್ಟು ಜೇನುತುಪ್ಪವನ್ನು ತೆಗೆದುಕೊಳ್ಳಿ, ನಿಮ್ಮನ್ನು ಯಾರೂ ಬಾಧೆಮಾಡದಹಾಗೆ ನಾನು ಕಾದುಕೊಂಡಿರುತ್ತೇನೆ" ಎಂದು ನುಡಿದನು.

ಅಂಗದನು ಮನೋಹರ್ಷದಿಂದ "ಹನುಮಂತನು ಹೇಳಿದ್ದೇ ಸರಿ, ಹನುಮಂತನು ಅಲ್ಲದಕಾರ್ಯವನ್ನು ಹೇಳಿದರೂ ಮಾಡಬೇಕು, ಸಮಸ್ತ ಕಾರ್ಯವನ್ನೂ ಆತನೇ ಸಾಧ್ಯಮಾಡುವನು, ಆತನಿದ್ದಮೇಲೆ ಈ ಕಾರ್ಯದಲ್ಲಿ ಸಂಶಯವೇನು! ನೀವು ಒಬ್ಬರೂ ಅಂಜಬೇಡೀ, ಅವಶ್ಯವಾಗಿ ಮಧುಪಾನವನ್ನು ಮಾಡಿ ನಿಮ್ಮ ಶರೀರದ ಬಳಲಿಕೆಯನ್ನು ಪರಿಹರಿಸಿಕೊಳ್ಳೀ" ಎಂದು ಹನುಮಂತನು ನುಡಿದಮಾತಿಗನುಕೂಲವಾಗಿ ನುಡಿದನು

ಆ ಮಾತುಗಳನ್ನು ಕೇಳಿ ಕಪಿನಾಯಕರೆಲ್ಲರು ಅತ್ಯಂತ ಸಂತೋಷಯುಕ್ತರಾಗಿ ಅಂಗದನನ್ನು ಬಹಳವಾಗಿ ಕೊಂಡಾಡಿ ನದೀಪ್ರವಾಹವು ಹರಿಯುವಂತೆ ಎಲ್ಲರೂ ಮಧುವನಕ್ಕೆ ನುಗ್ಗಿ ಸೀತಾದೇವಿಯನ್ನು ಕಂಡುಬಂದ ಸಲಿಗೆಯಿಂದಲೂ ಅಂಗದನು ಸೂರೆಯಾಗಿ ಬಿಟ್ಟನೆಂಬ ಧೈರ್ಯದಿಂದಲೂ ಮನಸ್ಸಿನಲ್ಲಿ ಶಂಕಾತಂಕವಿಲ್ಲದೆ ಆ ವನದಲ್ಲಿದ್ದ ಜೇನುತುಪ್ಪವನ್ನೂ ಸ್ವಾದುವಾದ ಫಲಗಳನ್ನೂ ಪರಿಗ್ರಹಿಸುತಿದ್ದರು ಆ ವನವನ್ನು ಕಾದುಕೊಂಡಿದ್ದ ಕಪಿನಾಯಕರು ಮಧುಪಾನಮಾಡಿ ಮಲಗಿದ್ದ ಕಪಿಗಳನ್ನು ಬೆದರಿಸಲು ಅವರು ಆ ಕಾವಲುಗಾರರನ್ನು ಪೆಟ್ಟಿಕ್ಕುತ ಒಬ್ಬರಿಂದೊಬ್ಬರು ಜೇನುತುಪ್ಪಗಳನ್ನು ತೆಗೆದುಕೊಂಡು ಅಧಿಕವಾಗಿ ಮದಸೊಕ್ಕಿ ಕೆಲವರು ಮನಸ್ಸಿಗೆ ಬಂದ ಪ್ರಲಾಪಗ

ಳನ್ನು ನುಡಿಯುತಲೂ ಕೆಲವರು ಅರಿವೆಮುರವೆಗಳುಳ್ಳವರಾಗಿಯೂ ಕೆಲವರು ಮದಸೊಕ್ಕಿ ಮರದಕೊಂಬುಗಳ ನ್ನು ಹಿಡಿದುಕೊಂಡೂ ಕೆಲವರು ಅತ್ಯಂತ ಬಳಲಿಕೆಯಿಂದ ತಳಿರುಗಳನ್ನು ಹಾಸಿಕೊಂಡು ಮಲಗಿಯೂ ಕೆಲವ ರು ನೆಲದಮೇಲೆ ಮಲಗಿಯೂ ಕೆಲವರು ಮಧುಪಾನದಿಂದ ನಗುತಲೂ ಕೆಲವರು ಬೇಟೆಯಾಡುತಲೂ ಇದ್ದರು; ಕೆಲವರು ಆ ವನಪಾಲಕರನ್ನು ಪೆಟ್ಟಿಕ್ಕಿ ಅವರಿಗೆ ತಮ್ಮ ಹಿಂಭಾಗಗಳನ್ನು ತೋರಿಸಲು ಅವರು ಲಜ್ಜಿತರಾಗಿ ತಮ್ಮ ಒಡೆಯನಾದ ದಧಿಮುಖನೊಡನೆ "ಎಲೈ ಒಡೆಯನೆ, ಅಂಗದನು ಮಧುವನಕ್ಕೆ ಬಂದು ಸಮಸ್ತ ಕಪಿಸೇನೆಗೆ ಮಧುವನ್ನು ಸೂರೆಯಾಗಿ ಕೊಡಲು ನಾವು ಸೂರೆಮಾಡಬಾರದೆಂದು ತಡೆದೆವು; ಅವರೆಲ್ಲರು ಕೂಡಿ ನಮ್ಮನ್ನ ಮೊಳಕೈ ಕಾಲುಗಳಿಂದ ತಿವಿದು ತಮ್ಮ ಹಿಂಭಾಗವನ್ನು ತೋರಿಸಿದರು" ಎಂದು ಹೇಳಿದರು.

ದಧಿಮುಖನು ಅತ್ಯಂತ ಕೋಪಯುಕ್ತನಾಗಿ ಆ ವನಪಾಲಕರಿಗೆ ಸಂತಮನ್ನಣೆ ನುಡಿಯುತ "ಸ್ವಲ್ಪ ತಾಳಿ ರಿ, ನಾವು ಲಕ್ಷ್ಮಣಸಮೇತನಾದ ಶ್ರೀರಾಮನ ಸಮೀಪದಲ್ಲಿರುವ ಸುಗ್ರೀವನ ಸಮೀಪಕ್ಕೆ ಹೋಗಿ ಈ ಮಧುವನ ಭಂಗವು ಅಂಗದನಿಂದಲೇ ಆಯಿತೆಂದು ಹೇಳಿದರೆ ಆತನು ಆ ಮಾತನ್ನು ಕೇಳಿದಮಾತ್ರದಲ್ಲಿ ತನ್ನ ಮುತ್ತೈಯ್ಯ ಹೆತ್ತೈಯ್ಯರ ಕಾಲದಿಂದ ಒಂದು ದಿವಸವಾದರೂ ಸೂರೆಹೋಗದಂಥಾ ಮಧುವನವನ್ನು ಅಂಗದನು ಸೂರೆಬಿಟ್ಟ ದ್ದಕ್ಕಾಗಿ ಅಧಿಕವಾದ ಕೋಪಯುಕ್ತನಾಗಿ ಮಧುಪಾನಮಾಡಿದ ಅಂಗದನು ಮೊದಲಾದ ದುರಾತ್ಮರನ್ನು ಆಜ್ಞೆಮಾ ಡಿಸುವನು, ಆಮೇಲೆ ನಮ್ಮ ಕೋಪವು ಸಫಲವಾಗುವದು" ಎಂದು ಸಂತವಿಟ್ಟು ಆ ವನಪಾಲಕರನ್ನು ಕೂಡಿ ಕೊಂಡು ಒಂದು ನಿಮಿಷಮಾತ್ರದಲ್ಲಿ ಅಂತರಿಕ್ಷಮಾರ್ಗದಲ್ಲಿ ಹೋಗಿ ಸಮಭೂಮಿಯಾಗಿದ್ದ ಸ್ಥಳದಲ್ಲಿಳಿದು ಸೂರ್ಯ ಸಮರ್ಯಾದೆಯಲ್ಲಿ ಪ್ರಕಾಶವುಳ್ಳ ಸುಗ್ರೀವನಿದ್ದೆಡೆಗೆ ಹೋಗಿ ಆತನನ್ನೂ ರಾಮಲಕ್ಷ್ಮಣರನ್ನೂ ಕಂಡು ತನ್ನ ಭೃತ್ಯರಸಹಿತವಾಗಿ ಅತಿ ದೈನ್ಯಭಾವದಿಂದ ಕೈಮುಗಿದು ಸುಗ್ರೀವನ ಪಾದಗಳಿಗೆ ಅಭಿವಂದಿಸಿದನು.

---

## ೬೩ನೇ ಅಧ್ಯಾಯ.

### ಸುಗ್ರೀವನು ರಾಮಲಕ್ಷ್ಮಣರಿಗೆ ಅಂಗದಾದಿಗಳು ಸೀತಾದೇವಿಯನ್ನು ಕಂಡುಬಂದರೆಂದು ಹೇಳಿದ್ದು

ಆ ಬಳಿಕ ಸುಗ್ರೀವನು ತನ್ನ ಪಾದಗಳಿಗೆ ಅಭಿವಂದಿಸಿದ ದಧಿಮುಖನನ್ನು ನೋಡಿ "ಎಲೈ ದಧಿಮುಖನೆ, ಏಳು ಏಳು! ಅಂಜಬೇಡ, ಯಾವಕಾರಣದಿಂದ ನನ್ನ ಪಾದಗಳಿಗೆ ಅಭಿವಂದಿಸಿದೆ, ಬಂದ ಕಾರ್ಯವನ್ನು ಸತ್ಯ ವಾಗಿ ಹೇಳು" ಎಂದು ಅಭಯವನ್ನು ಕೊಟ್ಟು ಕೇಳಿದನು.

ದಧಿಮುಖನು ಕೈಮುಗಿದುಕೊಂಡು "ಎಲೈ ಸುಗ್ರೀವನೆ, ಮಧುವನವನ್ನು ನಿನ್ನ ಹೆತ್ತೈಯ್ಯ ಮುತ್ತೈ ಯ್ಯರಕಾಲದಿಂದ ಇದುಪರಿಯಂತರ ಒಬ್ಬರೂ ಸೂರೆಯಾಗಿ ಬಿಡಲಿಲ್ಲ, ಜೇನುತುಪ್ಪವನ್ನು ತೆಗೆದುಕೊಂಡು ವನವ ನ್ನು ಹಲಾಕೋಲಮಾಡಿದವರಿಲ್ಲ; ಈಗ ಅಂಗದನು ಸಮಸ್ತ ಕಪಿಗಳಿಗೂ ಸೂರೆಯಾಗಿ ಬಿಡಲು ಅವರು ದುರಾಗ ತದಿಂದ ಮಧುವನವೆಲ್ಲವನ್ನು ಸೂರೆಮಾಡಿದರು, ವನವನ್ನು ರಕ್ಷಿಸಿಕೊಂಡಿದ್ದ ಈ ವಾನರರು ಎಷ್ಟು ತಡೆದರೂ ಅವರನ್ನು ಮೊಳಕೈಗಳಿಂದಲೂ ಮೊಳಕಾಲುಗಳಿಂದಲೂ ತಿವಿದು ಶಂಕಾತಂಕವಿಲ್ಲದೆ ಆ ವನದಲ್ಲಿದ್ದ ಜೇನುತುಪ್ಪ ವೆಲ್ಲವನ್ನು ಪಾನಮಾಡಿದರು, ಇನ್ನೂ ಅವರು ಆ ವನದಲ್ಲೇ ಇದಾರೆ; ಹೊರಟುಹೋಗಹೇಳಿದರೆ ಎದಿರಾಗಿ ಪೆ ಟ್ಟುಹಾಕುತ್ತಾರೆ, ಬಲಾತ್ಕಾರದಿಂದ ನೂಕಿದರೆ ಎಲ್ಲರೂ ಕೂಡಿಕೊಂಡು ವನಪಾಲಕರನ್ನು ಅತ್ತ ಇತ್ತ ಸೆಳೆದು ಎ ಳದು ತಮ್ಮ ಕಟಪ್ರದೇಶದ ಹಿಂಭಾಗವನ್ನು ತೋರಿಸುತ್ತಾರೆ, ನೀನಿರುವಾಗ ಈ ಮರ್ಯಾದೆಯಲ್ಲಿ ಇವರನ್ನು ಪೆಟ್ಟಿಕ್ಕಿ ದುರಾಗತದಿಂದ ಮಧುವನವನ್ನು ಸೂರೆಗೊಂಡರು" ಎಂದು ನುಡಿದನು.

ಆ ಸಮಯದಲ್ಲಿ ಲಕ್ಷ್ಮಣನು ಸುಗ್ರೀವನನ್ನು ನೋಡಿ "ಎಲೈ ಸುಗ್ರೀವನೆ, ವನಪಾಲಕನಾದ ಈ ಕಪಿನಾ ಯಕನು ಮೊರೆಯಿಡುವದೇನು? ಅನೇಕ ದುಃಖಾಕ್ರಾಂತನಾಗಿ ಈತನು ಹೇಳುವದೇನು?" ಎಂದು ಕೇಳಿದನು.

ಸುಗ್ರೀವನು "ಎಲೈ ಲಕ್ಷ್ಮಣನೆ, ಸೀತಾದೇವಿಯನ್ನರಸುವದಕ್ಕೆ ಹೋದ ಅಂಗದನು ತಿರುಗಿಬಂದು ತನ್ನ ಸಂಗಡ ಹೋದ ಕಪಿನಾಯಕರಿಗೆ ಮಧುವನವನ್ನು ಸೂರೆಬಿಟ್ಟನಂತೆ, ಅವರು ಆ ವನದಲ್ಲಿದ್ದ ಜೇನುತುಪ್ಪವೆಲ್ಲವನ್ನು ತೆಗೆದುಕೊಳ್ಳುವ ಸಮಯದಲ್ಲಿ ಈ ವನಪಾಲಕರು ತಡೆಯಲು ಅವರೆಲ್ಲರೂ ಕೂಡಿಕೊಂಡು ಇವರನ್ನು ಪೆಟ್ಟುಕ್ಕಿದರೆಂದು ಮೊರೆಯನ್ನು ತಂದಿಧಾನೆ, ಅಂಗದನು ಬಂದು ಮಧುವನವನ್ನು ಸೂರೆಬಿಟ್ಟಾಗಲೆ ಕಾರ್ಯವನ್ನು ಸಾಧ್ಯಮಾಡಿಕೊಂಡು ಬಂದವನಾಗಿರಬೇಕು, ಇಲ್ಲದಿದ್ದರೆ ಹಾಗೆಮಾಡುವದಕ್ಕಿಲ್ಲ, ಅವಶ್ಯವಾಗಿ ಸೀತಾದೇವಿಯನ್ನು ಕಂಡಬಂದವರು, ಅವರಲ್ಲಿಯೂ ಹನುಮಂತನೇ ಕಂಡುಬಂದವನಾಗಿರಬೇಕು, ಆತನಲ್ಲದೆ ಇಂಥಾ ಅಸಾಧ್ಯವಾದ ಕಾರ್ಯವನ್ನು ಸಾಧ್ಯಮಾಡುವದಕ್ಕೆ ಸಾಮರ್ಥ್ಯವುಳ್ಳವರಿಲ್ಲ, ಯಾವಕಾರ್ಯವೂ ಹನುಮಂತನಿಗೆ ಸಿದ್ಧಿಯಾಗುವದು, ಹನುಮಂತನಲ್ಲಿ ಬುದ್ಧಿವಿಶೇಷವುಂಟು, ಆತನು ಕಾರ್ಯದಲ್ಲಿ ಉತ್ಸಾಹವುಳ್ಳವನು, ಮಹಾಪರಾಕ್ರಮಸಂಪನ್ನನು; ನಾವು ಜಾಂಬವನಕೂಡೆ ಅಂಗದನನ್ನು ಕಳುಹಿಸಿ ಎಲ್ಲಕ್ಕೂ ಹನುಮಂತನನ್ನು ಗುರಿಮಾಡಿ ಕಳುಹಿಸಿದ್ದರಿಂದ ಕಾರ್ಯವು ಸಾಧ್ಯವಾಗಿರುವದಲ್ಲದೆ ಆಗದೇ ಹೋಗದು; ಅಂಗದನು ಮೊದಲಾದ ಕಪಿನಾಯಕರು ಸೀತಾದೇವಿಯನ್ನರಸುವದಕ್ಕೆ ತೆಂಕಣದಿಕ್ಕಿಗೆ ಹೋಗಿ ತಿರುಗಿ ಬಂದು ಮಧುವನವನ್ನು ಸೂರೆಗೊಂಡು ಆ ವನಪಾಲಕರನ್ನು ಪೆಟ್ಟುಕ್ಕಿ ಲೂಟಿಮಾಡಿದಾಗಲೇ ಅವಶ್ಯವಾಗಿ ಸೀತಾದೇವಿಯನ್ನು ಕಂಡುಬಂದರು; ಈ ಮಾತು ಯಥಾರ್ಥವೆಂದು ತಿಳೀ; ಆ ಕಾರ್ಯಕ್ಕೆ ಹೋದ ಕಪಿನಾಯಕರೆಲ್ಲರು ಮಹಾಪ್ರಸಿದ್ಧರು; ಬುದ್ಧಿವಂತರು, ಪ್ರಾಜ್ಞರು, ಆದಕಾರಣ ಸೀತಾದೇವಿಯನ್ನು ಕಂಡು ಕಾರ್ಯವನ್ನು ಸಾಧ್ಯಮಾಡಿಕೊಂಡುಬಂದ ಸಲಿಗೆಯಿಂದ ಮಧುವನವನ್ನು ಸೂರೆಗೊಂಡರಲ್ಲದೆ ಸುಮ್ಮನೇ ಹಾಗೆಮಾಡಿದವರಲ್ಲ" ಎಂದು ಹೇಳಿದನು.

ಆ ಮಾತುಗಳನ್ನು ಕೇಳಿ ರಾಮಲಕ್ಷ್ಮಣರಿಬ್ಬರೂ ಅತ್ಯಂತ ಹರ್ಷಪಟ್ಟರು; ಆಮೇಲೆ ಸುಗ್ರೀವನು ದಧಿಮುಖನನ್ನು ನೋಡಿ ಮುಗುಳುನಗೆಯಿಂದ "ಎಲೈ ದಧಿಮುಖನೆ, ಅಂಗದನು ಮೊದಲಾದ ಕಪಿನಾಯಕರು ಮಧುವನವನ್ನು ಸೂರೆಗೊಂಡರೆಂಬ ವೃತ್ತಾಂತವನ್ನು ಹೇಳಿದೆಯಲ್ಲ; ಅದು ನನ್ನ ಮನಸ್ಸಿಗೆ ಸಂತೋಷವಾಯಿತು; ಅವರು ಸೀತಾದೇವಿಯನ್ನು ಕಂಡುಬಂದವರಲ್ಲದಿದ್ದರೆ ಮಧುವನವನ್ನು ಸೂರೆಮಾಡರು, ಜಾಂಬವನು ಅಂಗದನು ಹನುಮಂತನು ಮೊದಲಾದ ಕಪಿನಾಯಕರು ಯಾವಾಗ ಬರುವರೋ ಎಂದು ಶ್ರೀರಾಮಲಕ್ಷ್ಮಣರು ಎದಿರುನೋಡಿಕೊಂಡಿಧಾರೆ, ಅವರು ಬಂದು ಸೀತಾದೇವಿಯನ್ನು ಕಂಡುಬಂದದ್ದಾಗಿ ಹೇಳಿದರೆ ಆ ಮಾತು ಕೇಳಿ ಶ್ರೀರಾಮಲಕ್ಷ್ಮಣರು ತಮ್ಮ ಕಾರ್ಯವು ಸಾಧ್ಯವಾಯಿತೆಂದು ಮನಸ್ಸಿನಲ್ಲಿ ಸಂತೋಷಪಡುವರು" ಎಂದು ನುಡಿದನು.

ಆ ಸಮಯದಲ್ಲಿ ಶ್ರೀರಾಮನು ತನ್ನ ಬಲತೋಳು ಸ್ಪಂದನವಾಗಿ ಕದಲುತ್ತಿರಲು ತನ್ನ ಮನಸ್ಸಿನಲ್ಲಿ ರಾವಣನನ್ನು ಜಯಿಸಿ ಸೀತಾದೇವಿಯನ್ನು ಕರೆದುಕೊಂಡು ಬರುವ ಕಾರ್ಯಸಿದ್ಧಿಯಾಗುವದೆಂದು ತಿಳಿದು ಅತ್ಯಂತ ಸಂತೋಷಪಡುತ್ತಿದ್ದನು.

---

## ೬೪ನೇ ಅಧ್ಯಾಯ.

### ಹನುಮಂತನು ಶ್ರೀರಾಮನಿಗೆ ಸೀತಾದೇವಿಯನ್ನು ಕಂಡೆನೆಂದು ಹೇಳಿದ್ದು.

ಆಮೇಲೆ ಸುಗ್ರೀವನ ಮಾತನ್ನು ಕೇಳಿ ದಧಿಮುಖನು ರಾಮಲಕ್ಷ್ಮಣರಿಗೂ ಸುಗ್ರೀವನಿಗೂ ನಮಸ್ಕರಿಸಿ ಕಳುಹಿಸಿಕೊಂಡು ತನ್ನಕೂಡೆ ಬಂದ ವನಪಾಲಕರಾದ ಕಪಿನಾಯಕರನ್ನು ಕೂಡಿಕೊಂಡು ಅಂತರಿಕ್ಷಮಾರ್ಗದಲ್ಲಿ ನೆಗೆದು ಮೊದಲಿನ ಮರ್ಯಾದೆಯಲ್ಲಿ ಮಧುವನಕ್ಕೆಬಂದು ಅಂಗದನು ಮೊದಲಾದ ಕಪಿನಾಯಕರು ಮಧುಪಾನದ ಮದವಿಳಿದು ಕುಳಿತುಕೊಂಡಿರುವದನ್ನು ಕಂಡು ಕೈಮುಗಿದುಕೊಂಡು ಅನೇಕ ಮೃದುನುಡಿಗಳಿಂದ "ಎಲೈ ಅಂಗದನೆ, ಈ ವನಪಾಲಕರಾದ ಕಪಿನಾಯಕರು ಮಧುವನ ಭಂಗವಾಯಿತೆಂಬ ಕೋಪಾತಿಶಯದಿಂದಲೂ

ಅಜ್ಞಾನದಿಂದಲೂ ನಿಮ್ಮನ್ನು ತಡೆದು ನಿಷ್ಠುರವಚನಗಳನ್ನು ನುಡಿದರು; ಅದನ್ನು ನಮ್ಮಮೇಲಣ ದಯೆಯಿಂದ ಕ್ಷಮಿಸಿಕೊ, ನೀನು ಚಿಕ್ಕರಾಯನಾಗಿ ಪಟ್ಟಕ್ಕೆ ಗುರಿಯಾಗಿರುವದರಿಂದ ಈ ವನಕ್ಕೆ ನೀನೇ ಒಡೆಯನು; ಮೂರ್ಖತನದಿಂದ ನಾವು ಮಾಡಿದ ಅಪರಾಧವನ್ನು ಕ್ಷಮಿಸಿಕೊ, ನಾವು ಹೋಗಿ ನಿನ್ನ ಚಿಕ್ಕಪ್ಪನಾದ ಸುಗ್ರೀವನಕೂಡೆ ಮಧುವನವನ್ನು ಭಂಗಮಾಡಿದ್ದನ್ನು ಹೇಳಲು ಆತನು ಮನಸ್ಸಿನಲ್ಲಿ ನೀವು ಆತನು ಹೇಳಿದ ಕಾರ್ಯವನ್ನು ಸಾಧ್ಯಮಾಡಿಕೊಂಡು ಬರದಿದ್ದರೆ ಈ ವನವನ್ನು ಕುಲಕುವದಕ್ಕಿಲ್ಲವೆಂದು ನಿಶ್ಚಯಿಸಿ ನೀವು ಮಧುವನ ಭಂಗಮಾಡಿದ ಸುದ್ದಿಯನ್ನು ಕೇಳಿ ಕೋಪಮಾಡಿಕೊಳ್ಳದೆ ಸಂತೋಷಪಟ್ಟು ನಿಮ್ಮನ್ನು ಶೀಘ್ರದಲ್ಲಿ ಕಳುಹಿಸಹೇಳಿದನು" ಎಂದು ಹೇಳಿದನು.

ಆ ಮಾತನ್ನು ಕೇಳಿ ಅಂಗದನು ಅತ್ಯಂತ ಸಂತೋಷಯುಕ್ತನಾಗಿ ಸಮಸ್ತ ಕಪಿನಾಯಕರನ್ನು ಕರೆದು "ಎಲೈ ಕಪಿನಾಯಕರಿರಾ, ನಾವು ಬಂದ ವೃತ್ತಾಂತವನ್ನು ಸುಗ್ರೀವ ರಾಮಲಕ್ಷ್ಮಣರು ಕೇಳಿದರಂತೆ; ನಾವು ಹೋದಕಾರ್ಯವನ್ನು ಸಾಧ್ಯಮಾಡಿಕೊಂಡು ಬಂದೂ ಇಲ್ಲಿರುವದು ಕಾರ್ಯವಲ್ಲ, ಮಾರ್ಗಸಂಚಾರದಿಂದ ಕಂಗೆಟ್ಟು ಬಂದದ್ದಕ್ಕೆ ತಕ್ಕಹಾಗೆ ಯಥೇಷ್ಟವಾಗಿ ಮಧುಪಾನಮಾಡಿದೆವು; ಇನ್ನು ಇಲ್ಲಿ ನಮಗೆ ಕಾರ್ಯವೇನು! ನಾವೆಲ್ಲರೂ ಸುಗ್ರೀವನ ಸಮೀಪಕ್ಕೆ ಹೋಗೋಣ, ನೀವೆಲ್ಲರೂ ಕೂಡಿ ಯೋಚನೆಮಾಡಿ ಇನ್ನೇನಾದರೂ ಕಾರ್ಯವಿದ್ದರೆ ಹೇಳೀ; ನಾನು ನಿಮ್ಮ ಅಧೀನನಾದವನಲ್ಲದೆ ಮತ್ತೊಂದಲ್ಲ; ನಾನು ಚಿಕ್ಕರಾಯನಾದರೂ ಅತ್ಯಂತ ಸಾಹಸವನ್ನು ಮಾಡಿ ಕಾರ್ಯವನ್ನು ಸಾಧ್ಯವಾಗಿ ಮಾಡಿಕೊಂಡು ಒಳಲಿ ಬಂದಿರುವ ನಿಮ್ಮನ್ನು ಬಲಾತ್ಕಾರದಿಂದ ಕರೆಯಬಾರದು" ಎಂದು ಹೇಳಿದನು.

ಆ ಕಪಿನಾಯಕರು ಅತ್ಯಂತ ಹರ್ಷಪಟ್ಟು "ಎಲೈ ಅಂಗದನೆ, ನೀನು ನಮಗೆ ಒಡೆಯನಾಗಿ ಇಂಥಾ ಮಾತನ್ನಾಡುವದ್ಯಾಕೆ! ನೀನು ಅನೇಕ ಗುಣಸಂಪನ್ನನಾಗಿ ಮಹಾತ್ಮನಾದಕಾರಣ ಇಂಥಾ ಮಾತನ್ನಾಡಿದೆ; ಲೋಕದಲ್ಲಿ ಐಶ್ವರ್ಯಮದದಿಂದ ಮೈಮರತಂಥಾವರು ಹಾಂಕಾರದಿಂದ ತಾವೇ ಸರ್ವಕ್ಕೂ ಒಡೆಯರೆಂದು ನುಡಿದುಕೊಳ್ಳುವರು, ನಿನ್ನಲ್ಲಿ ಅಂಥಾ ಗುಣಗಳಿಲ್ಲ; ಲೋಕದಲ್ಲಿ ಯಥೇಷ್ಟವಾದ ಭಾಗ್ಯದಲ್ಲಿ ಬದುಕುವವರು ಮಮಕಾರ ಹುಟ್ಟಿ ಗುರುಹಿರಿಯರು ಮಿತ್ರವರ್ಗ ಹೊಂದಿ ಸೇರಿದವರಲ್ಲಿ ನೈಚ್ಯಭಾವದಿಂದ ವಿನಯೋಕ್ತಿಗಳನ್ನೇ ನುಡಿಯುವರು; ನಾವೆಲ್ಲರು ನಿನ್ನ ಮಾತಿಗೊಳಗಾಗಿರುವವರಲ್ಲದೆ ನಿನ್ನನ್ನು ಬಿಟ್ಟು ಮತ್ತೊಂದು ದಿಕ್ಕಿಗೆ ಬಂದು ಹೆಜ್ಜೆಯನ್ನಾದರೂ ಇಡುವವರಲ್ಲ, ಒಡೆಯನಾದ ಸುಗ್ರೀವನ ಬಳಿಗೆ ನೀನು ಹೊರಟಾಗಲೇ ನಾವು ಪ್ರಯಾಣವಾಗಿಧೇವೆ" ಎಂದು ನುಡಿದರು.

ಅಂಗದನು ಒಳ್ಳೇದಾಯಿತೆಂದು ಅತಿಹರ್ಷದಿಂದ ಸಮಸ್ತ ಕಪಿನಾಯಕರನ್ನೂ ಕೂಡಿಕೊಂಡು ಅಂತರಿಕ್ಷ ಮಾರ್ಗಕ್ಕೆ ನೆಗೆದು ಆಕಾಶಮಂಡಲವನ್ನು ವ್ಯಾಪಿಸಿಕೊಂಡು ವಾಯುವೇಗ ಮನೋವೇಗದಿಂದ ಬೊಬ್ಬಿಡುತ ಬಿರುಘೊಳಿಯು ವೇಗಕ್ಕೆ ಕಾರ್ಮುಗಿಲು ಓಡುವಂತೆ ಸುಗ್ರೀವನೆಡೆಗೆ ಬರುತಿದ್ದನು!

ಆ ಸಮಯದಲ್ಲಿ ಸೀತಾದೇವಿಯ ವಿರಹಶೋಕದಿಂದ ಕಂಗೆಟ್ಟ ರಘುನಾಯಕನು ಸುಗ್ರೀವನ ಮುಖವನ್ನು ನೋಡಿ ಅಂಗದನು ಯಾವಕಾರಣದಿಂದ ಇನ್ನೂ ಬರಲಿಲ್ಲವೆಂದು ಕೇಳಲು ಆತನು "ಎಲೈ ಸ್ವಾಮಿಯೇ, ಒಂದು ಕ್ಷಣಮಾತ್ರವು ಸಹಿಸಿಕೋ; ಸೀತಾದೇವಿಯನ್ನು ಕಂಡುಬಂದರು; ಈ ಅರ್ಥದಲ್ಲಿ ಸಂಶಯವಿಲ್ಲ; ಮೊದಲು ಹೋಗುವಾಗ ಅವರು ಎರಡು ತಿಂಗಳಿಗೆ ಬರುವದಾಗಿ ಅವಧಿಮಾಡಿಕೊಂಡದ್ದರಿಂದ ಆ ಎರಡುತಿಂಗಳ ಒಳಗಾಗಿ ಕಾರ್ಯವನ್ನು ಸಾಧ್ಯಮಾಡದೆ ನನ್ನ ಸಮೀಪಕ್ಕೆ ಬರಲಾರರು; ಆದ್ದರಿಂದ ಚಿಕ್ಕರಾಯನಾದ ಅಂಗದನು ತಾನು ಹೋದ ಕಾರ್ಯವು ಸಾಧ್ಯವಾಗದಿದ್ದರೆ ಇಲ್ಲಿಗೆ ಬರುವದಕ್ಕಿಲ್ಲ; ಅದೂಅಲ್ಲದೆ ಹೋದಕಾರ್ಯವು ಕೈಕೂಡದಿದ್ದರೆ ಇಂಥಾ ಸಾಹಸದಿಂದ ಮಧುವನ ಭಂಗವನ್ನು ಮಾಡರು, ತಾನು ಹೋದಕಾರ್ಯವಾಗದೇ ಇದ್ದಪಕ್ಷದಲ್ಲಿ ದೈನ್ಯಭಾವವನ್ನಾಶ್ರಯಿಸಿಕೊಂಡು ಅಂಜಿಕೆಯಿಂದ ಬರುವನಲ್ಲದೆ ಹೆತ್ತೈಯ್ಯ ಮುತ್ತೈಯ್ಯರಕಾಲ ಮೊದಲಾಗಿ ಎಂದೆಂದೂ

ಸೂರೆಹೋಗದಿದ್ದ ಮಧುವನವನ್ನು ಸೂರೆಮಾಡನು ಎಲೈ ಸ್ವಾಮಿಯೇ, ಕೌಸಲ್ಯಾದೇವಿಯು ಕೃತಾರ್ಥಳಾದಳು; ಅವಶ್ಯವಾಗಿ ಅಂಗದಾದಿ ಕಪಿನಾಯಕರಲ್ಲಿ ಹನುಮಂತನೇ ಸೀತಾದೇವಿಯನ್ನು ಕಂಡುಬಂದನು, ಇಂಥಾ ಕಾರ್ಯವನ್ನು ಸಾಧ್ಯಮಾಡುವವರಲ್ಲಿ ಹನುಮಂತನೇ ಸಮರ್ಥನಲ್ಲದೆ ಮತ್ಯಾರೂ ಸಮರ್ಥರಲ್ಲ, ನಿನ್ನ ಮನಸ್ಸಿನಲ್ಲಿ ಚಿಂತಿಸಬೇಡ" ಎಂದು ಹೇಳುತಿದ್ದನು.

ಆ ಸಮಯದಲ್ಲಿ ಅಂತರಿಕ್ಷಮಾರ್ಗದಲ್ಲಿ ಕಪಿಗಳ ಕಿಲಕಿಲಶಬ್ದಗಳು ಕೇಳಲಾಯಿತು, ಹನುಮಂತನ ಸಾಹಸಕೃತ್ಯದಿಂದ ಕಾರ್ಯಸಿದ್ಧಿಯಾಯಿತೆಂಬ ವೃತ್ತಾಂತವನ್ನು ಹೇಳುವಂತೆ ಕಿಷ್ಕಿಂಧಾಪಟ್ಟಣಕ್ಕೆ ಬರುತಿದ್ದ ಕಪಿನಾಯಕರ ಕಿಲಕಿಲಧ್ವನಿಯು ಕೇಳಲಾಯಿತು, ಆ ಧ್ವನಿಯನ್ನು ಕೇಳಿ ಸುಗ್ರೀವನು ಹರ್ಷಾತಿಶಯದಿಂದ ತನ್ನ ಬಾಲವನ್ನು ನೀಡುತ ಪುಳಕಿತಾಂಗನಾಗಿ ತೆಂಕಣದಿಕ್ಕಾಗಿ ಅಂತರಿಕ್ಷಮಾರ್ಗವನ್ನು ನೋಡುತಿದ್ದನು; ಅಷ್ಟರೊಳಗೆ ಜಾಂಬವದಾದಿ ಕಪಿನಾಯಕರು ಅತ್ಯಂತ ಹರ್ಷದಿಂದ ಅಂಗದ ಹನುಮಂತರನ್ನು ಮುಂದಿಟ್ಟುಕೊಂಡು ಶ್ರೀರಾಮನ ಸಮೀಪದಲ್ಲಿದ್ದ ಸುಗ್ರೀವನ ಸಮೀಪಕ್ಕೆ ಬಂದು ಅಂತರಿಕ್ಷಮಾರ್ಗದಿಂದಿಳಿದರು; ಆ ಸಮಯದಲ್ಲಿ ಹನುಮಂತನು ಶ್ರೀರಾಮನಿಗೆ ಸಾಷ್ಟಾಂಗವಾಗೆರಗಿ "ನಿಯಮಸ್ಥೆಯಾಗಿ ಸುಖದಲ್ಲಿದ್ದ ಸೀತಾದೇವಿಯನ್ನು ಕಂಡುಬಂದೆನು" ಎಂದು ಮುಖವಾಗಿ ಬಿನ್ನಹಮಾಡಿದನು.

ಆ ಸಮಯದಲ್ಲಿ ಅತ್ಯಂತ ಹರ್ಷಯುಕ್ತನಾಗಿದ್ದ ಲಕ್ಷ್ಮಣನು ಸುಗ್ರೀವನ ಮುಖವನ್ನು ನೋಡಿ "ಎಲೈ ಸುಗ್ರೀವನೇ, ನೀನು ಹೇಳಿದ ಮಾತು ಸತ್ಯವಾಯಿತು" ಎಂದು ಬಹುಮಾನಪುರಸ್ಸರವಾಗಿ ಸಂಭಾಷಣೆ ಮಾಡುತಿದ್ದನು, ಆಮೇಲೆ ರಘುನಾಥನು ಅತ್ಯಂತ ಆನಂದಾತಿಶಯದಿಂದ ಹನುಮಂತನನ್ನು ಪೂರ್ಣಕೃಪಾದೃಷ್ಟಿಯಿಂದ ನೋಡಿದನು.

## ೬೫ನೇ ಅಧ್ಯಾಯ

### ಹನುಮಂತನು ಶ್ರೀರಾಮನಿಗೆ ಚೂಡಾಮಣಿಯನ್ನು ಕೊಟ್ಟದ್ದು.

ಈ ಪ್ರಕಾರದಲ್ಲಿ ಪ್ರಸ್ರವಣಗಿರಿಯಲ್ಲಿ ಸುಗ್ರೀವಸಮೇತನಾಗಿ ಶ್ರೀರಾಮನು ಕುಳಿತುಕೊಂಡಿರುವ ಸಮಯದಲ್ಲಿ ತೆಂಕಣದಿಕ್ಕಿಗೆ ಹೋದ ಕಪಿನಾಯಕರು ಹನುಮಂತ ಅಂಗದರನ್ನು ಮುಂದಿಟ್ಟುಕೊಂಡು ಬಂದು ರಾಮ ಲಕ್ಷ್ಮಣರಿಗೂ ಸುಗ್ರೀವನಿಗೂ ಅಭಿವಂದಿಸಿದರು; ಆ ಬಳಿಕ ಹನುಮಂತನು ರಾವಣನ ಉದ್ಯಾನವನವಾದ ಅಶೋಕವನದಲ್ಲಿ ಸೀತಾದೇವಿಯನ್ನು ಕಂಡುಬಂದ ವೃತ್ತಾಂತವನ್ನು ಹೇಳಲು ಶ್ರೀರಾಮನು ಅತ್ಯಂತಾನಂದಾತಿಶಯದಿಂದ ಆತನನ್ನು ನೋಡಿ "ಎಲೈ ಹನುಮಂತನೆ, ಸೀತಾದೇವಿಯು ಎಲ್ಲಿಧ್ದಾಳೆ? ಆಕೆಗೆ ನನ್ನಲ್ಲಿ ವಿಶ್ವಾಸವು ಹ್ಯಾಗೆ? ಆ ದೇವಿಯು ಹ್ಯಾಗೆ ಇದ್ದಾಳೆ?" ಎಂದು ಕೇಳಿದನು.

ಹನುಮಂತನು ಸಮಸ್ತ ಕಪಿನಾಯಕರ ಅನುಜ್ಞೆಯಿಂದ ಸೀತಾದೇವಿಯಿರುವ ದಿಕ್ಕನ್ನು ನೋಡಿ ಆ ದೇವಿಗೆ ನಮಸ್ಕರಿಸಿ ಶ್ರೀರಾಮನನ್ನು ಕುರಿತು "ಎಲೈ ಸ್ವಾಮಿಯೇ, ನಾನು ಸೀತಾದೇವಿಯನ್ನರಸಿಕೊಂಡು ಬರಲು ತೆಂಕಣದಿಕ್ಕಿಗೆ ಹೋಗಿ ಅಲ್ಲೆಲ್ಲಿಯೂ ಕಾಣದೆ ತೆಂಕಣ ಸಮುದ್ರತೀರಕ್ಕೆ ಹೋಗಿ ನೂರುಗಾವುದದಾರಿ ಅಗಲವಾದ ಆ ಸಮುದ್ರವನ್ನು ದಾಟಿ ದುರಾತ್ಮನಾದ ರಾವಣನಿರುವ ಲಂಕಾಪಟ್ಟಣಕ್ಕೆ ಹೋಗಿ ಅವನ ಮನೆಯ ಸಮೀಪದಲ್ಲಿದ್ದ ಅಶೋಕವನವೆಂಬ ಉದ್ಯಾನವನದಲ್ಲಿ ಸೀತಾದೇವಿಯನ್ನು ಕಂಡುಬಂದೆನು, ಆ ದೇವಿಯು ಮಹಾ ಭಯಂಕರವಾದ ರಾಕ್ಷಸಸ್ತ್ರೀಯರ ಕಾವಲಲ್ಲಿದ್ದುಕೊಂಡು ಅವರ ಹೆದರಿಕೆಗಳಿಂದ ಭಯಪಡುತ ಯಾವಾಗಲೂ ನಿನ್ನನ್ನೇ ಧ್ಯಾನಮಾಡುತ ತನ್ನ ಪ್ರಾಣಗಳನ್ನು ನಿನಗೊಪ್ಪಿಸುವದಾಗಿ ಹಂಬಲಿಸುತ ಒಂಟಿಜಡೆಯುಳ್ಳವಳಾಗಿ ದೈನ್ಯಭಾವದಿಂದ ಚಿಂತಾಕ್ರಾಂತೆಯಾಗಿ ಅಧಃಶಯನಮಾಡಿಕೊಂಡು ಹಿಮಂತಕಾಲದ ತಾವರೆಯಂತೆ ತನುಕಾಂತಿಗುಂದಿ ಮನಸ್ಸಿನಲ್ಲಾ

ದರೂ ರಾವಣನನ್ನು ನೆನೆಸದೆ ಮರಣವನ್ನೇ ನಿಶ್ಚಯಿಸಿಕೊಂಡು ನಿನ್ನನ್ನೇ ಧ್ಯಾನಮಾಡುತ್ತಿದ್ದಳು; ಆಕೆಯನ್ನು ಕಂಡು ನಾನು ಮಾತನಾಡಿಸಿದರೆ ನನ್ನನ್ನು ಮಾಯಾರೂಪಿಯಾದ ರಾವಣನೆಂದೆಣಿಸಿ ಭಯಪಡುವಳೆಂದೆಣಿಸಿ ನಾನು ಇಕ್ಷ್ವಾಕುವಂಶವನ್ನು ಪ್ರಸಂಗಮಾಡಿ ನಿನ್ನ ಸದ್ಗುಣಚರಿತ್ರಗಳನ್ನು ಕೊಂಡಾಡುತ್ತಿರಲು ಆ ದೇವಿಯು ನನ್ನಲ್ಲಿ ವಿಶ್ವಾಸಮಾಡಿ ನನ್ನ ಕೂಡೆ ಸಂಭಾಷಣೆಮಾಡಿ ತನ್ನ ಮನಸ್ಸಿನ ಅಭಿಪ್ರಾಯವನ್ನು ನನ್ನ ಕೂಡೆ ಹೇಳಿ ನಿನಗೂ ಸುಗ್ರೀವನಿಗೂ ಸ್ನೇಹವಾದ ವೃತ್ತಾಂತವನ್ನು ಕೇಳಿ ಅತ್ಯಂತ ಸಂತೋಷಯುಕ್ತಳಾಗಿ ನನ್ನಲ್ಲಿ ಭಕ್ತಿಯಿಂದ ಚೂಡಾಮಣಿಯನ್ನು ಕೊಟ್ಟು ಕುರುಹಿನ ಮಾತನ್ನು ಹೇಳುತ್ತ ನನ್ನನ್ನು ಕುರಿತು “ಚಿತ್ರಕೂಟಪರ್ವತದಲ್ಲಿರುವಾಗ ಕಾಕಾಸುರನು ಬಂದು ದುರಾಗತವನ್ನು ಮಾಡಿದನೆಂಬ ಕುರುಹುಮಾತನ್ನು ಶ್ರೀರಾಮನಿಗೆ ಹೇಳು, ಈ ಚೂಡಾಮಣಿರತ್ನವನ್ನು ಅತಿಪ್ರಯತ್ನದಿಂದ ರಕ್ಷಿಸಿಕೊಂಡಿದ್ದೆನು, ಶ್ರೀರಾಮನಿಗೆ ಈ ರತ್ನವನ್ನು ಕೊಡು, ಇದು ಸಮುದ್ರದಲ್ಲಿ ಹುಟ್ಟಿದ್ದು, ಈ ರತ್ನವನ್ನು ಕಂಡಮಾತ್ರದಲ್ಲೇ ಆ ಸ್ವಾಮಿಯು ಅತ್ಯಂತ ಹರ್ಷಪಡುವನು; ನಾನು ಅತ್ಯಂತ ದುಃಖದಲ್ಲಿದ್ದರೂ ಈ ರತ್ನವನ್ನು ನೋಡಿ ಮನಸ್ಸಿನಲ್ಲಿ ಧೈರ್ಯವುಂಟುಮಾಡಿಕೊಂಡಿದ್ದೆನು; ಮತ್ತೊಂದು ಕುರುಹುಮಾತನ್ನು ಹೇಳು; ಚಿತ್ರಕೂಟಪರ್ವತದಲ್ಲಿದ್ದಾಗ ಶ್ರೀರಾಮನು ಮಣಿಶಿಲೆಯನ್ನೊರೆದು ನನ್ನ ಹಣೆಗೆ ತಿಲಕವನ್ನಿಟ್ಟನು; ನಾನಿಲ್ಲಿ ಅತ್ಯಂತ ಪ್ರಯಾಸದಿಂದ ಒಂದು ತಿಂಗಳು ಜೀವಿಸಿಕೊಂಡಿರುವೆನು, ಆಮೇಲೆ ಈ ರಾಕ್ಷಸರ ಬಾಧೆಯಿಂದ ಜೀವವಿಡಿದು ನಿಲ್ಲಲಾರೆನೆಂದು ಶ್ರೀರಾಮನಿಗೆ ಬಿನ್ನಹ ಮಾಡು” ಎಂದು ನನ್ನ ಕೂಡೆ ಹೇಳಿದಳು ಎಲೈ ಶ್ರೀರಾಮನೇ, ಇದು ನಾನು ಕಂಡುಬಂದ ವೃತ್ತಾಂತವು, ಇನ್ನು ನಾವು ಸಮುದ್ರವನ್ನು ದಾಟಿಹೋಗಿ ಲಂಕಾಪಟ್ಟಣವನ್ನು ಸಾಧಿಸಿ ರಾವಣನನ್ನು ಕೊಂದು ಸೀತಾದೇವಿಯನ್ನು ಕರದುಕೊಂಡು ಬರಬೇಕು” ಎಂದು ಹೇಳಿ ಸೀತಾದೇವಿಯು ಕೊಟ್ಟ ಕುರುಹಿನ ಚೂಡಾಮಣಿಯನ್ನು ಕೊಟ್ಟನು.

## ೬೬ನೇ ಅಧ್ಯಾಯ.

### ಶ್ರೀರಾಮನು ಚೂಡಾಮಣಿಯನ್ನು ನೋಡಿ ಸಂತೋಷಪಟ್ಟದ್ದು.

ಆ ಬಳಿಕ ಶ್ರೀರಾಮನು ಆ ಚೂಡಾಮಣಿರತ್ನವನ್ನು ತೆಗೆದುಕೊಂಡು ತನ್ನ ಹೃದಯಕಮಲಕ್ಕೆ ಒತ್ತಿಕೊಂಡು ಸೀತಾದೇವಿಯನ್ನು ಸ್ಮರಿಸುತ್ತ ದುಃಖದಿಂದ ರೋದನವನ್ನು ಮಾಡುತ್ತಿದ್ದನು; ಆತನ ದುಃಖಾತಿಶಯವನ್ನು ಕಂಡು ಲಕ್ಷ್ಮಣನೂ ರೋದನಮಾಡುತ್ತಿದ್ದನು, ಆ ಸಮಯದಲ್ಲಿ ಶ್ರೀರಾಮನು ಕಂಬನಿ ತುಂಬಿದ ಕಣ್ಣುಗಳುಳ್ಳವನಾಗಿ ಸುಗ್ರೀವನನ್ನು ನೋಡಿ “ಎಲೈ ಸುಗ್ರೀವನೇ, ಕರುವಿನಲ್ಲಿ ಪ್ರೀತಿಯುಳ್ಳ ಕಾಮಧೇನುವಿಗೆ ಕರುವನ್ನು ಕಂಡಾಗ ಕೆಚ್ಚಲು ಸೋರುವಂತೆ ಈ ರತ್ನವನ್ನು ಕಂಡಮಾತ್ರದಲ್ಲಿ ನನ್ನ ಮನಸ್ಸು ಕರಗುತ್ತದೆ; ಸೀತಾದೇವಿಯ ವಿವಾಹಕಾಲದಲ್ಲಿ ನನ್ನ ಮಾವನಾದ ಜನಕರಾಯನು ಈ ಚೂಡಾರತ್ನದಿಂದ ತನ್ನ ಮಗಳ ಮುಂಗುರುಳನ್ನಲಂಕರಿಸಿ ವಿವಾಹಮಾಡಿದನು, ಪೂರ್ವದಲ್ಲಿ ದೇವಾಸುರರು ಮಹಾಕೂರ್ಮನ ಬೆನ್ನನ್ನು ಆಧಾರವಾಗಿ ಮಾಡಿಕೊಂಡು ಮಂದರಗಿರಿಪರ್ವತವನ್ನು ಕಡಗೋಲುಮಾಡಿಕೊಂಡು ವಾಸುಕಿಯನ್ನು ತೆಗಣೆಮಾಡಿಕೊಂಡು ಕ್ಷೀರಸಮುದ್ರವನ್ನು ಮಥನಮಾಡಿದ ಸಮಯದಲ್ಲಿ ಈ ಚೂಡಾಮಣಿಯು ಹುಟ್ಟಿತು; ಇದನ್ನು ದೇವತೆಗಳು ದೇವೇಂದ್ರನಿಗೆ ಕೊಟ್ಟರು; ಜನಕರಾಯನು ಯಾಗವನ್ನು ಮಾಡಿದಾಗ ದೇವೇಂದ್ರನು ಬಂದು ಹವಿರ್ಭಾಗವನ್ನು ತೆಗೆದುಕೊಂಡು ಸಂತುಷ್ಟನಾಗಿ ಈ ಚೂಡಾಮಣಿಯನ್ನು ಆತನಿಗೆ ಕೊಟ್ಟನು, ಆ ರಾಯನು ತನ್ನ ಮಗಳಾದ ಸೀತಾದೇವಿಗೆ ಕೊಟ್ಟನು; ಆದ್ದರಿಂದ ಈ ಚೂಡಾರತ್ನವನ್ನು ಕಂಡಮಾತ್ರದಲ್ಲೇ ಸೀತಾದೇವಿಯನ್ನು ಪ್ರತ್ಯಕ್ಷವಾಗಿ ಕಂಡಹಾಗೆ ಮನಸ್ಸಿಗೆ ಸಂತೋಷವಾಯಿತು; ಈ ಚೂಡಾಮಣಿಯು ಯಾವಾಗಲು ಸೀತಾದೇವಿಯ ಮಸ್ತಕದಲ್ಲಿ ದೇದೀಪ್ಯಮಾನವಾಗಿ ಬೆಳಗುತ್ತಿತ್ತು” ಎಂದು ಹೇಳಿ ಹನುಮಂತನ ಮುಖವನ್ನು ನೋಡಿ “ಎಲೈ ಹನುಮಂತನೆ, ದಾಹವುಳ್ಳವನಿಗೆ ಮತ್ತುಮತ್ತೂ ಉದಕದಮೇಲೆ ಅಪೇಕ್ಷೆ ಹುಟ್ಟುವಂತೆ ನನ್ನ ಮನಸ್ಸಿಗೆ ಮತ್ತುಮತ್ತೂ ಸೀತಾದೇವಿ

ಯು ಹೇಳಿಕಳುಹಿಸಿದ ಮಾತುಗಳನ್ನು ಕೇಳಬೇಕೆಂದು ಅಪೇಕ್ಷೆಯಾಗುತ್ತದೆ, ಆ ದೇವಿಯು ಏನೆಂದಳು ? ಸೀತಾದೇವಿಯನ್ನಗಲಿದ್ದರಿಂದ ಆಕೆಯು ಧರಿಸಿಕೊಂಡಿದ್ದ ರತ್ನವನ್ನು ಕಂಡು ಅಧಿಕವಾದ ದುಃಖವಾಗಿದೆ, ಸೀತಾದೇವಿಯು ಇನ್ನೊಂದು ತಿಂಗಳು ಬದುಕಿರುವಳೆಂಬ ವಾರ್ತೆಯನ್ನು ಹೇಳಿದನು, ಆಕೆಯು ಜೀವವಂತೆಯಾಗಿ ಅಂಥಾ ಸ್ಥಳದಲ್ಲಿರುವ ಸುದ್ದಿಯನ್ನು ಕೇಳಿ ಆ ದೇವಿಯನ್ನು ಕಾಣದೆ ಒಂದು ಕ್ಷಣಮಾತ್ರವಾದರು ಜೀವವು ನಿಲ್ಲಲಾರದು; ಅತಿಭಯಂಕರರಾದ ರಾಕ್ಷಸಸ್ತ್ರೀಯರ ಕಾವಲಿಗೊಳಗಾಗಿ ಮೇಘಮಂಡಲದ ಮಧ್ಯದಲ್ಲಿ ಕಾಣಿಸುವ ಶರತ್ಕಾಲದ ಚಂದ್ರಮಂಡಲದಂತೆ ಕೃಶಾಂಗಿಯಾಗಿ ಒಪ್ಪುತಿರುವಳು, ಅಮೃತಕಿರಣವುಳ್ಳ ಚಂದ್ರಮಂಡಲಕ್ಕೆ ಸಮಾನವಾದ ಸೀತಾದೇವಿಯ ಮುಖವು ಘೋರರಾದ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಹ್ಯಾಗೆ ಒಪ್ಪುತಿದೆ! ಎಲೈ ಹನುಮಂತನೆ, ಮಧುರವಚನಗಳನ್ನು ನುಡಿಯುವ ಸೀತಾದೇವಿಯು ಯಾವ ಸವಿನುಡಿಗಳನ್ನು ನುಡಿದಳು! ನನ್ನ ವಿರಹದಿಂದ ಹ್ಯಾಗೆ ಇದ್ದಾಳೆ! ವ್ಯಾಧಿಗ್ರಸ್ತನಾದವನು ಅಮೃತೋಪಮಾನವಾದ ದಿವ್ಯೌಷಧವನ್ನು ತೆಗೆದುಕೊಂಡು ಹ್ಯಾಗೆ ಜೀವಿಸುವನೋ ಹಾಗೇ ನಾನು ಆ ದೇವಿಯು ನಿನ್ನಕೂಡೆ ಹೇಳಿಕಳುಹಿಸಿದ ಮೃದುನುಡಿಗಳನ್ನು ಕೇಳಿ ಜೀವಿಸಿಕೊಂಡಿರುವೆನು; ಆಕೆಯು ಹೇಳಿಕಳುಹಿಸಿದ ಮಾತುಗಳನ್ನು ಹೇಳು” ಎಂದು ಕೇಳಿ ಚೂಡಾಮಣಿಯನ್ನು ತೆಗೆದುಕೊಂಡು ಮತ್ತುಮತ್ತೂ ನೋಡುತಿದ್ದನು

## ೬೭ನೇ ಅಧ್ಯಾಯ.

### ಹನುಮಂತನು ಸೀತಾದೇವಿಯ ವೃತ್ತಾಂತವನ್ನು ಹೇಳಿದ್ದು.

ಆ ಬಳಿಕ ಹನುಮಂತನು “ಎಲೈ ಶ್ರೀರಾಮನೆ ಕೇಳು: ನೀನು ಚಿತ್ರಕೂಟಪರ್ವತದಲ್ಲಿರುವಾಗ ಕಾಕಾಸುರನುಬಂದು ಲೂಟೀಮಾಡಿದ ವೃತ್ತಾಂತವನ್ನು ಮೊದಲು ಸಂಕ್ಷೇಪವಾಗಿ ಹೇಳಿದೆನು; ಆ ವೃತ್ತಾಂತವನ್ನು ನಿನ್ನ ಚಿತ್ತಕ್ಕೆ ಸರಿಬರುವ ಮರ್ಯಾದೆಯಲ್ಲಿ ಹೇಳುತ್ತೇನೆ ಕೇಳು: ನೀವು ಒಂದುದಿವಸ ಸುಖನಿದ್ರೆ ಮಾಡಿಕೊಂಡಿರುವ ಸಮಯದಲ್ಲಿ ಆಕೆಯು ನಿನಗಿಂತಲು ಮೊದಲೇ ಎದ್ದು ಕುಳಿತಿರಲು ಆಗ ಒಂದು ಕಾಗೆಯು ಬಂದು ಸೀತಾದೇವಿಯ ಎದೇಗಟ್ಟಿನಲ್ಲಿ ಎರಡುಸಾರಿ ಉಗುರುಗಳಿಂದ ಗೀರಿಹೋಯಿತಂತೆ, ಆಮೇಲೆ ಸೀತಾದೇವಿಯು ಕೆಲವುಹೊತ್ತು ಮಲಗಿರಲಾಗಿ ನೀನು ಆ ದೇವಿಯನ್ನೆಬ್ಬಿಸಿ ಆಕೆಯ ತೊಡೆಯಮೇಲೆ ಮಲಗಿರುವಸಮಯದಲ್ಲಿ ಆ ವಾಯಸವು ತಿರಿಗೂ ಬಂದು ಆಕೆಯ ಸ್ತನಮಧ್ಯವನ್ನು ತನ್ನ ಕಾಲುಗುರುಗಳಿಂದ ಬಹಳವಾಗಿ ವ್ಯಥೆಪಡಿಸಲು ಆ ಘಾಯದಿಂದ ರಕ್ತಬಿಂದುಗಳು ನಿನ್ನಮೇಲೆ ಬಿದ್ದವಂತೆ, ಆಗ ಭಯಪಟ್ಟು ತನ್ನ ತೊಡೆಯಮೇಲೆ ಮಲಗಿದ್ದ ನಿನ್ನನ್ನೆಬ್ಬಿಸಿದಳಂತೆ; ನೀನು ಎದ್ದು ಆಕೆಯ ಎದೆಯ ಘಾಯವನ್ನು ಕಂಡು ಮೆಟ್ಟಿಸಿಕೊಂಡ ಸರ್ಪನಂತೆ ಅತ್ಯಂತ ರೋಷಯುಕ್ತನಾಗಿ ಆ ದೇವಿಯನ್ನು ಕಂಡು ‘ನಿನ್ನ ಸ್ತನಮಧ್ಯವನ್ನು ಘಾಯಮಾಡಿದ ದುರಾತ್ಮನ್ಯಾರು; ಕಟಕಟಾ! ಲೋಕದಲ್ಲಿ ಐದುಹೆಡೆಯ ಸರ್ಪನಕೂಡೆ ಸೆಣಸುವವರೂ ಇದ್ದಾರಲ್ಲಾ!’ ಎಂದು ನುಡಿದು ಆ ವಾಯಸವನ್ನು ಕಂಡೆಯಂತೆ; ಆ ವಾಯಸವು ಉಗುರುಗಳು ರಕ್ತಮಸಗಿ ಭಯವಿಲ್ಲದೆ ನಿನ್ನ ಸಮ್ಮುಖದಲ್ಲಿ ಕುಳಿತಿರಲು ನೀನು ಜ್ಞಾನದೃಷ್ಟಿಯಿಂದ ನೋಡಿ ಆ ವಾಯಸವು ಕಾಕಾಸುರನೆಂಬ ದೇವೇಂದ್ರನ ಮಗನೆಂತಲೂ ಗಮನದಲ್ಲಿ ವಾಯುವೇಗಕ್ಕೆ ಸಮಾನವಾದವನೆಂತಲೂ ಭೂಮಿಯಲ್ಲಿ ಚರಿಸುವ ರಾಕ್ಷಸನೆಂತಲೂ ತಿಳಿದು ಉಗ್ರದೃಷ್ಟಿಯಿಂದ ನೋಡಿ ನಿನ್ನ ದರ್ಭೆಯ ಹಾಸಿಗೆಯಿಂದ ಒಂದು ದರ್ಭೆಯ ತೃಣವನ್ನು ತೆಗೆದು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿ ಕಾಕಾಸುರನಮೇಲೆ ಪ್ರಯೋಗಿಸಿದೆಯಂತೆ; ಆ ದರ್ಭಾಸ್ತ್ರವು ಕಾಲಾಗ್ನಿಯಂತೆ ಜ್ವಲಿಸುತ ಆ ವಾಯಸಕ್ಕಭಿಮುಖವಾಗಿ ಹೋಗಲು ಅದು ದರ್ಭಾಸ್ತ್ರವನ್ನು ಕಂಡು ಅಂಜಿಕೊಂಡು ಹಾರಲು ದರ್ಭಾಸ್ತ್ರವು ಹಿಂದಟ್ಟಿಕೊಂಡು ಹೋಯಿತಂತೆ; ಆ ವಾಯಸವು ಮೂರುಲೋಕಗಳಲ್ಲಿಯೂ ಸಂಚರಿಸಿ ಬೆಂಬಿಡದೇ ಅಟ್ಟಿಕೊಂಡು ಬರುತಿದ್ದ ಆ ಅಸ್ತ್ರದಿಂದ

ಎಲ್ಲಿಯೂ ಅಭಯವನ್ನು ಕಾಣದೆ ಕಡೆಗೆ ನಿನ್ನ ಸಮೀಪಕ್ಕೆ ಬಂದು ಬಿದ್ದು ನಿನ್ನನ್ನೇ ಶರಣುಹೊಕ್ಕಿತಂತೆ, ನೀನು ಕೃಪೆಯಿಂದ ಅದರ ಅಪರಾಧವನ್ನು ಕ್ಷಮಿಸಿಕೊಂಡು ಜೀವಹಿಂಸೆ ಮಾಡದೆ ಉಳಿಸಿ ಬ್ರಹ್ಮಾಸ್ತ್ರಕ್ಕೆ ಅದರ ಒಂದು ಕಣ್ಣನ್ನು ಆಹಾರವಾಗಿ ಕೊಡಿಸಿ ರಕ್ಷಣೆಮಾಡಿದೆಯಂತೆ; ಆಮೇಲೆ ಆ ಕಾಕಾಸುರನು ನಿನಗೆ ನಮಸ್ಕಾರವನ್ನು ಮಾಡಿ 'ಇಂಥಾ ಧರ್ಮಾತ್ಮನನ್ನು ಪಡೆದ ದಶರಥರಾಯನಿಗೂ ನಮಸ್ಕಾರ!' ಎಂದು ನಮಸ್ಕರಿಸಿ ಕಳುಹಿಸಿಕೊಂಡು ತನ್ನ ಲೋಕಕ್ಕೆ ಹೋದನಂತೆ! 'ಹೀಗೆ ತನಿಗೆ ದ್ರೋಹವನ್ನೆಣಿಸಿದ ಒಂದು ಕಾಗೆಯಲ್ಲಿ ಬ್ರಹ್ಮಾಸ್ತ್ರಪ್ರಯೋಗವನ್ನು ಮಾಡಿದ ಕೃಪಾಳುವಾದ ಶ್ರೀರಾಮನು ಈ ಮರ್ಯಾದೆಯಲ್ಲಿ ಬಾಧೆಪಡುವ ನನ್ನನ್ನು ಯಾವಕಾರಣದಿಂದ ಉಪೇಕ್ಷೆಮಾಡಿಕೊಂಡಿಧಾನೆ!' ಎಂದು ಕೇಳಿದಳು. ಮತ್ತು 'ಶ್ರೀರಾಮನಿಗೆ ಇದಿರಾಗಿ ದೇವಾಸುರ ಗಂಧರ್ವ ನಾಗ ಯಕ್ಷ ಕಿನ್ನರ ಕಿಂಪುರುಷಾದಿಗಳಲ್ಲಿ ಒಬ್ಬರೂ ರಣರಂಗದಲ್ಲಿ ನಿಲ್ಲಲಾರರು; ಅಂಥಾ ಬಲವುಳ್ಳ ಸ್ವಾಮಿಯು ನನ್ನ ಮೇಲೆ ಕೃಪೆಯಿಟ್ಟ ಪಕ್ಷದಲ್ಲಿ ತನ್ನ ಅಮೋಘವಾದ ಬಾಣಗಳಿಂದ ರಾವಣನನ್ನು ಸಂಹರಿಸಿ ನನ್ನನ್ಯಾಕೆ ಕರದುಕೊಂಡು ಹೋಗನು! ಸಮಸ್ತ ಶತ್ರುಸಂಹಾರಕನಾಗಿ ಪುರುಷೋತ್ತಮನಾದ ಲಕ್ಷ್ಮಣನಾದರೂ ಶ್ರೀರಾಮನ ಆಜ್ಞೆಯಿಂದ ರಾವಣನನ್ನು ಕೊಂದು ನನ್ನನ್ಯಾಕೆ ರಕ್ಷಿಸನು! ದೇವಾಸುರರಿಗೂ ಅಸಾಧ್ಯರಾಗಿ ಅಪರಿಮಿತ ಬಲಪರಾಕ್ರಮವುಳ್ಳವರಾಗಿ ವಾಯ್ವಗ್ನಿಗಳಿಗೆ ಸಮಾನರಾದ ರಾಮಲಕ್ಷ್ಮಣರು ನನ್ನಲ್ಲಿ ಉಪೇಕ್ಷೆಮಾಡಿಕೊಂಡಿರುವದರಿಂದ ನನಿಗೆ ಜನ್ಮಾಂತರದಲ್ಲಿ ಮಾಡಿದ ಪಾಪವಿಶೇಷವು ಮಿಕ್ಕಿರಬೇಕು; ಈ ಅರ್ಥದಲ್ಲಿ ಸಂಶಯವಿಲ್ಲ, ಕಟಕಟಾ! ರಾಮಲಕ್ಷ್ಮಣರಿಬ್ಬರೂ ನನ್ನನ್ಯಾವಕಾರಣದಿಂದ ಉಪೇಕ್ಷೆಮಾಡಿಕೊಂಡಿಧಾರೋ ತಿಳಿಯಲಿಲ್ಲ!' ಎಂದು ಅತ್ಯಂತ ದೈನ್ಯಭಾವದಿಂದ ನುಡಿದಳು

"ಆ ಮಾತುಗಳನ್ನು ಕೇಳಿ ನಾನು ಮಹಾವ್ಯಥೆಪಟ್ಟು ಆ ದೇವಿಯನ್ನು ಕುರಿತು 'ಎಲೈ ಸೀತಾದೇವಿಯೇ, ನನ್ನ ಸತ್ಯದಫಲ ಸಾಕ್ಷಿಯಾಗಿ ಶ್ರೀರಾಮನು ನಿನ್ನ ವಿರಹಶೋಕದಿಂದ ಹಂಬಲಿಸುತಿಧಾನೆ; ಆತನ ದುಃಖವನ್ನು ಕಂಡು ಲಕ್ಷ್ಮಣನೂ ದುಃಖಪಡುತಿಧಾನೆ, ದೈವಾಧೀನದಿಂದ ಅತ್ಯಂತ ಪ್ರಯಾಸಪಟ್ಟು ನಿನ್ನನ್ನು ಕಂಡೆನು; ಇನ್ನು ನಾನು ಹೋಗಿ ಶ್ರೀರಾಮನ ಸಂಗಡ ನಿನ್ನ ವರ್ತಮಾನವನ್ನು ಹೇಳಿದರೆ ಆತನು ಇನ್ನು ಕಾಲವಿಳಂಬವನ್ನು ಮಾಡುವದಿಲ್ಲ; ಇಷ್ಟುದಿವಸಗಳು ನೀನಿರುವ ದೇಶವನ್ನರಿಯದೆ ಮುಂದುಕಾಣದೇ ಹಂಬಲಿಸುತಿದ್ದನು, ಇನ್ನು ನನ್ನ ವಾರ್ತೆಯನ್ನು ಕೇಳಿದಕ್ಷಣದಲ್ಲೇ ದಂಡೆತ್ತಿ ಬಂದು ಲಂಕಾಪಟ್ಟಣವನ್ನು ಭಸ್ಮಮಾಡಿ ನಿನ್ನ ದುಃಖವನ್ನು ಪರಿಹರಿಸುವನು; ಈ ಕುರುಹಿನ ಮಾತನ್ನು ಕೇಳಿ ನೀನು ಕೊಟ್ಟ ಚೂಡಾಮಣಿಯನ್ನು ಕಂಡನಾದರೆ ಆಕ್ಷಣದಲ್ಲೇ ಬಂದು ರಾಕ್ಷಸಾಧಮನಾದ ರಾವಣನನ್ನು ಪುತ್ರಮಿತ್ರ ಸಹೋದರ ಜ್ಞಾತಿ ಬಾಂಧವರ ಸಹಿತವಾಗಿ ಸಂಹರಿಸಿ ನಿನ್ನನ್ನು ಅಯೋಧ್ಯಾಪಟ್ಟಣಕ್ಕೆ ಕರದುಕೊಂಡು ಹೋಗುವನು; ಈ ಅರ್ಥದಲ್ಲಿ ಸಂಶಯವಿಲ್ಲ' ಎಂದು ಹೇಳಿ ಆ ದೇವಿಯು ಕೊಟ್ಟ ಚೂಡಾಮಣಿಯನ್ನು ತೆಗೆದುಕೊಂಡು ಆಕೆಗೆ ನಮಸ್ಕರಿಸಿ ಅಂತರಿಕ್ಷಮಾರ್ಗದಲ್ಲಿ ನೆಗೆದುಬರಬೇಕೆಂದು ನನ್ನ ಶರೀರವನ್ನು ಬೆಳಸಿಕೊಳ್ಳುತಿದ್ದೆನು.

"ಆ ಸಮಯದಲ್ಲಿ ಸೀತಾದೇವಿಯು ಮತ್ತೂ ನನ್ನನ್ನು ನೋಡಿ ಕಣ್ಣೀರು ತುಂಬಿಕೊಂಡು ಬಿಕ್ಕುತ 'ಎಲೈ ಹನುಮಂತನೆ, ಮಹಾತ್ಮರಾದ ರಾಮಲಕ್ಷ್ಮಣರು ಯಾವಪ್ರಕಾರದಲ್ಲಾದರೂ ನನ್ನ ಬಂಧನವನ್ನು ಬಿಡಿಸಿ ಈ ರಾಕ್ಷಸರ ನಿಷ್ಠುರವಚನಗಳಿಂದಲೂ ಹೆದರಿಕೆಗಳಿಂದಲೂ ಭಯಪಟ್ಟಿರುವ ನನ್ನ ಕಂಗೆಡಿಕೆಯನ್ನು ಪರಿಹರಿಸಿ ನನ್ನನ್ನು ಕರದುಕೊಂಡು ಹೋಗುವಹಾಗೆ ಮಾಡು; ಸುಗ್ರೀವನನ್ನೂ ಆತನ ಬಳಿಯಲ್ಲಿರುವ ಪ್ರಧಾನರನ್ನೂ ಕ್ಷೇಮವನ್ನು ಕೇಳಿದೆನೆಂದು ಹೇಳು; ನನ್ನ ದುಃಖವನ್ನು ಪರಿಹರಿಸುವದಕ್ಕೆ ನೀನೇ ಸಮರ್ಥನು!' ಎಂದು ನನಿಗೆ ಅನೇಕ ಉಪಚಾರಗಳನ್ನು ನುಡಿದು ಕಳುಹಿಸಿದಳು. ಇದೀಗ ಸೀತಾದೇವಿಯು ಹೇಳಿಕಳುಹಿಸಿದ ವೃತ್ತಾಂತವು; ಈ ಮಾತುಗಳನ್ನು ನಿನ್ನ ಮನಸ್ಸಿಗೆ ತಂದುಕೊಂಡು ಮುಂದಣ ಕಾರ್ಯಸ್ಥಿತಿಯನ್ನು ಯೋಚಿಸಿ ಯಾವಪ್ರಕಾರದಲ್ಲಾದರು ಸೀತಾದೇವಿಯ ಬಂಧನವನ್ನು ಬಿಡಿಸು" ಎಂದು ಹೇಳಿದನು.

## ೬೮ ನೇ ಅಧ್ಯಾಯ.

### ಹನುಮಂತನು ಸೀತಾದೇವಿಯ ವೃತ್ತಾಂತವನ್ನು ಹೇಳಿದ್ದು.

ಮತ್ತೂ ಹನುಮಂತನು ಶ್ರೀರಾಮನನ್ನು ನೋಡಿ "ಎಲೈ ಸ್ವಾಮಿಯೇ, ಮತ್ತು ಸೀತಾದೇವಿಯು ನನ್ನನ್ನು ಕರೆದು 'ಎಲೈ ಹನುಮಂತನೆ, ನೀನು ಶ್ರೀರಾಮನಿಗೆ ಸ್ನೇಹಾತಿಶಯದಿಂದ ನಾನಾಪ್ರಕಾರದಲ್ಲಿ ಒಡಂಬಡಿಕೆ ಹೇಳಿ ಆತನು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಬಂದು ರಾವಣನನ್ನು ಜಯಿಸಿ ಲಂಕಾಪಟ್ಟಣವನ್ನು ದಹಿಸಿ ನಿರ್ನಾಮವಾಗಿ ಮಾಡಿ ನನ್ನನ್ನು ಕರೆದುಕೊಂಡು ಹೋಗುವಹಾಗೆ ಯತ್ನಮಾಡು! ನೀನು ನನ್ನಿಂದ ಅತಿಥಿಪೂಜೆಯನ್ನು ಪಡೆದು ಒಂದುರಾತ್ರಿ ಇಲ್ಲಿದ್ದು ಆಯಾಸವನ್ನು ಪರಿಹರಿಸಿಕೊಂಡು ನನ್ನ ಕೂಡೆ ಸಂಭಾಷಣೆ ಮಾಡಿಕೊಂಡಿದ್ದೆಯಾದರೆ ನನ್ನ ಮನೋವ್ಯಥೆಯು ಸ್ವಲ್ಪ ಪರಿಹಾರವಾಗುವದು, ನನಿಗೆ ಅಂಥಾ ಭಾಗ್ಯವಿಲ್ಲದ್ದರಿಂದ ಈ ವನದಲ್ಲಿ ಒಬ್ಬರಿಗೂ ನಿನ್ನ ಶರೀರವನ್ನು ಕಾಣಿಸದೆ ಹಣ್ಣು ಹಂಪಲುಗಳನ್ನು ಆಹಾರವಮಾಡಿಕೊಂಡು ಈ ರಾತ್ರಿಯನ್ನು ಕಳೆದು ನಾಳೆ ಹೋಗು; ನೀನು ಹೋಗಿ ತಿರುಗಿ ಬರುವಪರಿಯಂತರ ನನ್ನ ಪ್ರಾಣಗಳು ಇರುವವೋ ಇಲ್ಲವೋ ತಿಳಿಯದು, ನೀನು ಶೀಘ್ರನಾಗಿ ಬಾರದಿದ್ದರೆ ನಿನ್ನನ್ನು ಕಾಣದೆ ದುಃಖದಮೇಲೆ ದುಃಖವುಂಟಾಗುವದು! ಎಲೈ ಹನುಮಂತನೆ, ನನ್ನ ಮನಸ್ಸಿನಲ್ಲಿ ಒಂದು ಸಂಶಯವಿಧೆ, ಸುಗ್ರೀವನ ಕಪಿನಾಯಕರು ನೂರುಗಾವುದದಾರಿ ಅಗಲವುಳ್ಳ ಸಮುದ್ರವನ್ನು ಹ್ಯಾಗೆ ದಾಟಿಬರುವರು! ಕಪಿಸೇನೆಗಳು ಹ್ಯಾಗೆ ದಾಟಿಬರುವವು? ರಾಮಲಕ್ಷ್ಮಣರು ಸಮುದ್ರವನ್ನು ದಾಟಿಬರುವ ಉಪಾಯವು ಯಾವದು? ಅಂತರಿಕ್ಷಮಾರ್ಗದಲ್ಲಿ ಬರುವರಂದರೆ—ಲೋಕದಲ್ಲಿ ನೀನು ಗರುಡನು ವಾಯುವು ಈ ಮೂವರಿಗಲ್ಲದೆ ಮತ್ತೊಬ್ಬರಿಗೆ ಅಂತರಿಕ್ಷಮಾರ್ಗದಲ್ಲಿ ಸಂಚಾರವಿಲ್ಲ, ಕಾರ್ಯನಿರ್ವಾಹ ಮಾಡುವುದರಲ್ಲಿ ಈ ಸಂಶಯವಿರುವದರಿಂದ ಇದಕ್ಕೆ ಯಾವ ಉಪಾಯವನ್ನು ಕಂಡೆ? ನೀನೊಬ್ಬನೇ ಈ ಕಾರ್ಯವನ್ನು ಸಾಧಿಸುವದಕ್ಕೆ ಸಮರ್ಥನು; ನೀನು ಬಲಪರಾಕ್ರಮಗಳಲ್ಲಿ ಮಹಾಪ್ರಸಿದ್ಧನು; ಹಾಗಾದರೂ ಲೋಕದಲ್ಲಿ '—ರಾವಣನು ಶ್ರೀರಾಮನನ್ನು ಮೋಸಮಾಡಿದ ಸೀತಾದೇವಿಯನ್ನಪಹರಿಸಿಕೊಂಡು ಹೋದರೆ ರಘುನಾಥನು ರಾವಣನು ಕಾಣದಹಾಗೆ ಸೀತಾದೇವಿಯನ್ನು ಕಳವಿನಿಂದ ಎತ್ತಿಕೊಂಡು ಬರುವಹಾಗೆಮಾಡಿದನು—' ಎಂಬ ಅಪವಾದವು ಬರುವದು; ಹಾಗಾಗದಹಾಗೆ '—ರಘುನಾಥನು ದಂಡೆತ್ತಿಬಂದು ರಾವಣನನ್ನು ಜಯಿಸಿ ಲಂಕಾಪಟ್ಟಣವನ್ನು ದಹಿಸಿ ಸೀತಾದೇವಿಯನ್ನು ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋದನು—' ಎಂಬ ಕೀರ್ತಿಯು ಹ್ಯಾಗೆ ಬರುವದೋ ಆ ಮರ್ಯಾದೆಯಲ್ಲಿ ಯತ್ನಮಾಡು' ಎಂದು ಹೇಳಿದಳು.

"ನಾನು ಆ ದೇವಿಯ ಅಭಿಪ್ರಾಯವನ್ನು ಅರಿತು ಆಕೆಯನ್ನು ಕುರಿತು 'ಎಲೈ ಸೀತಾದೇವಿಯೆ, ಸಮಸ್ತ ಕಪಿನಾಯಕರಿಗೂ ಒಡೆಯನಾದ ಸುಗ್ರೀವನು ಮಹಾ ಸತ್ವಸಾಹಸಗಳುಳ್ಳವನು; ಅವಶ್ಯವಾಗಿ ರಾವಣನನ್ನು ಜಯಿಸಿ ನಿನ್ನನ್ನು ಶ್ರೀರಾಮನ ವಶಕ್ಕೆ ಒಪ್ಪಿಸಿ ನಿಮ್ಮನ್ನು ಅಯೋಧ್ಯಾಪಟ್ಟಣಕ್ಕೆ ಕರೆದುಕೊಂಡು ಹೋಗಿ ಪಟ್ಟಾಭಿಷೇಕವನ್ನು ಮಾಡಬೇಕೆಂದು ನಿಶ್ಚಯಿಸಿಕೊಂಡಿಧಾನೆ, ಆತನ ಸಮೀಪದಲ್ಲಿರುವ ಕಪಿನಾಯಕರು ಸತ್ವಸಾಹಸ ಬಲಪರಾಕ್ರಮಗಳಲ್ಲಿ ಪ್ರಸಿದ್ಧರಾದವರು; ಸುಗ್ರೀವನು ಮನಸ್ಸಿನಲ್ಲೆಣಿಸುವ ಕಾರ್ಯವನ್ನು ಸಾಧ್ಯಮಾಡುವಂಥಾವರು; ಗಮನದಲ್ಲಿ ವಾಯುವೇಗ ಮನೋವೇಗವುಳ್ಳವರು; ಆ ಕಪಿನಾಯಕರಿಗೆ ಪಾತಾಳಲೋಕದಲ್ಲಿಯೂ ಸ್ವರ್ಗಲೋಕದಲ್ಲಿಯೂ ಸಂಚರಿಸುವದರಲ್ಲಿ ಎಲ್ಲಿಯೂ ತಡೆಯಿಲ್ಲ; ಎಷ್ಟು ದೊಡ್ಡಕಾರ್ಯಬಂದರೂ ಕಂಗೆಡುವವರಲ್ಲ, ಅನೇಕಸಾರಿ ಅಂತರಿಕ್ಷಮಾರ್ಗದಲ್ಲಿಯೇ ಭೂಪ್ರದಕ್ಷಿಣವನ್ನು ಮಾಡಿ ಬಂದರು; ಆ ಕಪಿನಾಯಕರಲ್ಲಿ ನನಿಗಿಂತ ಹೆಗ್ಗಳವಾದವರೂ ನನಿಗೆ ಸಮಾನವಾದವರೂ ಅಲ್ಲದೆ ನನಿಗಿಂತ ಕಡಿಮೆಯಾದವರು ಒಬ್ಬರೂ ಇಲ್ಲ; ನನ್ನಂಥಾವನು ಇಲ್ಲಿಗೆ ಬಂದಮೇಲೆ ಅಧಿಕ ಬಲವಂತರಾದ ಕಪಿನಾಯಕರು ಬರುವದರಲ್ಲಿ ಸಂಶಯವೇನು! ಕಪಿರಾಜನಾದ ಸುಗ್ರೀವನು ಬಲಹೀನರಾದವರನ್ನು ಇಲ್ಲಿಗೆ ಕಳುಹಿಸನು; ಆದ್ದರಿಂದ ಆ ಸಂಶಯವನ್ನು

ಬಿಟ್ಟು ನಿನ್ನ ಮನಸ್ಸಿಗೆ ಹರ್ಷವುಂಟುಮಾಡಿಕೊ; ಆ ಕಪಿನಾಯಕರು ದಂಡೆತ್ತಿ ಬಂದೇಸಾರಿ ನೆಗೆದು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಬರಲಾಪುವರು; ಉದಯಾಚಲವನ್ನೈದಿದ ಸೂರ್ಯಚಂದ್ರರಂತೆ ನನ್ನ ಹೆಗಲಮೇಲೇರಿಕೊಂಡು ಇಲ್ಲಿಗೆ ಬಂದು ಈ ಪಟ್ಟಣವನ್ನು ಮುತ್ತಿಗೆಹಾಕಿ ಊರುಬಾಗಲಲ್ಲಿ ಅಡ್ಡಗಟ್ಟಿಕೊಂಡಿರುವ ರಾಮಲಕ್ಷ್ಮಣರನ್ನು ನೀನು ಕಾಣುವೆ; ಲಂಕಾಪಟ್ಟಣವನ್ನು ಸುತ್ತಿಕೊಂಡು ಸಿಂಹಗಳಹಾಗೆ ಪರಾಕ್ರಮವುಳ್ಳವರಾಗಿ ನೀರುಂಡ ಮೇಘಗಳಂತೆ ಶರೀರಾಕೃತಿಯುಳ್ಳವರಾಗಿ ಉಗುರು ದಂತಗಳೇ ಆಯುಧಗಳಾಗುಳ್ಳವರಾದ ಕಪಿನಾಯಕರ ಗರ್ಜನೆಯ ಧ್ವನಿಯನ್ನು ನೀನು ಕೇಳಿ ಮನೋಹರ್ಷವನ್ನು ಪಡೆಯುವೆ, ನಿನ್ನ ಪ್ರಾಣಕಾಂತನಾದ ರಘುನಾಥನು ಹದಿನಾಲ್ಕು ವರುಷ ವನವಾಸವೆಂಬ ಮಿತಿಯು ತುಂಬಿ ರಾವಣನನ್ನು ಜಯಿಸಿ ನಿನ್ನನ್ನು ಕರದುಕೊಂಡು ಅಯೋಧ್ಯಾಪಟ್ಟಣಕ್ಕೆ ಹೋಗಿ ಪಟ್ಟಾಭಿಷೇಕವನ್ನುಮಾಡಿಕೊಳ್ಳುವದನ್ನು ನೀನು ಕಾಣುವೆ' ಎಂದು ಅನೇಕ ಸಂತಮನ್ನಣೆ ಶುಭವಾಕ್ಯಗಳನ್ನುಹೇಳಿದೆನು; ಆ ಮಾತುಗಳನ್ನುಕೇಳಿ ಸೀತಾದೇವಿಯು ತನ್ನಮನಸ್ಸಿಗೆ ಹರ್ಷವನ್ನು ಮಾಡಿಕೊಂಡು ನಿನ್ನ ವಿರಹಶೋಕತಾಪವನ್ನು ಕ್ಷಮಿಸಿಕೊಂಡು ಸ್ವಸ್ಥಚಿತ್ತೆಯಾದಳು" ಎಂದು ನುಡಿದನು.

ಎಲೈ ಕುಶಲವರುಗಳಿರಾ, ಈಪ್ರಕಾರದಲ್ಲಿ ಹನುಮಂತನು ಸಮುದ್ರವನ್ನು ದಾಟಿ ಲಂಕಾಪಟ್ಟಣಕ್ಕೆ ಹೋಗಿ ಅಶೋಕವನದಲ್ಲಿ ಸೀತಾದೇವಿಯನ್ನು ಕಂಡು ಅಶೋಕವನವನ್ನು ಮುರಿದು ಅಕ್ಷಯಕುಮಾರನು ಮೊದಲಾದ ರಾಕ್ಷಸರನ್ನು ಸಂಹರಿಸಿ ಇಂದ್ರಜಿತ್ತನ ಬ್ರಹ್ಮಾಸ್ತ್ರದಿಂದ ಕಟ್ಟುಬಿದ್ದು ರಾವಣನನ್ನು ಕಂಡು ಮಾತಾಡಿ ಲಂಕಾಪಟ್ಟಣವನ್ನು ದಹಿಸಿ ಸೀತಾದೇವಿಯು ಕೊಟ್ಟ ಕುರುಹನ್ನು ತೆಗೆದುಕೊಂಡು ತಿರುಗಿ ಸಮುದ್ರವನ್ನು ದಾಟಿ ಕಪಿನಾಯಕರೊಡನೆ ಕೂಡಿ ಮಧುವನವನ್ನು ಸೂರೆಗೊಂಡು ಕಿಷ್ಕಿಂಧಾಪಟ್ಟಣಕ್ಕೆ ಬಂದು ರಾಮಲಕ್ಷ್ಮಣ ಸುಗ್ರೀವರನ್ನು ಸಂಧಿಸಿ ಅಭಿವಂದಿಸಿ ಸೀತಾದೇವಿಯು ಕೊಟ್ಟ ಕುರುಹಿನ ಚೂಡಾಮಣಿರತ್ನವನ್ನು ಕೊಟ್ಟು ಆ ದೇವಿಯು ಹೇಳಿಕಳುಹಿಸಿದ ಕುರುಹಿನ ಮಾತುಗಳನ್ನು ಬಿನ್ನವಿಸಿ ಶ್ರೀರಾಮನ ಮನಸ್ಸಿಗೆ ಸಂತೋಷವುಂಟುಮಾಡಿ ತಾನೂ ಸ್ವಸ್ಥಚಿತ್ತನಾಗಿದ್ದನು—ಎಂದು ವಾಲ್ಮೀಕಿಮುನೀಶ್ವರನು ನುಡಿದನು.

---

ಇಂತು ಉತ್ತಮ ಕ್ಷತ್ರಿಯ ಕುಲೋದ್ಭವ ಬಿರುದೆಂತೆಂಬರಗಂಡ ಗಜಬೇಂಟೆಕಾರ ಸಮಸ್ತಶತೃಸಂಘ ಜೀಮೂತ ಜಂಝಾ
ಮಾರುತ ಪ್ರತ್ಯರ್ಥಿ ಪೃಥ್ವೀಪತಿ ವನ ದಾವಾನಲ ಸಮಸ್ತ ವಿದ್ವಜ್ಜನ ಸಮುದಾಯ ಕಲ್ಪಭೂಜಾತ ಆಶ್ರಿತಜನ
ಸುರಧೇನು ಕಾಮಿನೀಜನ ನೂತನ ಪಂಚಬಾಣ ಚೌಷಷ್ಟಿಕಲಾಪ್ರವೀಣ ಮಹಿಷಾಪುರವರಾಧೀಶ ಚಾಮ
ರಾಜವಂಶೋದ್ಧಾರಕ ತಿಮ್ಮರಾಜತನೂಜ ನರಸರಾಜ ಗರ್ಭದುಗ್ಧ ಸಿಂಧು ಸುಧಾಕರ ಶ್ರೀಲಕ್ಷ್ಮೀ
ಕಾಂತ ಪಾದಾರವಿಂದ ದ್ವಂದ್ವನಿಷ್ಯಂದಾಮಂದ ಮಕರಂದ ಬಿಂದುಸಂದೋಹಾಸ್ವಾದನ
ನಿರ್ಮಲೀಕೃತಾಂತಃಕರಣ ತ್ರಿಣಯನೇಶ್ವರ ಸದ್ಭಕ್ತಿಯುಕ್ತ ಮಹಾಬಲಾಚಲಾ
ವಾಸ ಶ್ರೀಚಾಮುಂಡಿಕಾಂಬಾ ಸದ್ಭಕ್ತಿಮಂಡಿತರಾದ ಶ್ರೀಚಾಮರಾಜ ಒಡೆ
ಯರವರಿಂದ ಲೋಕೋಪಕಾರಾರ್ಥವಾಗಿ ಬುಧಜನ ಸಮ್ಮತಿಯಿಂದ
ಕರ್ಣಾಟಕಭಾಷಾವಚನ ರಚನೆಯಾದ ಶ್ರೀಚಾಮರಾಜೋಕ್ತಿ
ವಿಲಾಸವೆಂಬ ಕನ್ನಡ ರಾಮಾಯಣದಲ್ಲಿ

# ಸುಂದರಕಾಂಡ ಸಮಾಪ್ತಿ.

---

ಚಂದ್ರಬಿಂಬಸಮಾಕಾರಂ ವಾಂಛಿತಾರ್ಥಪ್ರದಾಯಕಂ ।
ಹನೂಮತ್ಸೇವಿತಂಧ್ಯಾಯೇ ತ್ಸೌಂದರೇಕಾಂಡ ಉತ್ತಮೇ ॥

---

ಶ್ರೀಚಾಮುಂಡೇಶ್ವರಿ ಪ್ರೆಸ್ ಲಾಲ್‌ಬಾಗ್ ರೋಡ್, ಬೆಂಗಳೂರು—1894.